




## ಗುಲ್ವಾಡಿ ವೆಂಕಟರಾವ್

ಅವರ ಕಾದಂಬರಿ

# ಇಂದಿರಾಬಾಯಿ

ಅಥವಾ

# ಸದ್ಧರ್ಮ ವಿಜಯವು



ಕನ್ನಡ ಪುಸ್ತಕ ಪ್ರಾಧಿಕಾರ

ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು–560 002

# ಇಂದಿರಾಬಾಯಿ

## ಅಥವಾ

# ಸದ್ಧರ್ಮ ವಿಜಯವು

ಇ–ಪುಸ್ತಕ

## ಗುಲ್ವಾಡಿ ವೆಂಕಟರಾವ್



ಕನ್ನಡ ಪುಸ್ತಕ ಪ್ರಾಧಿಕಾರ
ಬೆಂಗಳೂರು

INDIRA BHAYI ATHAVA SDDARMA VIJAYAVU- A Novel Written by : shri Gulwadi venkatarao Published by : Sowbhagya, Administrative Officer, Kannada Pustaka pradhikara, Kannada Bhavana, J.C.Road, Bengaluru-560 002

ಪ್ರಥಮ ಮುದ್ರಣ : ೨೦೧೮
ಪುಟಗಳು : ೨೧೭

ಉಚಿತ ಓದಿಗಾಗಿ

First Print : 2018
Page : 217

**ಪ್ರಕಾಶಕರು**
**ಸೌಭಾಗ್ಯ**
ಆಡಳಿತಾಧಿಕಾರಿ
ಕನ್ನಡ ಪುಸ್ತಕ ಪ್ರಾಧಿಕಾರ,
ಕನ್ನಡ ಭವನ, ಜೆ.ಸಿ.ರಸ್ತೆ,
ಬೆಂಗಳೂರು-560 002
☎ : 22107704 / 22484516
ಈಮೇಲ್: kannadappradhikara@gmail.com
ವೆಬ್ : www.kannadapustakapradhikara.com

**ಸಹಕಾರ**
**ಶ್ರೀ ಕೆ.ಎಸ್. ಮುರಳಿ**
**ವಸಂತ ಪ್ರಕಾಶನ**
**ನಂ.360, 10ನೇ ಬಿ ಮುಖ್ಯರಸ್ತೆ,**
**3ನೇ ಬ್ಲಾಕ್, ಜಯನಗರ,**
**ಬೆಂಗಳೂರು – 560001**
☎ : 080-22443996 / 9886399125
vasantha_prakashana@rediffmail.com

# ಅಧ್ಯಕ್ಷರ ನುಡಿ

ಕನ್ನಡ ಪುಸ್ತಕ ಪ್ರಾಧಿಕಾರವು ಕನ್ನಡ ಪರಂಪರೆಯ ಬೇರನ್ನು ಸುಭದ್ರಗೊಳಿಸುವ ನಿಟ್ಟಿನಲ್ಲಿ ಪುಸ್ತಕಗಳ ಪ್ರಕಟಣೆಗೆ ಮಾತ್ರ ಸೀಮಿತವಾಗದೇ, ಪುಸ್ತಕಗಳ ಉಚಿತ ವಿತರಣೆಗಾಗಿ ಸಗಟು ಖರೀದಿ ಯೋಜನೆ ಸೇರಿದಂತೆ ಹಲವಾರು ಮಹತ್ವದ ಯೋಜನೆಗಳನ್ನು ಹೊಂದಿದೆ. ಪುಸ್ತಕ ಸಂಸ್ಕೃತಿಯ ಪ್ರಸಾರದಲ್ಲಿ ಬಲವಾದ ಹೆಜ್ಜೆಗಳನ್ನೂರುತ್ತ, ಪ್ರಕಾಶಕರು – ಲೇಖಕರು – ಓದುಗರ ನಡುವೆ ಸೇತುವೆಯಂತೆ ಕಾರ್ಯ ನಿರ್ವಹಿಸುತ್ತಿದೆ. ೧೯೯೩ರಲ್ಲಿ ಪ್ರಾರಂಭವಾದ ಕನ್ನಡ ಪುಸ್ತಕ ಪ್ರಾಧಿಕಾರಕ್ಕೆ ಬೆಳ್ಳಿ ಹಬ್ಬದ ಸಂಭ್ರಮ, ಪ್ರಕಾಶಕರ ಕೈಪಿಡಿ, ಪ್ರಾಧಿಕಾರದ ಹೆಜ್ಜೆಗುರುತುಗಳ ಪ್ರಕಟಣೆಗಳೊಂದಿಗೆ, ದೇಸಿಜ್ಞಾನ ಪರಂಪರೆ, ಪ್ರಕಾಶಕರ ಸಮ್ಮೇಳನ, ಪುಸ್ತಕೋದ್ಯಮ ಚರಿತ್ರೆಯ ಕುರಿತು ಸಂಪುಟಗಳ ರಚನೆ ಮುಂತಾದ ಯೋಜನೆಗಳನ್ನು ಕೈಗೊಂಡಿದೆ. ಪ್ರೌಢಶಾಲಾ ವಿದ್ಯಾರ್ಥಿಗಳಿಗೆ 'ಅಚ್ಚುಮೆಚ್ಚಿನ ಪುಸ್ತಕ', ಕಾಲೇಜು ವಿದ್ಯಾರ್ಥಿಗಳಿಗೆ 'ಜಾಣ ಜಾಣೆಯರ ಬಳಗ' ಕಾರ್ಯಕ್ರಮಗಳೊಂದಿಗೆ, ಉದಯೋನ್ಮುಖ ಬರಹಗಾರರನ್ನು ಪ್ರೋತ್ಸಾಹಿಸುವ ಚೊಚ್ಚಲ ಕೃತಿಗಳಿಗೆ ಧನಸಹಾಯ ನೀಡುವುದನ್ನು ೩೦ ರಿಂದ ೫೦ ಬರಹಗಾರರಿಗೆ ಹೆಚ್ಚಿಸಲಾಗಿದೆ. ಕನ್ನಡ ಪುಸ್ತಕ ಪ್ರಾಧಿಕಾರದ ಯೋಜನೆಗಳಲ್ಲಿ ಸಾಹಿತ್ಯ ಲೋಕದ ಅಪರೂಪದ, ವಿಶೇಷವೆನಿಸುವ ಪುಸ್ತಕಗಳ ಪ್ರಕಟಣೆಯೂ ಒಂದು. ಬೆಳ್ಳಿಹಬ್ಬದ ಈ ಸಂದರ್ಭದಲ್ಲಿ ಮೊಟ್ಟಮೊದಲ ಇ–ಪುಸ್ತಕ ಪ್ರಕಟಿಸುತ್ತಿದ್ದೇವೆ.

ಗುಲ್ವಾಡಿ ವೆಂಕಟರಾಯರ 'ಇಂದಿರಾಬಾಯಿ' ಕನ್ನಡದ ಮೊದಲ ಕಾದಂಬರಿ. ೧೯ ನೇ ಶತಮಾನದ ಉತ್ತರಾರ್ಧದಲ್ಲಿ ವಿಧವಾ ವಿವಾಹ ಎಂದರೆ ಅದೊಂದು ಕ್ರಾಂತಿಕಾರಿ ಹೆಜ್ಜೆ. ಹಾಗಂತ ಈ ಕಾದಂಬರಿಯ ಕಥಾವಸ್ತು ಸರಳ ರೇಖೆಯಂತಿರದೆ, ಮನುಷ್ಯನ ಜಟಿಲ ಸ್ವಭಾವದ ಸಂಕೀರ್ಣ ಸ್ಥಿತಿಯನ್ನು ವಿವರ ಸಮೃದ್ಧಿಯಿಂದ ಕಲಾತ್ಮಕವಾಗಿ ಚಿತ್ರಿಸಿದೆ.

ಭಾಷೆ, ನಿರೂಪಣಾ ಶೈಲಿ ಆಕರ್ಷಕವಾಗಿದೆ. ಸರಳವಾಗಿದೆ. ಸಲೀಸಾಗಿ ಓದಿಸಿಕೊಂಡು ಹೋಗುತ್ತದೆ. ಆ ಕಾಲಕ್ಕೆ ನಮ್ಮನ್ನು ಕರೆದೊಯ್ಯುತ್ತದೆ. ಮೊದಲ ಶ್ರೇಷ್ಠ ಕೃತಿಯಾಗಿ ಮಾತ್ರವಲ್ಲ, ಕನ್ನಡದಲ್ಲಿ ಕಾದಂಬರಿ ಪ್ರಕಾರ ಉತ್ತರೋತ್ತರವಾಗಿ ಬೆಳೆಯಲು ನಾಂದಿ ಹಾಡಿದೆ. ಶಿವರಾಮ ಕಾರಂತರು ಅದನ್ನು ಕೃತಜ್ಞತೆಯಿಂದ ಸ್ಮರಿಸಿದ್ದಾರೆ. ಆ ಕಾಲಕ್ಕೆ ಅದೊಂದು ಪ್ರಬುದ್ಧ ಕೃತಿ ಎಂದೂ ಕರೆದಿದ್ದಾರೆ. ಕನ್ನಡದಲ್ಲಿ ಕಾದಂಬರಿ ಪ್ರಕಾರದ ಪಥವನ್ನು ರೂಪಿಸಿದ ಕಾರಣಕ್ಕೆ ಎಲ್ಲ ಕಾಲಕ್ಕೂ ಸಲ್ಲುವಕೃತಿಯಾಗಿ 'ಇಂದಿರಾಬಾಯಿ'ಗೆ ತನ್ನದೇ ಆದ ಮಹತ್ವ ಇದೆ.

ಇದನ್ನು ಇ–ಪುಸ್ತಕವಾಗಿ ಪ್ರಕಟಿಸಲು ವಸಂತ ಪ್ರಕಾಶನದ ಕೆ.ಎಸ್. ಮುರಳಿಯವರು ಸಾಫ್ಟ್ ಪ್ರತಿ ನೀಡಿರುತ್ತಾರೆ. ಅವರಿಗೆ ಮನಃಪೂರ್ವಕ ಕೃತಜ್ಞತೆಗಳು. ಈ ಕೃತಿ ಪ್ರಕಟವಾಗುವಲ್ಲಿ ಆಸಕ್ತಿವಹಿಸಿದ ಆಡಳಿತಾಧಿಕಾರಿ ಶ್ರೀಮತಿ ಸೌಭಾಗ್ಯ ಅವರಿಗೆ, ಪ್ರಾಧಿಕಾರದ ಎಲ್ಲ ಸದಸ್ಯರಿಗೆ ಹಾಗೂ ಸಿಬ್ಬಂದಿವರ್ಗದವರಿಗೆ ವಂದನೆಗಳು.

–ಡಾ॥ ವಸುಂಧರಾ ಭೂಪತಿ
ಅಧ್ಯಕ್ಷರು

## ಸಮರ್ಪಣಮ್

ಮಮಹಿ ಗಿರಿಜಾ ರಾಧಾ ನಾಮ್ನ್ಯೌಪ್ರಿಯೇಖಲು ಯೇಸುತೇ
ತ್ರಿದಿವನಿಲಯಂ ಯಾತೇತೇಮಾಂ ವಿಹಾಯ ನಿರಾಗಸಂ ।
ಅಥಖಲು ತಯೋಸ್ಸ್ಮೃತ್ಯರ್ಥಂಚ ಸ್ವಬುದ್ಧಿವಿನಿರ್ಮಿತಾ
ನವಕೃತಿರಸೌ ದತ್ತಾತಾಭ್ಯಾಂ ಮುದೇಭವತಾಚ್ಚಿರಂ ॥

# ಪೀಠಿಕೆ

ಈ ಪುಸ್ತಕದಲ್ಲಿ ಬರೆದಿರುವುದು ಇಂದಿರಾಬಾಯಿ ಎಂಬವಳ ಜನ್ಮ ಚರಿತ್ರೆಯಾಗಿರುತ್ತೆ. ಬರೆದಾತನು ಭಾಷಾಭಿಜ್ಞನೆಂತಾಗಲಿ ಕಾವ್ಯವಿಶಾರದನೆಂತಾಗಲಿ ಕುಶಲನೆಂತಾಗಲಿ ತೋರ್ಪಡಿಸುವುದಕ್ಕೆ ಇದನ್ನು ಬರೆಯಲಿಲ್ಲ. ಅಂಥಾ ಯೋಗ್ಯತೆಗಳು ಅವನಲ್ಲಿಲ್ಲ. ಆದುದರಿಂದ ಈ ಗ್ರಂಥದಲ್ಲೇನಾದರೂ ಹೆಚ್ಚುಕುಂದುಗಳಿದ್ದರೆ, ಗುಣದೋಷ ವಿವೇಚಕರು ಕ್ಷಮಿಸದೆ ಇರಬಾರದು.

ಹಾಗಾದರೆ, ಈ ಪುಸ್ತಕದ ಉದ್ದೇಶವೇನೆಂದು ಓದುವವರು ಕೇಳಬಹುದು. ಅದೇನೆಂದರೆ - ಸತ್ಯತೆ, ಹೃದಯ ನಿರ್ಮಲತೆ ಇವೆರಡು ಸಾಧನಗಳೇ ನಮಗೆ ಇಹಪರದಲ್ಲಿಯೂ ಸಾರ್ಥಕಗಳಾಗಿವೆ. ಇವುಗಳನ್ನು ಬಿಟ್ಟು ಸರ್ವ ಪ್ರಯತ್ನಗಳೂ ನಿರರ್ಥಕವೇ. ಇದನ್ನು ಸಾದೃಶ್ಯಗೊಳಿಸುವುದೇ ಈ ಪುಸ್ತಕದ ಉದ್ದೇಶವು. ಈ ಉದ್ದೇಶವು ಈ ಗ್ರಂಥದಿಂದ ಎಷ್ಟರಮಟ್ಟಿಗೆ ಪೂರೈಸುವಣಾಯಿತು ಎಂಬುದು ವಾಚಕರೇ ನಿಶ್ಚಯಿಸತಕ್ಕ ವಿಷಯವಾಗಿದೆ.

**– ಗ್ರಂಥಕರ್ತ**

# ಪ್ರಸ್ತಾವನೆ

ಭಾರತೀಯ ಪರಂಪರೆಯಲ್ಲಿ ಗದ್ಯಕಾವ್ಯಕ್ಕೆ ಬಹಳ ಹಳೆಯ ಇತಿಹಾಸವಿದೆ. ಕಥಾಪ್ರಕಾರಕ್ಕೆ ಸೇರಿದ *ಕಥಾಸರಿತ್ಸಾಗರ* ಮತ್ತು *ಬಾಣ* ಕಾದಂಬರಿಗಳಂಥ ಗದ್ಯಕಾವ್ಯಗಳು ಕಲ್ಪನಾ ಸಾಹಿತ್ಯದ ಶ್ರೇಷ್ಠ ಉದಾಹರಣೆಗಳಾಗಿ ನೆಮ್ಮದುರಿಗಿವೆ. ಕಾದಂಬರಿಯ ನಿರೂಪಣಾ ಶೈಲಿ ಮತ್ತು ಕಲ್ಪನಾಶಕ್ತಿ ತಮ್ಮ ಶ್ರೀಮಂತಿಕೆಯಿಂದ ಇನ್ನೂ ನಮ್ಮನ್ನು ಬೆರಗುಗೊಳಿಸುತ್ತವೆ. *ಪಂಚತಂತ್ರ*, *ಹಿತೋಪದೇಶ*ಗಳಂತೆ ಇವು ಭಾಷಾಂತರಗೊಂಡು ಕನ್ನಡ ಪರಂಪರೆಯಲ್ಲಿಯೂ ಸೇರಿಬಿಟ್ಟುದುದರಿಂದ ಸಹಜವಾಗಿಯೇ ಆಧುನಿಕ ಕಾದಂಬರಿಯ ಸಮಯ, ಶೈಲಿಗಳ ಮೇಲೂ ತಮ್ಮ ಪ್ರಭಾವವನ್ನು ಬೀರಿಬಿಟ್ಟವು. ಜನಪದ ಸಾಹಿತ್ಯದಲ್ಲಿಯೂ ಕಥೆ ಬಹಳ ಹಿಂದೆಯೇ ತನ್ನ ಪ್ರಭಾವವನ್ನು ಬೀರಿತ್ತು. ಪಾಶ್ಚಾತ್ಯ ಕಾದಂಬರಿಯ ಕಥನ ಸಾಹಿತ್ಯ ನಮ್ಮಲ್ಲಿ ಬಂದಾಗ ಸಹಜವಾಗಿಯೇ ದೇಶೀಯ ಪರಂಪರೆಯನ್ನು ಒಳಗೊಂಡು ಬೇರೆ ಸ್ವರೂಪವನ್ನು ತಳೆಯಿತು. ಈ ಎಲ್ಲ ಪ್ರಭಾವಗಳನ್ನೂ ಪುಟ್ಟಣ್ಣನವರ *ಮಾಡಿದ್ದುಣ್ಣೋ ಮಹಾರಾಯ*ದಿಂದ *ಕರಿಮಾಯಿ*ಯವರೆಗೆ ಹಬ್ಬಿದ ಕಾದಂಬರೀ ಪ್ರಪಂಚದಲ್ಲಿ ಹೆಜ್ಜೆ ಹೆಜ್ಜೆಗೂ ಗುರುತಿಸಬಹುದು. ಭಾರತೀಯ ಕಥಾಸಾಹಿತ್ಯವನ್ನು ನೋಡಿದರೆ ಕಲ್ಪನೆಯ ಮಹತ್ವದ ಅರಿವು ನಮ್ಮ ಸಂಸ್ಕೃತಿಯಲ್ಲಿ ಮೊದಲಿನಿಂದಲೂ ಮೂಡಿಬಂದುದು ಎಂಬ ಸತ್ಯ ಹೊಳೆಯದಿರದು. ಈ ಮಾತನ್ನು ಯಾಕೆ ಹೇಳಬೇಕಾಯಿತೆಂದರೆ ಕನ್ನಡ ಕಾದಂಬರಿಯನ್ನು ವಿಮರ್ಶಿಸುವಾಗ ಸಂಪೂರ್ಣವಾಗಿ ಪಾಶ್ಚಾತ್ಯ ಪರಿಕಲ್ಪನೆಗಳನ್ನೇ ನೆಚ್ಚಿಕೊಂಡು ತಪ್ಪು ನಿರ್ಣಯಗಳಿಗೆ ತಲುಪಿದ ಉದಾಹರಣೆಗಳುಂಟು.[೧]

ಈಗಿದ್ದ ಸ್ವರೂಪದಲ್ಲಿ ಕನ್ನಡ ಕಾದಂಬರಿ ಹುಟ್ಟಿಕೊಂಡಿದ್ದು ಹತ್ತೊಂಬತ್ತನೆಯ ಶತಮಾನದ ಕೊನೆಯ ದಶಕದಲ್ಲಿ ಎನ್ನುವುದು ನಿರ್ವಿವಾದ. ಗುಳವಾಡಿ ವೆಂಕಟರಾಯರ *ಇಂದಿರಾಬಾಯಿ* (೧೮೯೯) ನಮ್ಮ ಮೊಟ್ಟ ಮೊದಲನೆಯ ಸ್ವತಂತ್ರ ಕಾದಂಬರಿ. ಇದಕ್ಕೂ ಮೊದಲು ಬಂದವುಗಳು ಭಾಷಾಂತರ - ರೂಪಾಂತರಗಳು[೨] ಇಲ್ಲವೆ ಕಥೆಗಳು; *ಇಂದಿರಾಬಾಯಿ*ಗೂ ಭಾರತದ ಮೊಟ್ಟ ಮೊದಲಿನ ಕಾದಂಬರಿಗಳಲ್ಲೊಂದಾದ ಬಾಬಾ ಪದಮನಜೀ ಲಿಖಿತ ಮರಾಠೀ *ಯಮುನಾ ಪರ್ಯಟನ* (೧೮೫೭)ಕ್ಕೂ[೩] ವಸ್ತು ಸಾಮ್ಯವಿರುವುದು ಆಕಸ್ಮಿಕವಲ್ಲ. *ಯಮುನಾ ಪರ್ಯಟನ*ದ ಕನ್ನಡ ಅನುವಾದ ೧೮೬೯ರಲ್ಲಿ ಮಂಗಳೂರಿನಿಂದಲೆ ಪ್ರಕಟವಾದುದರಿಂದ ವೆಂಕಟರಾಯರು ಅದನ್ನು ನೋಡಿರಲೇಬೇಕು. ಇದಲ್ಲದೆ ವಿಧವಾಸಮಸ್ಯೆ ಆ ಕಾಲದ ಜ್ವಲಂತ ಸಮಸ್ಯೆಗಳಲ್ಲೊಂದಾಗಿತ್ತೆನ್ನುವುದನ್ನು ಆರ್.ಸಿ.ದತ್ತ *The Lake of Palms* (೧೯೦೨) ಮೊದಲಾದ ಕೃತಿಗಳಲ್ಲಿ ನೋಡಬಹುದು. *ಇಂದಿರಾಬಾಯಿ*ಯನ್ನು *ಯಮುನಾ ಪರ್ಯಟನ*ಕ್ಕೆ

ಹೋಲಿಸಿದಾಗ ಕನ್ನಡದ ಮೊಟ್ಟ ಮೊದಲಿನ ಕಾದಂಬರಿ ಸಾಧಿಸಿದ ಪ್ರಬುದ್ಧತೆ ಆಶ್ಚರ್ಯವನ್ನುಂಟು ಮಾಡುತ್ತದೆ. ಪದಮನಜೀಯವರೇ ಹೇಳುವಂತೆ ಅವರ ಕಾದಂಬರಿಯ ಉದ್ದೇಶ "ಹಿಂದೂ ವಿಧವೆಯರ, ಅದರಲ್ಲಿಯೂ ವಿಶೇಷವಾಗಿ ಬ್ರಾಹ್ಮಣ ವಿಧವೆಯರ ಸ್ಥಿತಿ ಹೇಗಿದೆ ಎಂಬುದನ್ನು ತೋರಿಸುವುದು ಮತ್ತು ವಿಧವಾ ವಿವಾಹಕ್ಕೆ ಅನುಕೂಲವಾಗಿ ನಡೆದ ಕಾರ್ಯಗಳಿಗೆ ಯಥಾ ಸಾಮರ್ಥ್ಯ ಸಹಾಯ ಮಾಡುವುದು ಆಗಿದೆ." ಈ ಅವರ ನೈತಿಕ ಸಂಕಲ್ಪದ ಹಿನ್ನೆಲೆಯಲ್ಲಿ ಕ್ರಿಶ್ಚಿಯನ್ ಧರ್ಮದ ಪ್ರಸಾರದ ಉದ್ದೇಶವೂ ಸ್ಪಷ್ಟವಾಗಿ ಕೆಲಸ ಮಾಡುತ್ತದೆ. ಬ್ರಾಹ್ಮಣರಾಗಿ ಹುಟ್ಟಿದ ಯಮುನಾ ಮತ್ತು ಅವಳ ಪತಿ ವಿನಾಯಕರಾವ್ ಪ್ರಚ್ಛನ್ನ ಕ್ರಿಶ್ಚಿಯನ್‌ರಂತೆ ನಡೆದುಕೊಳ್ಳುವುದಾಗಲಿ, ತನ್ನ ವೈಧವ್ಯದ ಪರಿಹಾರವನ್ನು ಯಮುನಾ ಕ್ರಿಶ್ಚಿಯನ್ ಮತ ಸ್ವೀಕರಿಸುವುದರಿಂದ ಪಡೆದುಕೊಳ್ಳುವುದಾಗಲಿ ಪಾತ್ರಗಳ ಸ್ವಂತ ಕೃತಿಯೆಂದು ಕಾದಂಬರಿಯಲ್ಲಿ ಬರುವುದಿಲ್ಲ. ಕಾದಂಬರಿಯ ಬಹುಭಾಗ ಉಪಕಥೆಗಳನ್ನು ಕೃತ್ರಿಮವಾಗಿ ಜೋಡಿಸಿದಂತಿದ್ದು ವಿಧವೆಯರ ಚಿತ್ರಗಳನ್ನು ಒಂದರ ಹಿಂದೊಂದರಂತೆ ಕೊಡುತ್ತ ಹೋಗುತ್ತದೆ. ಗುಳವಾಡಿಯವರು ಈ ಕಾದಂಬರಿಯಿಂದ ತಾಂತ್ರಿಕವಾಗಿ ಯಾವ ಲಾಭವನ್ನೂ ಪಡೆದಂತಿಲ್ಲ.

*ಇಂದಿರಾಬಾಯಿ*ಗೆ 'ಸದ್ಧರ್ಮ ವಿಜಯ' ಎಂಬ ಇನ್ನೊಂದು ಹೆಸರು ಕೊಡುವಲ್ಲಿ ಗುಳವಾಡಿಯವರಿಗೆ ನೈತಿಕ ಉದ್ದೇಶವೊಂದಿದ್ದಿತೆನ್ನುವುದು ಸ್ಪಷ್ಟವಿದೆ. "ಸತ್ಯತೆ, ಹೃದಯನಿರ್ಮಲತೆ ಇವೆರಡು ಸಾಧನಗಳೇ ನಮಗೆ ಇಹಪರದಲ್ಲಿಯೂ ಸಾರ್ಥಕಗಳಾಗಿವೆ. ಇವುಗಳನ್ನು ಬಿಟ್ಟು, ಸರ್ವ ಪ್ರಯತ್ನಗಳೂ ನಿರರ್ಥಕವೇ. ಇದನ್ನು ಸಾದೃಶ್ಯಗೊಳಿಸುವುದೇ ಈ ಪುಸ್ತಕದ ಉದ್ದೇಶವು" ಎಂದು ಹೇಳಿ ಗ್ರಂಥಕರ್ತರೇ ತಮ್ಮ ನೈತಿಕ ನಿಲುವನ್ನು ಸೂಚಿಸಿದ್ದಾರೆ.[೪] ಹೀಗಿದ್ದರೂ, *ಇಂದಿರಾಬಾಯಿ* ಸರಳ ನೀತಿಕಥೆಯಲ್ಲ. ಅನ್ಯಾಯದಿಂದ ಕೊಲ್ಲಲ್ಪಟ್ಟ ಸುಂದರರಾಯನ ಮಗ ಭಾಸ್ಕರನ ಯಶಸ್ಸಿನಲ್ಲಿ, ವಿಧವೆಯಾದರೂ ಪಾವಿತ್ರ್ಯವನ್ನು ಕಾಪಾಡಿಕೊಂಡು ಬರುವ ಇಂದಿರೆಯ ಕಲ್ಯಾಣದಲ್ಲಿ ಕಾದಂಬರಿ ಕೊನೆಗೊಳ್ಳುತ್ತದೆಯಾದರೂ 'ಸತ್ಯವೇ ಜಯ' ಎಂಬ ನೀತಿ ಕಾದಂಬರಿಯ ಮೊದಲ ಭಾಗದಲ್ಲಿ ವ್ಯಂಗ್ಯಕ್ಕೆ ಗುರಿಯಾಗುತ್ತದೆ. ಸುಂದರರಾಯನ ಕೊಲೆಗಾರ ಭೀಮರಾಯ ನಿರ್ದೋಷಿಯೆಂದು ನ್ಯಾಯಾಲಯದಿಂದ ಬಿಡುಗಡೆ ಹೊಂದುವುದು, ಮಠಾಧಿಪತಿಗಳಿಂದ ಧರ್ಮವಿಚಾರಕನೆಂದು ನೇಮಿಸಲ್ಪಟ್ಟು ಸಮಾಜದಲ್ಲಿ ಗೌರವ ಸ್ಥಾನವನ್ನು ಗಳಿಸುವುದು ಇತ್ಯಾದಿ ಘಟನೆಗಳು ಜಯ ದೊರೆಯುವುದು ಸತ್ಯಕ್ಕಲ್ಲ ಎಂಬ ಕಟು ವಾಸ್ತವದತ್ತ ಬೊಟ್ಟು ಮಾಡಿ ತೋರಿಸುತ್ತದೆ. ಕಾದಂಬರಿಯ ಕೊನೆಯಲ್ಲಿ ಕೂಡ ಭೀಮರಾಯ ಮತ್ತು ಅವನಿಗಿಂತ ದುಷ್ಟಳಾದ ಅವನ ಹೆಂಡತಿ ಅಂಬಾಬಾಯಿ ಸುರಕ್ಷಿತವಾಗಿಯೇ ಉಳಿಯುತ್ತಾರೆ. ಅಮೃತರಾಯನೊಡನೆ ಅವರು ಮಾಡಿಕೊಳ್ಳುವ ಒಪ್ಪಂದ ವ್ಯಾವಹಾರಿಕವಾದುದೇ ವಿನಹ ಹೃದಯ ಪರಿವರ್ತನೆಯ ಚಿಹ್ನೆವಲ್ಲ. "ನಾವೆಷ್ಟು ಹಣ ವೆಚ್ಚ ಮಾಡಿದರೂ, ಏನು ಮಾಡಿದರೂ, ಇಡೀ ಊರೇ ಒಂದಾದ ಮೇಲೆ ಅವರೆಲ್ಲರೂ ಕೂಡಿ, ಶ್ರೀ ಗುರುಗಳಿಗೆ ಅನೇಕ ನ್ಯಾಯಗಳನ್ನು ಸೂಚಿಸಿ, ಅವರ ಮನಸ್ಸನ್ನು ತಿರುಗಿಸುವುದು ಯಾವ ದೊಡ್ಡ ಮಾತು? ಇನ್ನು ನಾವು ಸಹ ಅವರ ಸಂಗಡ ಸೇರಿರುವುದೇ ಉತ್ತಮ"[೫] ಎಂಬ ಅಂಬಾಬಾಯಿಯ

ವ್ಯವಹಾರೀ ಸೂಚನೆಯೆ ಅಮೃತರಾಯನೊಡನೆ ಭೀಮರಾಯ "ವಿನಯಾತಿಶಯದೊಡನೆ ದೋಷಾನುಸಂಧಾನವನ್ನು" ಮಾಡಿಕೊಳ್ಳುವುದರ ಹಿಂದಿನ ಪ್ರೇರಣೆಯಾಗಿದೆ.

*ಇಂದಿರಾಬಾಯಿಯ* ಕಥೆ ಇಂದಿರೆಯ ಪುನರ್ವಿವಾಹದಲ್ಲಿ ಪರ್ಯವಸಾನ ಹೊಂದುವುದು ನಿಜವಾದರೂ ಅದು ಕೆರೂರರ *ಇಂದಿರಾದಂತೆ* ಪ್ರೇಮಕಥೆಯಲ್ಲ. ಕಾದಂಬರಿಯ ವಿಶೇಷ ಗಮನ ಇರುವುದು ಭೀಮರಾಯ ಅಂಬಾಬಾಯಿಯರತ್ತ. ಅದರ ನಿಜವಾದ ಪ್ರೇರಣೆ ಸಮಾಜದಲ್ಲಿಯ ದೌಷ್ಟ್ಯವನ್ನು ಅನಾವರಣಗೊಳಿಸಿ ಅದನ್ನು ವಿಡಂಬಿಸುವುದೇ ಆಗಿದೆ. *ಇಂದಿರಾಬಾಯಿಯ* ಕಥೆ ನಡೆಯುವುದು ಕಮಲಪುರವೆಂಬ ನಗರದಲ್ಲಿ. ಕಾದಂಬರಿಯಲ್ಲಿ ಬರುವ ಹಲವಾರು ಸೂಚನೆಗಳಿಂದ - ಅದೊಂದು ರೇವು, ಜಿಲ್ಹಾ ಸ್ಥಳ, ಸೆಶನ್ಸ್ ಕೋರ್ಟಿರುವ ಜಾಗ, ಯಕ್ಷಗಾನದ ಪ್ರಾಬಲ್ಯ, ಇತ್ಯಾದಿ - ಕಮಲಪುರ ದಕ್ಷಿಣ ಕನ್ನಡದ ಮಂಗಳೂರಿಗೆ ಕಲ್ಪಿತ ಹೆಸರಿರಬೇಕೆನ್ನುವ ಸಂಶಯ ಬಲವಾಗುತ್ತದೆ. ಭೀಮರಾಯ ಕಮಲಪುರಕ್ಕೆ ಹೊರಗಿನಿಂದ ಬಂದವನು. ಅವನ ಅಜ್ಜಿ ಅವನನ್ನು ಚಿಕ್ಕವನಾಗಿರುವಾಗಲೇ ವಿಜಾಪುರದಿಂದ ಕಮಲಪುರಕ್ಕೆ ಕರೆತಂದಿರುತ್ತಾಳೆ. ಇಲ್ಲಿ ಅವನು ನರಸಿಂಹಶಾಸ್ತ್ರಿ ಎಂಬ ವರ್ತಕನನ್ನು ಆಶ್ರಯಿಸಿ ಅವನ ಶ್ಯಾನುಭೋಗನಾಗಿರುತ್ತಾನೆ. ಅಂಬಾಬಾಯಿ ಎಂಬ ಒಬ್ಬ ರೂಪವಂತ, ಚತುರ ಹೆಣ್ಣಿನೊಡನೆ ಅವನ ಮದುವೆಯಾಗಿರುತ್ತದೆ. ಮನೆಯ ಎಲ್ಲ ವ್ಯವಹಾರಗಳಲ್ಲಿಯೂ ಅಂಬಾಬಾಯಿಯದೇ ಕೊನೆಯ ಮಾತು. ಭೀಮರಾಯನಿಗೆ ಯಕ್ಷಗಾನವೆಂದರೆ ಪ್ರೀತಿ. ಮನೆಯಲ್ಲಿ ದಿನವೂ ಪ್ರಸಂಗಗಳು ಜರುಗಲೇಬೇಕು. ಅವನ ಖಾಸಗೀ ಸಂಭಾಷಣೆಗಳೂ ಕೂಡ ಯಕ್ಷಗಾನದ ಮಾದರಿಯವೇ. ಅಂಬಾಬಾಯಿಗೆ ಸ್ವಾರ್ಥ ಬಿಟ್ಟು ಬೇರೆ ಶಾಸ್ತ್ರಗಳೇ ಇಲ್ಲ. - "ಶಾಸ್ತ್ರ! ಶಾಸ್ತ್ರ! ಪುರಾಣಗಳನ್ನೆಲ್ಲ ನಾವು ದಿನೇ ದಿನೇ ಕೇಳುತ್ತೇವಷ್ಟೇ. ಎಲ್ಲಾ ಕಾರ್ಯಗಳಲ್ಲಿ ಸ್ವಕಾರ್ಯವೇ ಶ್ರೇಷ್ಠವಾಗಿದೆ". - ಸುಂದರರಾಯನೆಂಬ ಒಬ್ಬ ತರುಣ ಭೀಮರಾಯನ ಆಶ್ರಯ ಬಯಸಿ ಬಂದಾಗ ಭೀಮರಾಯ ತನ್ನ ಹೆಂಡತಿಯಲ್ಲಿ ಈ ವಿಷಯ ಪ್ರಸ್ತಾಪಿಸುತ್ತಾನೆ. ಆದರೆ ಅಂಬಾಬಾಯಿಗೆ ಸುಂದರರಾಯನೆಂದರೆ ಆಗದು. "ಸುಂದರರಾಯನು ಜೀವಂತನಾಗಿರುವವರೆಗೆ ನನಗೆ ಸುಖವಿರದು. ಅದಲ್ಲದೆ ಅವನು ಬದುಕಿರುವುದು ನಮ್ಮ ಮನೆತನದ ಮುಂದಿನ ವೃದ್ಧಿಗೆ ಅಪಾಯವೇ ಸರಿ" ಎಂದು ಹೆಂಡತಿ ಹೇಳಿದಾಗ ಭೀಮರಾಯನಿಗೆ ಆಶ್ಚರ್ಯವಾಗುತ್ತದೆ. ಸುಂದರರಾಯನ ಅಪರಾಧವೆಂದರೆ ನರಸಿಂಹಶಾಸ್ತ್ರಿ ಭೀಮರಾಯನ ಮನೆತನದೊಡನೆ ಹೊಂದಿದ ನಿಕಟ ಸಂಬಂಧದ ಬಗ್ಗೆ ಅಪಪ್ರಚಾರ ಮಾಡಿರುವನೆಂಬುದು. ಆದರೆ ಅಂಬಾಬಾಯಿಯ ತೀವ್ರ ಪ್ರತಿಕ್ರಿಯೆ ನೋಡಿದಾಗ ಈ ಪ್ರಚಾರದಲ್ಲಿ ಸತ್ಯವಿರಬೇಕು ಎನ್ನಿಸುತ್ತದೆ. ಇಲ್ಲವಾದರೆ, ಬರೀ ಒಂದು ಹಾರಿಕೆಯ ಅಪವಾದಕ್ಕೆ ಹೆದರಿ ಅಂಬಾಬಾಯಿ ಸುಂದರರಾಯನ ವಧೆಯನ್ನೇ ಬಯಸುತ್ತಿರಲಿಲ್ಲ. ನರಸಿಂಹಶಾಸ್ತ್ರಿ "ಭೀಮರಾಯನ ಮನೆತನವೂ ತನ್ನ ಮನೆತನವೂ ಒಂದೆ ಎಂಬಂತೆ ನಡೆಯಿಸಿದನು" ಎಂಬ ಸಂದಿಗ್ಧಾರ್ಥದ ಹೇಳಿಕೆಯೊಂದು ಕಾದಂಬರಿಯಲ್ಲಿದೆ.

ವಾಮಾಚಾರಗಳಲ್ಲಿ ಪರಿಣಿತಳಾದ ದೇವಕಿ ಎಂಬವಳ ಸಹಾಯದಿಂದ ಭೀಮರಾಯ

ಸುಂದರರಾಯನ ಕೊಲೆ ಮಾಡುತ್ತಾನೆ. ಅಪರಾಧದ ತನಿಖೆ ನಡೆದು ಭೀಮರಾಯ ಸೆಶನ್ಸ್‌ಗೆ ಕಮಿಟ್ ಆಗುತ್ತಾನೆ. ಆದರೆ ಶೇಷಗಿರಿರಾಯನೆಂಬ ಪ್ರಸಿದ್ಧ ವಕೀಲನ ಸಹಾಯದಿಂದ (ಇವನನ್ನು ದೊರಕಿಸುವವನು ನರಸಿಂಹಶಾಸ್ತ್ರಿ) ಹಾಗೂ ಅಸೆಸರ್ ಎಂದು ಕೆಲಸ ಮಾಡಿದ ವ್ಯಕ್ತಿಗಳ ಅಜ್ಞಾನದಿಂದ ಭೀಮರಾಯನ ಬಿಡುಗಡೆಯಾಗುತ್ತದೆ. ಅಂಬಾಬಾಯಿ ಭೀಮರಾಯನನ್ನು ಕೊಲೆಗೆ ಪ್ರೇರೇಪಿಸುವಲ್ಲಿ, ಭೀಮರಾಯ ತನ್ನ ಅಪರಾಧದ ಭಾರದಲ್ಲಿ ಸ್ತಿಮಿತ ಕಳೆದುಕೊಂಡು ಸಂಶಯಕ್ಕೆ ಎಡೆ ಮಾಡಿಕೊಡುವಲ್ಲಿ *Macbeth* ದ ಸ್ಪಷ್ಟ ಪ್ರಭಾವವನ್ನು ಕಾಣಬಹುದು. *Macbeth* ದ *Banquet Scene* ನ್ನೇ ತುಸುಮಟ್ಟಿಗೆ ಹೋಲುವ ಭೋಜನ ಸಮಾರಂಭದಲ್ಲಿ ಭೀಮರಾಯ ಮ್ಯಾಕ್‌ಬೆತ್ ಬ್ಯಾಂಕೋನನ್ನು ಕಂಡಂತೆ ಸುಂದರರಾಯನನ್ನು ಕಾಣುತ್ತಾನೆ. "ಬಾ ಸುಂದರರಾಯನೇ ಏಕೆ ನಿಂತಿದ್ದೀ? ಕುಳ್ಳಿರು". ರೋಗದ ನೆವಹೇಳಿ ಅವನನ್ನು ಅಂಬಾಬಾಯಿ ಸಂರಕ್ಷಿಸುವ ವಿವರದಲ್ಲಿಯೂ *Macbeth* ದ ಛಾಯೆಯಿದೆ. ಭೀಮರಾಯನ ಜಯವನ್ನು 'ಸತ್ಯಕ್ಕೆ ಜಯ' ಎಂದು ಜನ ಕೊಂಡಾಡುತ್ತಾರೆ. ಭೀಮರಾಯ ಮಹಾಲಿಂಗೇಶ್ವರ ದೇವಸ್ಥಾನದಲ್ಲಿ ಸಹಸ್ರ ಭೋಜನ ಏರ್ಪಡಿಸುತ್ತಾನೆ. ಅವನ ಕೀರ್ತಿ ಮಠದವರೆಗೂ ತಲುಪಿ 'ಧರ್ಮ ವಿಚಾರಕ'ನೆಂಬ ಸ್ಥಾನದಲ್ಲಿ ಅವನ ನೇಮಕವಾಗುತ್ತದೆ. ನರಸಿಂಹಶಾಸ್ತ್ರಿಯ ಸಾವಿನ ನಂತರ ಭೀಮರಾಯ ಅವನ ಎಲ್ಲ ವ್ಯವಹಾರಗಳಿಗೂ ಮಾಲಕನಾಗಿ ಯಶಸ್ಸಿನ ಶಿಖರ ಮುಟ್ಟುತ್ತಾನೆ. ಈ ಹೊತ್ತಿಗೆ ಗುರುಗಳ ಆಶೀರ್ವಾದದಿಂದ ಇಂದಿರೆ ಎಂಬ ಮಗಳನ್ನೂ ಆತ ಪಡೆದಿರುತ್ತಾನೆ.

ಇಂದಿರೆಗೆ ಎಂಟು ವರ್ಷಗಳಾದಾಗ ಹಲಸೂರ ತ್ರಿಯಂಬಕರಾಯನ ಒಬ್ಬನೇ ಮಗ ವಿಠಲರಾಯನೊಡನೆ ಅವಳ ಮದುವೆಯಾಗುತ್ತದೆ. ಆದರೆ ಲಂಪಟನಾದ ವಿಠಲರಾಯ ರೋಗಗಳಿಗೆ ತುತ್ತಾಗಿ ಸೂಳೆಯೊಬ್ಬಳ ಮನೆಯಲ್ಲಿ ಸಾವನ್ನಪ್ಪುತ್ತಾನೆ. ವಿಠಲರಾಯನ ದುಶ್ಚಟಗಳ ಅರಿವಿದ್ದೂ ಅವನನ್ನು ಪಾರುಮಾಡಲು ತ್ರಿಯಂಬಕರಾಯನಾಗಲಿ ಭೀಮರಾಯನಾಗಲಿ ಯಾವ ಪ್ರಯತ್ನವನ್ನೂ ಮಾಡಿರುವುದಿಲ್ಲ. ಭೀಮರಾಯನಿಗೆ ಮಗಳಲ್ಲಿ ತಕ್ಕ ಮಟ್ಟಿಗಿನ ಪ್ರೀತಿ ಇದೆ. ಆದರೆ ಅಂಬಾಬಾಯಿಯಲ್ಲಿ ಮೃದು ಭಾವನೆಗಳೆನ್ನುವುವು ಇರುವುದೇ ಇಲ್ಲ. ಇಂದಿರೆಯ ದುರಂತ ಅವಳನ್ನು ತಟ್ಟುವುದೇ ಇಲ್ಲ. ಗೆಳತಿ ಶಾರದೆಯಿಂದ ಪುಸ್ತಕಗಳನ್ನು ತಂದು ಓದಿದರೂ ಅದು ಅಂಬಾಬಾಯಿಯ ದೃಷ್ಟಿಯಲ್ಲಿ ಅಪರಾಧವೇ.

"...ಆ ಪುಸ್ತಕ ನೀನು ಯಾವ ಪ್ರಯೋಜನಕ್ಕಾಗಿ ಓದುತ್ತೀ?"

"ಅದರಲ್ಲಿ ಅನೇಕ ನೀತಿ ಕಥೆಗಳಿವೆ. ಅವುಗಳನ್ನು ಓದಿದ್ದರಿಂದ ನಮ್ಮ ಬುದ್ಧಿ ನಡತೆ ಶುದ್ಧವಾಗುತ್ತವೆ."

"ನಮ್ಮ ನಡತೆಯಲ್ಲಿ ಈಗೇನು ಕೊರತೆಗಳಿವೆ?"

"ನಮ್ಮ ಕೊರತೆಗಳು ನಮಗೆ ಕಾಣಿಸುವುದಿಲ್ಲ. ನಮಗೆ ಕಾಣಿಸುವದು ಪರರ

ಗುಣದೋಷಗಳು ತಾನೇ, ಆದುದರಿಂದ ಪರರ ಒಳ್ಳೇ ನಡತೆ ಯಾವುದೆಂದು ತಿಳಿದುಕೊಂಡು, ನಮ್ಮ ನಡತೆಯನ್ನು ತಿದ್ದುವುದು ಉತ್ತಮವಷ್ಟೇ?"

"ಅದಕ್ಕೆ ಮ್ಲೇಂಛರಾದ ಪಾದ್ರಿಗಳ ಪುಸ್ತಕಗಳನ್ನೇ ಓದಬೇಕೆ?"[೬]

ಮಗಳನ್ನು ವೈರಾಗ್ಯದ ಮಾರ್ಗಕ್ಕೆ ಹಚ್ಚಲೆಂದು ಭೀಮರಾಯ-ಅಂಬಾಬಾಯಿ ಸಂತಮಂಡಲಿಯೊಂದನ್ನು ಮನೆಗೆ ಕರೆತರುತ್ತಾರೆ. ಅವರಲ್ಲೊಬ್ಬನ ಮೇಲೆ ಕನ್ಯಾಪಹರಣದ ಕೇಸು ದಾಖಲಾಗಿರುತ್ತದೆ. ಮಂಡಲಿಯ ಅಧ್ಯಕ್ಷ ಒಂದು ರಾತ್ರಿ ಇಂದಿರೆಯ ಕೋಣೆಯನ್ನು ಪ್ರವೇಶಿಸಿ ಅವಳನ್ನು ಭೋಗಿಸ ಬಯಸುತ್ತಾನೆ. ಉಪಾಯದಿಂದ ಪಾರಾದ ಇಂದಿರೆ ಅಮೃತರಾಯನ ಆಶ್ರಯ ಪಡೆಯುತ್ತಾಳೆ. ಅವರ ಪ್ರೋತ್ಸಾಹದಿಂದ ವಿದ್ಯಾವಂತಳಾಗಿ C.S. ಪಾಸಾದ ಭಾಸ್ಕರರಾಯನನ್ನು ಮದುವೆಯಾಗುತ್ತಾಳೆ. ಇದರಿಂದ ಅವಮಾನಿತರಾದರೂ ಉಪಾಯವಿಲ್ಲದೆ ಭೀಮರಾಯ - ಅಂಬಾಬಾಯಿ ಒಪ್ಪಂದ ಮಾಡಿಕೊಳ್ಳುತ್ತಾರೆ.

ಕಾದಂಬರಿಯಲ್ಲಿ ಭೀಮರಾಯ - ಅಂಬಾಬಾಯಿ ಸಮಾಜದ ಭ್ರಷ್ಟತೆಯ ಕೇಂದ್ರವಾಗಿದ್ದಾರೆ. ಈ ಕೇಂದ್ರದ ಸುತ್ತ ಹಲವಾರು ಮೋಸ, ಅತ್ಯಾಚಾರಗಳ ಪ್ರತಿನಿಧಿಗಳು ತಿರುಗುತ್ತಾರೆ. ಸಂತಮಂಡಲಿಯ ನೀತಿಯ ಸೋಗು, ಮಠಗಳಿಂದ ನಡೆಯುವ ಶೋಷಣೆ, ಅನ್ಯಾಯ, ವೈದ್ಯ-ಜ್ಯೋತಿಷಿಗಳಿಂದ ನಡೆಯುವ ಮೋಸ, ಸಮಾಜದಲ್ಲಿ ರೂಢಿಗೊಂಡ ವಿಷಪ್ರಾಶನದಂಥ ವಾಮಾಚಾರಗಳು - ಇಂಥ ಭ್ರಷ್ಟ ಆಚರಣೆಗಳಿಗೆ ಕಾದಂಬರಿ ಭೂತಗನ್ನಡಿ ಹಿಡಿಯುತ್ತದೆ. ಕೊಂಕಣಿ, ತುಳು, ಸುಶಿಕ್ಷಿತರ ಆಂಗ್ಲೋ-ಕನ್ನಡ - ಇಂಥ ಭಾಷೆಯ ವೈವಿಧ್ಯವನ್ನು ತನ್ನ ಪರಿಣಾಮಗಳಿಗೋಸ್ಕರ ಬಳಸಿಕೊಳ್ಳುವುದರಲ್ಲಿಯೂ ಕಾದಂಬರಿಕಾರರ ವಾಸ್ತವ ಪ್ರಜ್ಞೆ ದುಡಿದಿದೆ.

ಇಂಥ ವಿಡಂಬನೆಗೆ ನೈತಿಕ ಕೇಂದ್ರವೊಂದು ಬೇಕಾಗುತ್ತದೆ. ಇದನ್ನು ಕಾದಂಬರಿಕಾರರು ಅಮೃತರಾಯ-ಜಲಜಾಕ್ಷಿಯರ ಸುಸಂಸ್ಕೃತ, ಪುರೋಗಾಮಿ ಸಂವೇದನೆಯಲ್ಲಿ ಪ್ರಸ್ಥಾಪಿಸುತ್ತಾರೆ. ದುಷ್ಟಶಕ್ತಿಗಳನ್ನೆದುರಿಸಿ ಭಾಸ್ಕರ ಹಾಗೂ ಇಂದಿರೆಯರ ಭವಿತವ್ಯವನ್ನು ರೂಪಿಸುವವರೇ ಇವರು. ಇಂಥ ಪಾತ್ರಗಳು ಕೂಡ ಕಾದಂಬರಿಯಲ್ಲಿ ಸಹಜವಾಗಿಯೇ ಬರುತ್ತವೆ.

ಭೀಮರಾಯ-ಅಂಬಾಬಾಯಿಯರ ಜೀವನದ ಆಗುಹೋಗುಗಳು ಕಾದಂಬರಿಯಲ್ಲಿ ಗಟ್ಟಿಯಾದ ವಾಸ್ತವದ ನೆಲೆಯನ್ನು ನಿರ್ಮಿಸಿದರೆ, ಭಾಸ್ಕರ - ಇಂದಿರೆಯರ ಪ್ರಗತಿ ಆದರ್ಶದ ನೆಲೆಯಲ್ಲಿ ನಡೆಯುತ್ತದೆ. ವಾಸ್ತವದ ನೆಲೆ ವಿವರಗಳಲ್ಲಿ ಸಾಕಾರತೆಯನ್ನು ಪಡೆದರೆ ಆದರ್ಶದ ನೆಲೆ ವರ್ಣನೆಯ ಮೇಲೆ ನಿಂತಿದೆ. ಕಾದಂಬರಿ ವಾಸ್ತವಕ್ಕೆ ಕೊಟ್ಟ ಅವಕಾಶವನ್ನಾಗಲಿ, ಆಳವನ್ನಾಗಿಲಿ ಆದರ್ಶಕ್ಕೆ ಕೊಡುವುದಿಲ್ಲ. ಇದು ಆಕಸ್ಮಿಕವಲ್ಲ. ಯಾಕೆಂದರೆ ಭೀಮರಾಯ - ಅಂಬಾಬಾಯಿಯರ ಚರಿತ್ರೆ ಘಟನೆಗಳ ಮೂಲಕ ಸಿದ್ಧವಾಗುವಂತಹದಾದರೆ, ಇಂದಿರೆ - ಭಾಸ್ಕರರ ಚರಿತ್ರೆ ಸಾಧ್ಯತೆಗಳ ಒಂದು ಪ್ರತೀಕ ಮಾತ್ರ. ಇಂದಿರೆ ಅಮೃತರಾಯನ ಆಶ್ರಯಪಡೆದ ನಂತರ ಅವಳ ಪ್ರಗತಿ

ವೇಗದಿಂದ ನಡೆದುಹೋಗುತ್ತದೆ. ಸಾತಾರೆಯಲ್ಲಿ ಅವಳ ವಿದ್ಯಾಭ್ಯಾಸ, ಭಾಸ್ಕರನಲ್ಲಿ ಪ್ರೀತಿ, ಅಮೃತರಾಯ - ಜಲಜಾಕ್ಷಿಯರ ಮಧ್ಯಸ್ಥಿಕೆಯಲ್ಲಿ ಮದುವೆ-ಕನಸಿನಲ್ಲಿಯ ಘಟನೆಗಳಂತೆ ನಡೆದುಹೋಗುತ್ತದೆ. ಭಾಸ್ಕರನ ಪ್ರಗತಿಯ ವೇಗವೂ ಇಂಥದೇ. ಮದ್ರಾಸಿನಲ್ಲಿ ಯಶಸ್ಸು ವಿಲಾಯತಿಗೆ ಪ್ರಯಾಣ, ಸಿ.ಎಸ್. ಪಾಸಾಗುವುದು, ಕಮಲಪುರದಲ್ಲಿಯೇ ಅಸಿಸ್ಟಂಟ್ ಕಲೆಕ್ಟರ್ ಹುದ್ದೆ, ಇಂದಿರೆಯೊಡನೆ ಮದುವೆ - ಇದೂ ಒಂದು ಕನಸಿನ ಕಥೆಯೇ. ಯಾಕೆಂದರೆ ವಾಸ್ತವ ಜೀವನದಲ್ಲಿ ವಿಧವಾ ಪುನರ್ವಿವಾಹ ಎಷ್ಟು ಕಠಿಣವಾಗಿತೆನ್ನುವದು ಮಹಾದೇವ ರಾನಡೆಯವರಂಥವರ ಜೀವನದಿಂದ ಸ್ಪಷ್ಟವಾಗುತ್ತದೆ. ವಿಧವಾ ವಿವಾಹವನ್ನು ಸಮರ್ಥಿಸಿದ ರಾನಡೆಯವರಿಗೆ ಮನಸ್ಸಿರದಿದ್ದರೂ ಅವರು ಎರಡನೆಯ ಸಲ ಮದುವೆಯಾದಾಗ ಒಬ್ಬ ಕನ್ಯೆಯನ್ನೇ ಮದುವೆಯಾಗಬೇಕಾಯಿತು. ಆದರೆ ಇಂದಿರಾಬಾಯಿಯಲ್ಲಿ ಭಾಸ್ಕರ - ಇಂದಿರೆಯರ ಮದುವೆ ಸಹಜವಾಗಿ ನಡೆಯುತ್ತದಷ್ಟೇ ಅಲ್ಲದೆ, ಅದು ಸಮಾಜಕ್ಕೆ ಒಪ್ಪಿತವೂ ಆಗುತ್ತದೆ.

ಆದರೆ ಲಕ್ಷಿಸಬೇಕಾದ ಸಂಗತಿಯೆಂದರೆ, ಇಂದಿರೆ-ಭಾಸ್ಕರ ಅವರ ಕಲ್ಯಾಣವೂ ಕಾದಂಬರಿಯಲ್ಲಿ ಸಂಭಾವ್ಯತೆಯ ನಿಯಮಗಳನ್ನು ಮುರಿಯುವುದಿಲ್ಲ ಎನ್ನುವುದು. ಅಮೃತರಾಯ ಚಿಕ್ಕಂದಿನಲ್ಲಿಯೇ ತಂದೆ, ತಾಯಿಗಳನ್ನು ಕಳೆದುಕೊಂಡು, ದಾರಿದ್ರ್ಯವನ್ನನುಭವಿಸಿ, ಅನಾಥ ಶಾಲೆಯಲ್ಲಿದ್ದು ಕಲಿತು ಮುಂದೆ ಬಂದವನಾದ್ದರಿಂದ ಭಾಸ್ಕರ ಹಾಗೂ ಇಂದಿರೆಯರಂಥ ಯೋಗ್ಯ ಆದರೆ ನಿರಾಶ್ರಿತ ಮಕ್ಕಳಿಗೆ ಆಶ್ರಯ ಕೊಟ್ಟಿದ್ದರಲ್ಲಿ ಅಸಂಭವವಾದದ್ದೇನೂ ಇಲ್ಲ. ಅಮೃತರಾಯನ ಗುಣಗಳನ್ನೇ ಹೊಂದಿದ ಭಾಸ್ಕರನ ಸಾಧನೆಯೂ ಆಶ್ಚರ್ಯವನ್ನುಂಟು ಮಾಡಲಾರದು. ನಿಜವಾದ ಕ್ರಾಂತಿ ನಡೆಯುವುದು ಇಂದಿರೆಯ ಜೀವನದಲ್ಲಿ. ಬಹುಶಃ ಇದೇ ಕಾರಣಕ್ಕಾಗಿ ಕಾದಂಬರಿಗೆ ಅವಳ ಹೆಸರನ್ನು ವೆಂಕಟರಾಯರು ಕೊಟ್ಟಿರಬೇಕು. ಇಂದಿರೆಯನ್ನು 'ಪೂರಾ ಪ್ಯಾಸಿವ್' ಎಂದು ಕರೆದ ಡಿ.ಆರ್. ನಾಗರಾಜ್ ಅವಳನ್ನು ಸರಿಯಾಗಿ ಅರ್ಥಮಾಡಿಕೊಂಡಂತಿಲ್ಲ.[೬] ಮೊದಲಿನಿಂದಲೂ ಇಂದಿರೆಯ ಪಾತ್ರದಲ್ಲಿ ಕಾದಂಬರಿಕಾರರು ವೈಶಿಷ್ಟ್ಯವನ್ನು ಕಲ್ಪಿಸಿದ್ದಾರೆ. ತನ್ನ ಮಿತಿಗಳೊಳಗೆಯೆ ಅವಳು ಚಿಕ್ಕವಳಿದ್ದಾಗಲೇ ತನ್ನ ತಿಳುವಳಿಕೆಯನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಿಸುತ್ತಾಳೆ. ತಾಯಿಯ ಅಸಹನೆಯನ್ನೂ ಲೆಕ್ಕಿಸದೆ ಗೆಳತಿ ಶಾರದೆಯಿಂದ ಪುಸ್ತಕಗಳನ್ನು ತಂದು ಓದುತ್ತಾಳೆ. ಇದರಿಂದಾಗಿ ತಕ್ಕಮಟ್ಟಿಗಿನ ಆಧುನಿಕತೆ ಅವಳಿಗೆ ಸಾಧ್ಯವಾಗುತ್ತದೆ. ಇದೂ ಅಲ್ಲದೆ ಧೈರ್ಯ, ಸ್ಥೈರ್ಯಗಳು ಅವಳ ಸ್ವಭಾವದಲ್ಲಿಯೇ ಇದೆ. ವಿಠಲರಾಯ ತೀರಿಕೊಂಡ ಘಟನೆಗೆ ಅವಳು ಪ್ರತಿಕ್ರಿಯಿಸುವುದನ್ನು ಉದಾಹರಣೆಗೆ ನೋಡಬಹುದು. ಇಂದಿರೆಯ ಹಣೆಯ ಮೇಲಿನ ಕುಂಕುಮದ ಬೊಟ್ಟನ್ನು ಅಂಬಾಬಾಯಿ ಉಪಾಯದಿಂದ ಉಜ್ಜಿ ತೆಗೆದಾಗ "ಇಂದಿರೆ ಆ ಚಮತ್ಕಾರವನ್ನು ನೋಡಿ ತಿಳಿದು 'ಏಕಮ್ಮಾ, ನಾನೇ ಉಜ್ಜಿ ತೆಗೆಯುತ್ತಿದ್ದೆನಷ್ಟೇ? ನನಗಿನ್ನೇಕೆ ಬೊಟ್ಟು?' " ಎಂದು ಶಾಂತವಾಗಿಯೇ ಉತ್ತರಿಸುತ್ತಾಳೆ. ಸಂತಮಂಡಲಿಯ ಅಧ್ಯಕ್ಷ ರಂಗಪ್ಪನ ಕೈಯಿಂದ ಪಾರಾಗುವ ಘಟನೆಯಂತೂ ಅವಳ ಸಮಯಪ್ರಜ್ಞೆ, ಧೈರ್ಯಗಳನ್ನು ಧಾರಾಳವಾಗಿಯೇ ನಿದರ್ಶಿಸುತ್ತದೆ. ಅಮೃತರಾಯನ ಪ್ರೋತ್ಸಾಹದಿಂದ ಸಾತಾರೆಯಂಥ ದೂರದ ಊರಿಗೆ ಹೋಗಿ ವಿದ್ಯೆ ಗಳಿಸುವುದೂ ಸಾಹಸದ ಕೃತಿಯೇ. ಭಾಸ್ಕರನನ್ನು ಕೂಡ ಅವಳು ಯುಕ್ತಿಯಿಂದಲೇ ಗೆಲ್ಲುತ್ತಾಳೆ :

"ನ್ಯಾಯವು ಎಲ್ಲರಿಗೂ ಏಕ ಪ್ರಕಾರವಿಬೇಕು. ಕೆಲವರು ಇಂತಹ ಪ್ರಕಾರವೇ ಯೋಗ್ಯವಾಗಿ ನಡೆಯುಬೇಕೆಂದು ಅವರನ್ನು ಬಲಾತ್ಕರಿಸುವಿರಾದರೆ, ಬೇರೆಯುವರಿಗೂ ಹಾಗೆಯೇ ಬಲಾತ್ಕರಿಸಬೇಕು" ಎಂದೊಬ್ಬ ಧೃತಪ್ರಜ್ಞ ಪಂಡಿತನು ಹೇಳುತ್ತಾನೆ. ಹಾಗೆ ಹೇಳುವುದು ವಿಹಿತವಾದದ್ದೇ ?

ಅಮೃತರಾಯನು ಭಾಸ್ಕರರಾಯನೊಡನೆ : "ಈಕೆಯ ಪ್ರಶ್ನೆಗಳಿಗೆ ನೀನೇ ಉತ್ತರಗಳನ್ನು ಕೊಡಪ್ಪಾ" ಎಂದು ಹೇಳಲು ಭಾಸ್ಕರರಾಯನು

"ವಿಹಿತವಾದದ್ದೇ, ಸಂಶಯವೇನು ?"

"ಎಲ್ಲಾ ಮತಾನುಯಾಯಿಗಳಿಗೂ ಆ ಮಾತು ಸಂಬಂಧಿಸುವುದೇ ?"

"ಎಲ್ಲರಿಗೂ ಸಂಬಂಧಿಸುವುದು."

"ಹಾಗಾದರೆ ಒಬ್ಬ ಪುರುಷನಿಗೆ ಎಷ್ಟು ಬಾರಿಯಾದರೂ ಮದುವೆಯಾಗಬಹುದಂತೆ; ಸ್ತ್ರೀಗೇಕಾಗ ಕೂಡದು ? ಒಬ್ಬ ಸ್ತ್ರೀಯು ಪತಿಯ ಮರಣಾನಂತರ ತಲೆಬೋಳಿಸಿ ರೂಪ ವಿರೂಪ ಮಾಡಿ ಸನ್ಯಾಸದಲ್ಲಿರಬೇಕಂತೆ. ಪುರುಷನು ಪತ್ನಿಯ ಮರಣಾನಂತರ ತಲೆ, ಗಡ್ಡ, ಮೀಸೆ ಬೋಳಿಸಿ ಏಕೆ ಸನ್ಯಾಸಿಯಾಗಬಾರದು ?"

.......................

"ಸ್ವಾರ್ಥವಿದ್ದಲ್ಲಿ ನ್ಯಾಯ ಕಡಿಮೆ".

ಇಂಥ ಇಂದಿರಾಬಾಯಿಯನ್ನು 'ಪ್ಯಾಸಿವ್' ಎಂದು ಕರೆಯುವುದಾದರೂ ಹೇಗೆ ?

ಪಾಶ್ಚಾತ್ತೀಕರಣವೆಂದರೆ, ಆಧುನಿಕತೆ ಎಂದು ಅರ್ಥವಾಗುತ್ತಿದ್ದರೆ ವೆಂಕಟರಾಯರು ಅದನ್ನು ಒಪ್ಪಿಕೊಳ್ಳುತ್ತಾರೆ. ಅಮೃತರಾಯ, ಜಲಜಾಕ್ಷಿ, ಭಾಸ್ಕರ ಹಾಗೂ ಇಂದಿರೆ ಆಧುನಿಕ ಮನೋವೃತ್ತಿಯವರು. ಆದರೆ ಅಜ್ಞಾನದಿಂದ ಆಧುನಿಕತೆಯನ್ನು ವಿರೋಧಿಸುವ ಅಂಬಾಬಾಯಿ ಮೊದಲಾದವರಂತೆ ಕೇವಲ ಬಾಹ್ಯಾಚಾರಗಳಲ್ಲಿ ಆಧುನಿಕತೆಯನ್ನು ಮರೆಯುವ ಬಿ.ಎ., ಎಮ್.ಎ.ಗಳನ್ನು ಟೀಕಿಸುವುದನ್ನು ಅವರು ಮರೆಯುವುದಿಲ್ಲ. ಭಾಷೆಯ ನೆಲೆಯಲ್ಲಿಯೇ ಈ ಟೀಕೆ ಹೇಗೆ ರೂಪುಗೊಳ್ಳುತ್ತದೆಯೆನ್ನುವುದನ್ನು 'ಉಮಾಪತಿಯ ಔಷಧ', 'ಧರ್ಮಶಾಸ್ತ್ರ', 'ಎಲೆ ರಾಮನ ಗಡಿಯಾರ', 'ಮಾತೃಕ್ಲೇಷ ಪರೀಕ್ಷೆ' ಎಂಬ ಅಂಬಾಬಾಯಿಯ ಪ್ರಯೋಗಗಳಲ್ಲಿ, ಜುಬಿಲಿ ಟೌನ್ ಹಾಲಿನಲ್ಲಿ ನಡೆದ ಸಭೆಯಲ್ಲಿ ಬಿ.ಎ.ಬಿ.ಎಲ್. ಕಾಂತರಾಯನು ಮಾಡಿದ ಭಾಷಣದಲ್ಲಿ ಕಂಡುಕೊಳ್ಳಬಹುದು. ಕಾಂತರಾಯನ ಭಾಷಣದ ಮಾದರಿ ಹೀಗಿದೆ :

> ನಮ್ಮ Countryman (Cheers) ಸ್ವದೇಶಸ್ಥ (ಶಾಭಾಸು) ಮತ್ತು Friend (applause) ಸ್ನೇಹಿತ (ಹೊಗಳಿಕೆ) ಭಾಸ್ಕರರಾಯನು (loud cheers) (ಉನ್ನತ ಸ್ವರದಿಂದ ಶಾಭಾಸು) ಬಹು ಸಾಹಸದಿಂದ ವಿಲಾಯತಿಗೆ ಹೀಗಿ, C.S. Examination ಪಾಸ್ ಮಾಡಿ ನಮ್ಮ ಊರಿಗೇನೇ First Native Assistant Collector (ಪ್ರಥಮದ ನೇಟಿವ್ ಅಸಿಸ್ಟೆಂಟ್ ಕಲೆಕ್ಟರ್) ಆಗಿ ಬಂದಿರುವುದು

> ನಮ್ಮ District (ಜಿಲ್ಲೆಗೆ) ಮಾತ್ರವಲ್ಲ ಇಡೀ Presidency (ಸಂಸ್ಥಾನ)ಗೆ highest honour (ದೊಡ್ಡ ಮರ್ಯಾದೆ) ಮತ್ತು credit (deafening applause) ಕೀರ್ತಿ (ಕಿವುಡನಾಗ ಮಾಡತಕ್ಕಷ್ಟು ಹೊಗಳಿಕೆ) ಎಂಬುದನ್ನು special (ಪ್ರತ್ಯೇಕ) ಆಗಿ ಯಾರಿಗೂ ಹೇಳಬೇಕಾದ್ದಿಲ್ಲವಷ್ಟೆ?[೯]

*ಇಂದಿರಾಬಾಯಿ*ಯನ್ನು ದಕ್ಷಿಣ ಕನ್ನಡ ಜಿಲ್ಲೆಯ ಕಲೆಕ್ಟರನಾಗಿದ್ದ ಕೋಚಮನ್ ಎಂಬ ಆಂಗ್ಲ, ಇಂಗ್ಲಿಷಿಗೆ ೧೯೦೩ರಲ್ಲಿ[೧೦] ತರ್ಜುಮೆ ಮಾಡಿದ. ಈ ಸಂಗತಿಯನ್ನು ಪ್ರಸ್ತಾಪಿಸುತ್ತ ಶಾಂತಿನಾಥ ದೇಸಾಯಿ "ಅವರಿಗೆ ಈ ಕಾದಂಬರಿಯಲ್ಲಿಯ ಇಂಗ್ಲಿಷ್ ಶಿಕ್ಷಣದ ಹಾಗೂ ಪಾಶ್ಚಾತ್ಯೀಕರಣದ ಉಧೋ ಉಧೋ ಆದದ್ದು ಬಹಳ ಸೇರಿರಬೇಕು ! ಬ್ರಿಟಿಷ್ ಸಾಮ್ರಾಜ್ಯ ಶಾಹಿಯ ಒಳ್ಳೆಯ ಪರಿಣಾಮಗಳಿಗೆ ಈ ಕಾದಂಬರಿ ಸಾಕ್ಷಿಯಾಗಿದೆ ಎಂದು ಹಿಗ್ಗಿ ಭಾಷಾಂತರಿಸಿರಬೇಕು"[೧೧] ಎಂದು ಶರಾ ಬರೆದಿದ್ದಾರೆ. ಆದರೆ ಆಧುನಿಕ ಶಿಕ್ಷಿತ ವರ್ಗವನ್ನೂ ಇಂದಿರಾಬಾಯಿ ವ್ಯಂಗ್ಯಕ್ಕೆ ಗುರಿಮಾಡಿದ ವಿಧಾನವನ್ನು ಅವರು ಗಮನಿಸಿಲ್ಲ.

*ಇಂದಿರಾಬಾಯಿ*ಯ ಬಂಧ ಸಾಕಷ್ಟು ಬಿಗಿಯಾಗಿಯೇ ಇದೆ. ಅದರ ಕಥನದಲ್ಲಿ ನಾಟ್ಯಗುಣವೂ ಸೇರಿ ಶೈಲಿ ಆಕರ್ಷಕವೂ ಆಗಿದೆ. ಆದರೆ ವೆಂಕಟರಾಯರು ವಿವರಗಳನ್ನು ಕೊಡುವಲ್ಲಿ ಒಂದು ವಿಧವಾದ ಲೋಲುಪತೆಯನ್ನು ತೋರುತ್ತಾರೆ. ಈ ವಿವರಗಳು ಕಾದಂಬರಿಯ ವಾಸ್ತವ ನೆಲೆಯನ್ನು ಭದ್ರಗೊಳಿಸುತ್ತವೆ ಎನ್ನುವುದು ನಿಜವಾದರೂ ಅವುಗಳ ಬಗ್ಗೆ ಇನ್ನೂ ಹೆಚ್ಚು ಎಚ್ಚರವನ್ನವರು ವಹಿಸಿದ್ದರೆ ಕಾದಂಬರಿಯ ಗುಣ ಹೆಚ್ಚುತ್ತಿತ್ತು. ಆದರೆ, ಅವರು ಕೊಡುವ ವಿವರಗಳೆಲ್ಲ ತೀರ ಅಥೆಂಟಿಕ್ ಅದವುಗಳೆನ್ನುವುದನ್ನು ಅಲ್ಲಗಳೆಯಲಾಗದು. ಉದಾಹರಣೆಗೆ, ಕಾರಂತರ *ಮರಳಿ ಮಣ್ಣಿಗೆ*ಯ ನೆನಪು ತಂದುಕೊಡುವ ಇಂದಿರೆಯ ಮೊದಲ ಮದುವೆಯ ವರ್ಣನೆಯನ್ನು ನೋಡಬಹುದು.

> ಸೂರ್ಯಾಸ್ತ ಸಮಯಕ್ಕೆ ಸ್ವಲ್ಪ ಸಮಯವಿರುವಾಗ ದಿಬ್ಬಣಗಳು ಎದಿರುಗೊಂಬೋಣದ ಅಬ್ಬರವೇರಿತು. ಸಾಲೊಂದರಲ್ಲಿ ಐನೂರು ಹಿಲಾಲುಗಳಿರುವ ಎರಡು ಸಾಲು ಹಿಲಾಲುಗಳೂ, ಇಪ್ಪತ್ತು ಬಳಾರ್ ತಟ್ಟೆಗಳೂ, ಗೋವೆಯಿಂದ ಇದಕ್ಕೆಂದೇ ಬೇರೆಯಾಗಿ ತರಿಸಿದ ಬಿರುಸು, ಚಕ್ರಬಾಣ, ಆಕಾಶವಿಮಾನ ಮುಂತಾದ ಬಾಣ ಪ್ರದರ್ಶನಗಳೂ, ಭಾಮಾಮಣಿ, ರಾಜಾಮಣಿ, ಸಂಜೀವಿ, ಚಂದ್ರಾವತಿ, ಲೂಪಿ, ಮೀನಾಕ್ಷಿ, ಇವರ ನರ್ತನ ಸಂಘಗಳೂ, ಕುಪ್ಪ ಸೇರುಗಾರ, ಚನ್ನ ಸೇರುಗಾರ, ಇವರ ಬಜಂತ್ರಿ ಮೇಳಗಳೂ ಜಕ್ರಿಶೇಕೆ ಇವರ ಚೀನಿ ವಾದ್ಯದ ಮೇಳಗಳೂ, ಮದ್ರಾಸ್ ೨೨ನೆಯ ಪಾಯದಳದವರ ಬ್ಯಾಂಡ್ ಎಂಬ ವಾದ್ಯದವರೂ, ಪ್ರಖ್ಯಾತಿಪಟ್ಟ ಹಮ್ಮಬ್ಬ, ಪಿಲಿದೂಮ, ಇವರ ಹುಲಿವೇಷಗಳೂ, ಗರಡೀ ಸಾಧಕದವರೂ, ಕಹಳೆ, ತುತ್ತೂರಿ, ತಂಬೂರಿ, ನಗಾರಿ, ಜಯಭೇರಿ ಮೊದಲಾದ ಸಕಲ ವಾದ್ಯಗಳೂ, ಖಂಡಿಗಟ್ಟಲೆಯಿಂದ ಎಣ್ಣೆ ತುಂಬಿಸಿದ ಪಾತ್ರಗಳಿರುವ ಹತ್ತು ಬಂಡಿಗಳೂ ಸಾಲುಸಾಲಾಗಿ ಹೊರಡಲು, ಸಾವಿರಗಟ್ಲೆಯಿಂದ ಜನರು ಬಂದು ತುಂಬಿಕೊಂಡು, ಅಪರಿಮಿತವಾದ ಜನಸ್ತೋಮವು ಒಟ್ಟುಗೂಡಲು, ವಧೂಪಕ್ಷದವರ ನಿಬ್ಬಣವು ಹೊರಟು ನಗರದ ಮಧ್ಯಭಾಗದಲ್ಲಿ ಬಂದು, ಇದೇ ತರಹದ ಅಟ್ಟಹಾಸದೊಡನೆ

> ಎರಡು ಕುದುರೆಯ ಸಾರೋಟಿನಲ್ಲಿ ವರನನ್ನು ಕುಳ್ಳಿರಿಸಿಕೊಂಡು ಬರುತ್ತಿರುವ ವರನ ಪಕ್ಷದವರು ಅತಿ ಸಂಭ್ರಮದಿಂದೆರುಗೊಂಡು ಉಭಯ ಪಕ್ಷದವರೂ ಕೂಡಿ ಮುಂದುವರಿಸಿ, ಅಲ್ಲಲ್ಲಿ ಮೇಳದವರಿಂದ ನರ್ತನವನ್ನು ಮಾಡಿಸುತ್ತಾ ಜಾಣಗಾರಿಕೆಯಿಂದ ಇರುಳನ್ನು ಹಗಲನ್ನಾಗಿ ಮೆರೆಸುತ್ತಾ, ಧ್ವನಿಯಿಂದಲೂ, ಪ್ರಕಾಶದಿಂದಲೂ, ಧೂಳಿನಿಂದಲೂ, ಧೂಮದಿಂದಲೂ, ಸರ್ವರ ಕಣ್ಣು, ಕಿವಿಗಳನ್ನು ತುಂಬಿಸಿ, ನೇತ್ರಾನಂದವನ್ನೂ ಕರ್ಣಾನಂದವನ್ನೂ ಮಾಡಿಸುತ್ತಾ, ವರನ ಮನೆಯನ್ನು ಸಮೀಪಿಸುತ್ತಿರುವಾಗ, ಭೀಮರಾಯನು ಹೋಗಿ ಸಾರೋಟಿನಿಂದ ಕೆಳಗಿಳಿಸಿ, ಕೈ ಹಿಡಿದುಕೊಂಡು, ಅಲ್ಲಿ ಮಾರ್ಗದ ಬದಿಯಲ್ಲಿ ಕಟ್ಟಿಸಿದ ಮಂಟಪಕ್ಕೆ ಕರೆದುಕೊಂಡು ಹೋಗಿ, ಶಾಸ್ತ್ರಾನುಸಾರ ಸೀಮಂತ ಪೂಜೆ, ಉಡುಗೊರೆ, ಉಪಚಾರಗಳನ್ನು ಮಾಡಿ ಪುನಃ ಸಾರೋಟಿನಲ್ಲಿ ತಂದಿರಿಸಲು ದಿಬ್ಬಣವು ಪುನಃ ಗದ್ದಲದಿಂದ ಮುಂದಿರಿಸಿ ಹೋಗಿ ವರನ ಮನೆಗೆ ತಲುಪಿದಾಗ ಭೀಮರಾಯನು ಬಂದು ವರನನ್ನು ಕೈ ಹಿಡಿದು ಕೆಳಗಿಳಿಸಿದನು.[೧೨]

ಒಂದೇ ವಾಕ್ಯದಲ್ಲಿರುವ ವರ್ಣನೆ ದಿಬ್ಬಣದ ನಿರಂತರತೆಯನ್ನು, ವೈಭವವನ್ನು ಐಂದ್ರಿಯಿಕ ಆಕರ್ಷಣೆಯನ್ನು ಅತ್ಯಂತ ವಾಸ್ತವ ರೀತಿಯಲ್ಲಿ ಹಿಡಿದಿಟ್ಟಿದೆ. ದಕ್ಷಿಣ ಕನ್ನಡದ ಉತ್ಸವಗಳ ಈ ಅಥೆಂಟಿಕ್ ವಿವರಗಳು ಕೋಚಮನ್ ಸಾಹೇಬನನ್ನು ಆಕರ್ಷಿಸಿರಬಹುದಲ್ಲವೆ? *ಇಂದಿರಾಬಾಯಿಯ* ಭಾಷಾಂತರಕ್ಕೆ ಅವನು ಬರೆದ ಮುನ್ನುಡಿಯನ್ನು ನೋಡಿದರೆ ಇದೇ ನಿಜಸ್ಥಿತಿಯೆಂದು ಗೊತ್ತಾಗುತ್ತದೆ.

> *ಇಂದಿರಾಬಾಯಿಯು* ಮಂಗಳೂರಿನ ಸಾರಸ್ವತ ಬ್ರಾಹ್ಮಣರ ಸದ್ಯದ ಜೀವನದ ವರ್ಣನೆಯಾಗಿದೆ.. ಗ್ರಂಥಕರ್ತನು ಸ್ವತಃ ಸಾರಸ್ವತ ಬ್ರಾಹ್ಮಣನೇ.... ಆದರೆ ಅವನು ಪ್ರಗತಿಪರ ವಿಚಾರಗಳನ್ನಿಟ್ಟುಕೊಂಡವರಲ್ಲೊಬ್ಬನು. ತನ್ನ ಜಾತಿಯ ಜನರಲ್ಲಿ ರೂಢವಾದ ಜಡ ಜಾತೀಯ ಪೂರ್ವಾಗ್ರಹಗಳನ್ನು ಆತ ವಿಡಂಬಿಸುತ್ತಾನೆ. ಈ ಕಾದಂಬರಿಯು ಕಥೆ ಚೆನ್ನಾಗಿದೆಯುಷ್ಟೇ ಅಲ್ಲದೆ ಸಾರಸ್ವತನೊಬ್ಬನು ತನ್ನ ಜಾತಿಯವರಿಗಾಗಿಯೇ ಬರೆದ ಸದ್ಯದ ಹಿಂದೂ ಸಮಾಜದ ಜೀವನದ ನಿಜವಾದ ವಿವರಣೆಯಾಗಿರುವುದರಿಂದ ಹೆಚ್ಚಿನ ಆಸ್ಥೆಯನ್ನು ಕೆರಳಿಸುತ್ತದೆ. ಈ ಕಾದಂಬರಿಯ ಹಲವಾರು ಘಟನೆ ಹಾಗೂ ವ್ಯಕ್ತಿಗಳು ಬದುಕಿನಿಂದಲೇ ಆಯ್ದುಕೊಂಡವುಗಳು. ವಿಷಹಾಕಿ ಕೊಂದ ಘಟನೆಯ ನ್ಯಾಯವಿಚಾರಣೆ ಸುಮಾರು ಮೂವತ್ತು ಅಥವಾ ನಲ್ವತ್ತು ವರ್ಷಗಳ ಹಿಂದೆ, ಕಾದಂಬರಿಯಲ್ಲಿ ವರ್ಣಿಸಿದ ಹಾಗೆಯೆ ದಕ್ಷಿಣ ಕನ್ನಡದ ಸೆಸೆನ್ಸ್ ಕೋರ್ಟಿನಲ್ಲಿ ನಿಜವಾಗಿ ನಡೆದ ಘಟನೆ... *ಇಂದಿರಾಬಾಯಿಯಲ್ಲಿ* ಸಾಮಾಜಿಕ ಜೀವನದ ಸುಂದರ ಚಿತ್ರಣವಿದೆ. ಇದಕ್ಕೂ ಹೆಚ್ಚಾಗಿ ಆಧುನಿಕ ಹಿಂದೂ ಆಚಾರ ವಿಚಾರಗಳ ಸಹಜ ಅನಾವರಣ ಇಲ್ಲಿರುವುದು ಸ್ವಾರಸ್ಯಕರವಾಗಿದೆ. [೧೩]

ಇಷ್ಟು ಯಥಾರ್ಥವಾದ ವಿಮರ್ಶೆಯಲ್ಲಿ ಬ್ರಿಟಿಷ್ ಸಾಮ್ರಾಜ್ಯದ ಉಧೋ! ಉಧೋ! ಎಲ್ಲಿಂದ ಬಂತು?

*ಇಂದಿರಾಬಾಯಿ* ಸಂಪೂರ್ಣವಾಗಿ ವಾಸ್ತವಕ್ಕೆ ಕಟ್ಟುಬಿದ್ದ ಕೃತಿಯಲ್ಲ. ಆದರೆ, ವಾಸ್ತವ

ಮಾರ್ಗದ ಕನ್ನಡ ಕಾದಂಬರಿಯ ಮೂಲಪ್ರೇರಣೆಯನ್ನು ಇಂಥ ಕೃತಿಗಳಲ್ಲಿಯೇ ಹುಡುಕಬೇಕಾಗುತ್ತದೆ. [೧೪] ಇಂದಿರಾಬಾಯಿ ತನ್ನ ಸತ್ವವನ್ನು ಪಡೆದುಕೊಳ್ಳುವುದು ಆಧುನಿಕ ಸಮಾಜ ಪ್ರಜ್ಞೆಯ ಮೂಲಕ. [೧೫] ಈ ಸಮಾಜಪ್ರಜ್ಞೆ ಪಾತ್ರ, ಘಟನೆ, ಭಾಷೆಗಳ ಮೂಲಕವೇ ಅಭಿವ್ಯಕ್ತಿ ಪಡೆಯುವುದು ಈ ಕಾದಂಬರಿಯ ಮಹತ್ತ್ವದ ಸಾಧನೆಯಾಗಿದೆ. ವಾಸ್ತವಮಾರ್ಗದ ಶ್ರೇಷ್ಠ ಕಾದಂಬರಿಕಾರರಲ್ಲೊಬ್ಬರಾದ ಶಿವರಾಮ ಕಾರಂತರು ಇಂದಿರಾಬಾಯಿಯ ಬಗ್ಗೆ ಹೇಳುವ ಮಾತುಗಳು ಮೌಲಿಕವಾಗಿವೆ. "ಕಳೆದ ಶತಮಾನದ ಕೊನೆಯಲ್ಲಿ ಗುಳವಾಡಿ ವೆಂಕಟರಾಯರು ಬರೆದ ಇಂದಿರಾಬಾಯಿ ಎಂಬ ಕಾದಂಬರಿ ನನಗೆ ಬಹಳ ಮುಖ್ಯ ಎನಿಸುತ್ತದೆ... ಸಮಾಜದಲ್ಲಿ ಕ್ರಾಂತಿಯನ್ನು ಮೂಡಿಸಬೇಕು ಎಂಬ ಉದ್ದೇಶ ಅವರದ್ದಲ್ಲ, ಸಾಮಾಜಿಕ ತಳಮಳವನ್ನು ಬಿಂಬಿಸಬೇಕು ಅನ್ನುವುದು ಅವರ ಮನೋಭಾವ. ಹೀಗಾಗಿ ಅವರ *ಇಂದಿರಾಬಾಯಿ* ಆಗಿನ ಕಾಲಕ್ಕೆ ಒಂದು ಪ್ರಬುದ್ಧ ಕಾದಂಬರಿಯೆಂದೇ ಹೇಳಬೇಕಾಗುತ್ತದೆ."[೧೬] ಎಷ್ಟೇ ಪ್ರಗತಿಪರ ವಾದರೂ *ಇಗ್ಗಪ್ಪ ಹೆಗಡೇ ವಿವಾಹ ಪ್ರಹಸನ* ಸಾಮಾಜಿಕ ನಾಟಕಗಳ ಪರಂಪರೆಯ ಹೊರಗೆಯೆ ಉಳಿದುಕೊಂಡಿತು. ಆದರೆ *ಇಂದಿರಾಬಾಯಿಯ* ಮಾತು ಹಾಗಲ್ಲ. ಅದರ ಸತ್ವವನ್ನು ಹೀರಿಕೊಂಡೇ ಕಾರಂತರಂಥವರು ಶ್ರೇಷ್ಠ ಕಾದಂಬರಿಗಳನ್ನು ಬರೆದರು.

**– ಜಿ.ಎಸ್. ಆಮೂರ**

## ಟಿಪ್ಪಣಿಗಳು

೧. ಗೋವಿಂದ ಪೈ ಅವರಿಗೂ ಕೂಡ *ಇಂದಿರಾಬಾಯಿಯ* ಸಂರಚನೆ ಸಡಿಲೆನಿಸಿತು. 'ಇದು ತುದಿಯಿಂದ ತುದಿಯವರೆಗೆ ಸಮಗ್ರವಾದ ಒಂದೇ ಕಥೆಯಾಗಿರದೆ, ಮೂರೋ ನಾಲ್ಕೋ ಕಥಾನಕಗಳನ್ನು ಒಟ್ಟಿಗೆ ಹೊಲಿದು ಜೋಡಿಸಿದಂತಿದೆ. ಆದರೆ ಅದನ್ನು ಕೋದ ದಾರ ಮಾತ್ರ ಸಡಿಲಾಗಿದೆ'. *ಇಂದಿರಾಬಾಯಿ*, ೧೯೬೨

೨. ಲಕ್ಷ್ಮಣ ಭೀಮರಾವ್ ಗದಗಕರ ಅವರ *ಸೂರ್ಯಕಾಂತ* ಮತ್ತು ಗಳಗನಾಥರ *ಪ್ರಬುದ್ಧ ಪದ್ಮನಯನಾ* ಅನುಕ್ರಮವಾಗಿ ೧೮೯೨ ಮತ್ತು ೧೮೯೮ರಲ್ಲಿಯೇ ಪ್ರಕಟವಾಗಿದ್ದವು. ಇವೆರಡೂ ಸ್ವತಂತ್ರ ಕೃತಿಗಳು. ಆದರೆ ಅವು ಕಾದಂಬರಿಗಿಂತ ಹೆಚ್ಚಾಗಿ ಕಥಾ ಪ್ರಕಾರಕ್ಕೆಯೆ ಸೇರಿದವುಗಳು. ವಿವರಗಳಿಗಾಗಿ, ಶ್ರೀನಿವಾಸ ಹಾವನೂರರ 'ಕನ್ನಡ ಕಾದಂಬರಿಯ ಮೊದಲ ಹೆಜ್ಜೆಗಳು' *ಕಸ್ತೂರಿ*, ಮೇ ೧೯೭೦, ನೋಡಿರಿ.

೩. ಬಾಬಾ ಪದಮನಜೀ, *ಯಮುನಾಪರ್ಯಟನ*, ಎರಡನೆಯ ಮುದ್ರಣ, ೧೮೯೨

೪. ಗುಳವಾಡಿ ವೆಂಕಟರಾವ್, *ಇಂದಿರಾಬಾಯಿ*, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫, ಪುಟಸಂಖ್ಯೆಗಳು ಈ ಆವೃತ್ತಿಗೆ ಸಂಬಂಧಿಸಿವೆ.

೫. *ಇಂದಿರಾಬಾಯಿ*, ಪು. ೨೫೯

೬. ಅದೇ ಪು. ೧೫೩

೭. ವಿವೇಕ ರೈ (ಸಂ) ಕನ್ನಡ ಕಾದಂಬರಿಯ ಮೊದಲ ಹೆಜ್ಜೆಗಳು, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳೂರು ೧೯೮೭, ಪು. ೧೪೫

೮. *ಇಂದಿರಾಬಾಯಿ*, ಪು. ೨೩೭-೩೮

೯. ಅದೇ ಪು. ೨೩೦

೧೦. *Indira Bai or The Triumph of Truth* Tr. by M.E. Couch, Mangalore, 1903

೧೧. ಶಾಂತಿನಾಥ ದೇಸಾಯಿ, *ಕನ್ನಡ ಕಾದಂಬರಿ ನಡೆದು ಬಂದ ರೀತಿ*, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೯

೧೨. *ಇಂದಿರಾಬಾಯಿ* ಪು. ೮೮

೧೩. M.E. Couchman, *Indira Bai,* Mangalore, 1903, Preface

೧೪. ಈ ಸಂದರ್ಭದಲ್ಲಿ ಬೋಳಾರ ಬಾಬೂರಾಯರ ವಾಗ್ದೇವಿ (೧೯೦೫) ಕಾದಂಬರಿಯನ್ನು ಗಮನಿಸಬೇಕು. ವಾಗ್ದೇವಿ ಕನ್ನಡದ ಪ್ರಥಮ naturalistic ಕಾದಂಬರಿ. ಈ ಕೃತಿ ಡ್ರೈಜರ್‌ರ *Sister Carrie,* ಝೋಲಾರ *Nana* ಇಂಥ ಕೃತಿಗಳನ್ನು ನೆನೆಪಿಗೆ ತಂದುಕೊಡುತ್ತದೆ. ಸ್ತ್ರೀ ತನ್ನ ಲೈಂಗಿಕ ಆಕರ್ಷಣೆಯನ್ನೇ ಶಕ್ತಿಯನ್ನಾಗಿ ಪರಿವರ್ತಿಸಿ ಭ್ರಷ್ಟ ಸಮಾಜವನ್ನು ಸುಲಿಯುವ ಮತ್ತು ಕೊನೆಗೆ ಆ ಸಮಾಜಕ್ಕೇ ಬಲಿಯಾಗುವ ಕ್ರಿಯೆ ಈ ಎಲ್ಲ ಕಾದಂಬರಿಗಳಿಗೆ ಸಮಾನವಾಗಿದೆ. ಎಷ್ಟೋ ಪ್ರಗತಿಶೀಲ ಕಾದಂಬರಿಗಳಲ್ಲಿ ಕಂಡುಬರುವ, ಉದಾ : ಅನಕೃರ *ಪಂಕಜಾ* (೧೯೬೧), ನಗ್ನವಾಸ್ತವತೆ, ಅ-ನೈತಿಕ ದೃಷ್ಟಿಕೋನ ವಾಗ್ದೇವಿಯಲ್ಲಿಯೂ ಕಾಣಿಸಿಕೊಂಡಿದೆ. ಆದರೆ ಬಂಧದಲ್ಲಿ ತೀರ ಸಡಿಲಾಗಿರುವ ಈ ಕೃತಿ ಕಲಾತ್ಮಕವಾಗಿ ಯಶಸ್ವಿಯಾಗಿಲ್ಲ.

೧೫. ಗುಳವಾಡಿಯವರ ಸಮಾಜಪ್ರಜ್ಞೆ ಎಷ್ಟು ಜಾಗ್ರತವಾಗಿತ್ತು ಎನ್ನುವುದನ್ನು ಅವರು ಚಿತ್ತಾಪುರ ಮಠಾಧೀಶರಿಗೆ ಪ್ರೌಢವಿವಾಹ ಮತ್ತು ವಿಧವಾವಿವಾಹಗಳ ವಿಚಾರದಲ್ಲಿ ಅರ್ಪಿಸಿದ ವಿಜ್ಞಾಪನಾ ಪತ್ರದಿಂದ ತಿಳಿಯಬಹುದು. ಶ್ರೀನಿವಾಸ ಹಾವನೂರ, 'ಕನ್ನಡದ ಪ್ರಥಮ ಸಾಮಾಜಿಕ ಕಾದಂಬರಿಯ ಹಿನ್ನೆಲೆ', *ಪ್ರಬುದ್ಧ ಕರ್ನಾಟಕ*, ೫೫-೩, ೧೯೭೩, ನೋಡಿರಿ.

೧೬. *ಕನ್ನಡ ಕಾದಂಬರಿಯ ಮೊದಲ ಹೆಜ್ಜೆಗಳು*, ಪು. ೭-೮

# ಇಂದಿರಾಬಾಯಿ

ಅಥವಾ

# ಸದ್ಧರ್ಮ ವಿಜಯ

## ೧

**ವಿಂ**ಧ್ಯಾಚಲದ ದಕ್ಷಿಣ ಪ್ರಾಂತ್ಯದಲ್ಲಿ ರೋಹಿಣೀ ನದೀತೀರದಲ್ಲಿ ಕಮಲಪುರ ವೆಂಬೊಂದು ವಿಸ್ತಾರವಾದ ನಗರವಿರುವದು. ಈ ನಗರವು ಪ್ರಾಚೀನ ಕಾಲದಿಂದಲೇ ಚರಿತ್ರೆಗಳಲ್ಲಿ ಪ್ರಸಿದ್ಧಿಯನ್ನು ಹೊಂದಿರುವುದಲ್ಲದೆ ಘನತರವಾದ ಅನೇಕ ಭವನಗಳು, ದೇವಾಲಯಗಳು, ಅಗ್ರಹಾರಗಳು, ಕೋಟೆಕೊತ್ತಲಗಳು, ನ್ಯಾಯಸ್ಥಾನಗಳು, ತರತರದ ಫಲವೃಕ್ಷಗಳ ತೋಟಗಳು, ವಿಶಾಲವಾದ ರಾಜಮಾರ್ಗಗಳು, ಸೇತುವೆಗಳು ಇವೇ ಮೊದಲಾದುವುಗಳಿಂದ ಶೋಭಾಯಮಾನವಾಗಿರುವುದು. ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರೆಂಬೀ ನಾಲ್ಕು ವರ್ಣದ ಜನರು ಸಹ ಈ ನಗರದಲ್ಲಿ ವಾಸಿಸಿದ್ದು ಬೇರೆ ಬೇರೆ ಮತಾನುಯಾಯಿಗಳು ತಂತಮ್ಮ ವೃತ್ತಿಗಳನ್ನಾಚರಿಸುತ್ತಾ ನಗರದ ಬೇರೆ ಬೇರೆ ದಿಕ್ಕುಗಳಲ್ಲಿ ವಾಸವಾಗಿರುವರು.

ಈ ನಗರದಲ್ಲಿ ಅಗ್ರಹಾರದ ಕೇರಿ ಎಂಬಲ್ಲಿ ಹಂಪೆ ಭೀಮರಾಯನೆಂಬ ಒಬ್ಬ ಗೃಹಸ್ಥನಿರುವನು. ಅವನ ಹಿರಿಯರು ಬಿಜಾಪುರ ಸೀಮೆಯಲ್ಲಿ ಬಹು ವರುಷಗಳ ಪರ್ಯಂತರ ವಂಶಪರಂಪರಾಗತವಾಗಿ ಕುಲಕರ್ಣೀ ಉದ್ಯೋಗವನ್ನು ಮಾಡಿ ಜೀವಿಸಿಕೊಂಡಿದ್ದರು. ಭೀಮರಾಯನಿಗೆ ಆರೇಳು ವರುಷ ಪ್ರಾಯವೆಂಬಾಗ ಹೆತ್ತವರು ಕಾಲವಾಗಲು, ಪಿತ್ರಾರ್ಜಿತ ಆಸ್ತಿ ಇಲ್ಲದುದರಿಂದ ಜೀವನಕ್ಕೆ ಬೇರೆ ಉಪಾಯವನ್ನು ಕಾಣದೆ, ಅವನ ಅಜ್ಜಿಯು ಮನೆಯಲ್ಲಿದ್ದ ಪಾತ್ರಪದಾರ್ಥವೆಲ್ಲವನ್ನು ಮಾರಿ ಹಣಮಾಡಿ, ಭೀಮರಾಯನ ಸಮೇತ ಕಮಲಪುರಕ್ಕೆ ಬಂದು, ಬಹು ಬಡತನದಲ್ಲಿ ಕಾಲಕ್ಷೇಪ ಮಾಡಿಕೊಂಡಿರುವಾಗ ಭೀಮರಾಯನು ಒಬ್ಬ ಪಂಥೋಜಿಯ ಶಾಲೆಯಲ್ಲಿ ಕನ್ನಡಬರಹವನ್ನು ಓದುವುದಕ್ಕೂ ಬರೆಯುವುದಕ್ಕೂ ಕಲಿತನು. ಅವನ ಉಪನಯನವು ಗರ್ಭಾಷ್ಟಮದಲ್ಲೇ ಆಗುವುದಕ್ಕೆ ಬಡತನದ ದೆಸೆಯಿಂದ ಸಂದರ್ಭವಾಗದುದರಿಂದ ಹತ್ತು ವರುಷ ಪ್ರಾಯದಲ್ಲಿ ಬೇರೆಯವರ

ಸಹಾಯದಿಂದಾಯಿತು. ಪ್ರಾಯಭರಿತನಾದ ಮೇಲೆ ಅವನು ನರಸಿಂಹ ಶಾಸ್ತ್ರಿ ಎಂಬ ದೊಡ್ಡ ವರ್ತಕನ ಹತ್ತಿರ ಶಾನಭೋಗತನವನ್ನು ನೋಡಿಕೊಂಡು ಕಾಲಕ್ಷೇಪ ಮಾಡುತ್ತಿದ್ದನು. ಸ್ವಲ್ಪಕಾಲ ಕಳೆದ ನಂತರ ಪುಣ್ಯವಶಾತ್ ರೂಪವಂತೆಯೂ ಬುದ್ಧಿಚಾತುರ್ಯ ಉಳ್ಳವಳಾಗಿಯೂ ಇದ್ದ ಅಂಬಾಬಾಯಿ ಎಂಬ ಹೆಸರಿನ ಒಬ್ಬ ಹುಡುಗಿಯನ್ನು ಮದುವೆಯಾದನು. ಆ ಹುಡುಗಿಯನ್ನು ಮನೆಗೆ ಕರೆದು ತಂದದ್ದೇ ಸರಿ, ಭೀಮರಾಯನು ಜುಟ್ಟು ಹಿಡಿದು ಎತ್ತಿದಂತೆ ದೊಡ್ಡಸ್ತಿಕೆಗೆ ಏರತೊಡಗಿದನು. ಇದರ ಮರ್ಮವೇನೆಂದರೆ, ಅಂಬಾಬಾಯಿಯ ಜಾತಕದಲ್ಲಿ ಗಜಕೇಸರಿ ಯೋಗವಿದ್ದು, ಅದರ ಬಲದಿಂದ ಅವಳು ಚಿಕ್ಕಂದಿನಿಂದಲೇ ಬಹು ಜಾಣೆಯಾಗಿಯೂ ಸಕಲ ಕಾರ್ಯಗಳಲ್ಲಿಯೂ ಪ್ರವೀಣೆಯಾಗಿಯೂ ಇದ್ದು ಮದುವೆಯಾದ ನಂತರ ಎರಡು ಮೂರು ವರುಷದಲ್ಲಿ ಪ್ರಾಯವೂ ಬುದ್ಧಿಯೂ ತುಂಬಿದ ಮೇಲಂತೂ ಮನೆಯ ಆಡಳಿತೆಯನ್ನು ಆಟೋಪದಿಂದಲೂ, ಯುಕ್ತಿಯಿಂದಲೂ ತಾನೇ ನಡಿಸುತ್ತಾ, ತಾನೂ ಗಂಡನೂ ಕೈಗೊಳ್ಳಬೇಕಾದ ಕುಲಾಚಾರ ಧರ್ಮ ಕರ್ಮಗಳನ್ನು ಸಾಂಗವಾಗಿ ಕೈಗೊಳ್ಳುತ್ತಾ, ಗೃಹ ನಿರ್ವಾಹಕ ಕಾರ್ಯಗಳಲ್ಲಿಯೂ ಉದ್ಯೋಗ ಧರ್ಮದಲ್ಲಿಯೂ ಹೇಗೆ ನಡೆದುಕೊಳ್ಳಬೇಕೆಂದು ಗಂಡನಿಗೆ ಆಗಾಗ್ಗೆ ಸೂಚನೆಗಳನ್ನು ಕೊಡುತ್ತಾ, ತದನುಸಾರವಾಗಿ ಆತನು ನಡೆದುಕೊಳ್ಳುತ್ತಾ ಹೀಗೆ ಭೀಮರಾಯನ ಸ್ಥಿತಿಯು ದಿನೇ ದಿನೇ ವೃದ್ಧಿಯಾಗುತ್ತಾ ಬಂತು. ಭೀಮರಾಯನ ಕೈಯಲ್ಲಿ ತಕ್ಕಮಟ್ಟಿಗೆ ಹಣವೂ ಅಂಬಾಬಾಯಿಯ ಮೈಮೇಲೆ ಸಾಕಷ್ಟು ಆಭರಣಗಳೂ ಉಂಟಾದವು. ಭೀಮರಾಯನು ಇನ್ನು ತಾನು ಪರರ ಹಂಗಿನಲ್ಲಿರುವುದು ಯೋಗ್ಯವಲ್ಲ, ತನ್ನ ಸ್ವಂತ ಹಣವನ್ನೇ ಉಪಯೋಗಿಸಿ ವ್ಯಾಪಾರ ಮಾಡೋಣವೆಂದು ಆಲೋಚಿಸುತ್ತಿರುವಲ್ಲಿ, ಜಾಣೆಯಾದ ಹೆಂಡತಿಯು ಸಮ್ಮತಿಸದೆ ಗಂಡನ ಹತ್ತಿರ – "ಜಗಲಿ ಹಾರಿಯಲ್ಲವೆ ಗಗನ ಹಾರುವುದು? ಈಗ ನಮ್ಮ ಇರವು ಸಾಧಾರಣವಾದ ಒಂದು ರೀತಿಯಲ್ಲಿದ್ದರೂ, ಶಾನಭೋಗಿಕೆಯ ಉದ್ಯೋಗದಲ್ಲೇ ಇದ್ದು, ಮಾಡಬೇಕಾದ ಹೆಚ್ಚಿನ ಸಂಪಾದನೆಯು ಮಾಡದೆ ಉಳಿದಿದೆ. ವ್ಯಾಪಾರದಲ್ಲಿ ಅನೇಕ ಸಾರಿ ನಷ್ಟಗಳುಂಟಾಗುವುದಿಲ್ಲವೆ? ಆ ಕೆಲಸಕ್ಕೆ ಕೈ ಹಾಕಬೇಕಾದರೆ ಇನ್ನು ಸ್ವಲ್ಪ ಕಾಲ ಕಳೆಯಲಿ; ನಮ್ಮ ಪುಣ್ಯದಿಂದ ನಮಗೆ ಇನ್ನು ಸ್ವಲ್ಪ ಐಶ್ವರ್ಯ ದೊರೆಯಲಿ; ಸ್ವಂತ ವ್ಯಾಪಾರದಲ್ಲಿ ನಷ್ಟ ಬಂದರೂ ಸಹಿಸಕೂಡುವಷ್ಟರ ಮಟ್ಟಿಗೆ ದ್ರವ್ಯ ಸಂಪಾದನೆಯಾದ ಮೇಲೆ ಸ್ವಂತ ವ್ಯಾಪಾರವೆಂಬ ಗಗನ ಹಾರುವ ಪ್ರಮೇಯವನ್ನು ಆಲೋಚಿಸಬಹುದು. ಈಗ ನಾವು ಪ್ರಾಯದಿಂದಲೂ ದೇಹದಿಂದಲೂ ಪುಷ್ಟಿಯಾಗಿರುವಾಗ ನಾಲ್ಕು ಕಾಸು ಒಟ್ಟು ಕೂಡಿಸಿಡುವುದೇ ಉತ್ತಮವಲ್ಲದೆ ವ್ಯಾಪಾರ ಮುಂತಾದ ಗಂಡಾಂತರಕ್ಕೆ ಒಳಪಡುವ ಕೆಲಸಗಳಿಗೆ ಕೈ ಹಾಕುವುದು ಉತ್ತಮವೆಂದು ನಾನು ತಿಳಿದುಕೊಳ್ಳುವುದಿಲ್ಲ" ಎಂದು ತರ್ಕಿಸಲು, ಭೀಮರಾಯನು ತನ್ನ ಮನಸ್ಸಿನಲ್ಲಿ ಇನ್ನೊಮ್ಮೆ ಆಲೋಚಿಸಿ, ಈ ಪುಣ್ಯವಂತೆಯಾದ ಹುಡುಗಿಯ ಯೋಗ್ಯತಾ ಬಲದಿಂದಲೇ ತಾನಿಷ್ಟು ಒಳ್ಳೇ ಸ್ಥಿತಿಗೆ ಬಂದೆನು, ಇವಳು ಬುದ್ಧಿಶಾಲಿಯಾಗಿರುತ್ತಾಳೆ, ಇವಳ ಮನಸ್ಸಿಗೆ ವಿರೋಧವಾಗಿ ನಡೆದುಕೊಂಡು ಇವಳ ಸಿಟ್ಟಿಗೆ ಗುರಿಯಾಗುವುದರಲ್ಲಿ ನಿಶ್ಚಯವಾಗಿ ಅಪಾಯವಿರುವುದೆಂದು

ತಿಳಿದು, "ಹಾಗಾಗಲಿ" ಎಂದೊಪ್ಪಿಕೊಂಡು, ಅಂದಿನಿಂದ ಮುಂದಿನ್ನು ಹೆಚ್ಚು ಹಣವನ್ನು ಗಳಿಸುವುದರಲ್ಲೇ ದೃಷ್ಟಿ ಇಟ್ಟು ಸ್ವಂತ ವ್ಯಾಪಾರ ನಡಿಸುವ ದಿನ ಕೂಡಿಬರುವವರೆಗೆ ಸುಮ್ಮಗಿರೋಣವೆಂದು ನಿಶ್ಚಯಿಸಿದನು. ಹೀಗಿರುತ್ತಿರುವಾಗ ಮನೆಯಲ್ಲಿ ಯಥಾನುಶಕ್ತಿಯಾಗಿ ದೇವರ ಪೂಜೆಯೊ, ಪಂಚಪರ್ವಗಳೊ, ರಾತ್ರಿಗಳಲ್ಲಿ ತಾಳಮದ್ದಳೆ ಯಕ್ಷಗಾನ ಪ್ರಸಂಗ ಘೋಷಗಳೊ, ಆಗಾಗ ನರಸಿಂಹ ಶಾಸ್ತ್ರಿಗೂ ಸ್ನೇಹಿತರಿಗೂ ಹಲವು ಬಗೆಯ ಫಲಾಹಾರ ಉಪಚಾರಗಳೊ, ಸ್ವಜಾತಿಯ ಗುರುಗಳವರು ಕಮಲಪುರಕ್ಕೆ ಚಿತ್ತೈಸಿದ ಸಮಯಗಳಲ್ಲಿ ಪಾದಪೂಜೆ ಭಿಕ್ಷೆ ಮುಂತಾದ ಸೇವೆಗಳೊ, ದೇವಾಲಯದಲ್ಲಿ ಆಗಾಗ್ಗೆ ಸಂತರ್ಪಣೆಗಳೊ, ಉತ್ಸವಗಳೊ – ಹೀಗೆಲ್ಲ ಅನೇಕ ಸತ್ಕರ್ಮಗಳು ಅಂಬಾಬಾಯಿಯ ಸೂಚನೆಗಳಿಗನುಸಾರವಾಗಿ ನಡೆಯಲಾರಂಭಿಸಿದವು. ನರಸಿಂಹ ಶಾಸ್ತ್ರಿಯು ತನ್ನ ಶಾನಭೋಗನ ನಡತೆಯಲ್ಲಿ ಪೂರ್ಣ ತೃಪ್ತಿಪಟ್ಟು, ಆತನ ಕಾರ್ಯಕರ್ತವ್ಯಗಳಲ್ಲಿ ಯಾವುದೊಂದೂ ಅನುಮಾನ ಗ್ರಹಿಸದೆ, ತನ್ನ ಕಾರಖಾನೆಯ ಸಕಲ ಆಡಳಿತೆ ಲೆಕ್ಕಾಚಾರ ಮುಂತಾದವುಗಳನ್ನು ಭೀಮರಾಯನ ಕೈಯಲ್ಲೊಪ್ಪಿಸಿ ಕೊಟ್ಟು, ಹೆಸರಿಗೆ ಮಾತ್ರ ತಾನು ಯಜಮಾನನೆಂಬಂತೆ ನಿಶ್ಚಿಂತನಾಗಿ ಸುಖದಿಂದಿರ ಲಾರಂಭಿಸಿದನು. ಗಿರಾಕಿಗಳು ಈ ವಿದ್ಯಮಾನಗಳನ್ನರಿತು, ಇನ್ನು ಮುಂದೆ ಅವರ ವಹಿವಾಟುಗಳನ್ನು ನೆಟ್ಟಗೆ ಭೀಮರಾಯನ ಹತ್ತಿರವೇ ನಡೆಯಿಸತೊಡಗಿದರು. ಭೀಮರಾಯನು ಸ್ವಾರ್ಥ ಪರಾರ್ಥಗಳೆಂಬ ಭೇದವಿಲ್ಲದೆ ಕುಶಲ ಬುದ್ಧಿಯಿಂದಲೂ ಸ್ವಾಮಿಭಕ್ತಿಯಿಂದಲೂ ಆಡಳಿತೆಗಳನ್ನು ನಡೆಯಿಸುತ್ತಾ ನರಸಿಂಹ ಶಾಸ್ತ್ರಿಯನ್ನು ಸಂತೋಷಪಡಿಸಿದನು. ನರಸಿಂಹ ಶಾಸ್ತ್ರಿಯು ಪೂರ್ಣ ವಿಶ್ವಾಸವೂ ಸಂತೋಷವೂ ಉಳ್ಳವನಾಗಿ ಭೀಮರಾಯನ ಮನೆತನವೂ ತನ್ನ ಮನೆತನವೂ ಒಂದೇ ಎಂಬಂತೆ ನಡೆಯಿಸಿದನು. ಆದರೂ ಭೀಮರಾಯನಿಗೆ ಹೀಗೆಲ್ಲ ಸುಖವಿದ್ದರೂ, ಪುತ್ರಸಂತತಿ ಇಲ್ಲವೆಂಬುದೊಂದು ದೊಡ್ಡ ಕೊರತೆ ಇದ್ದುದರಿಂದ ಪುತ್ರಸಂತತಿಯನ್ನು ಪಡೆಯುವುದಕ್ಕೋಸ್ಕರ ಲಕ್ಷಬತ್ತಿಯ ವ್ರತ, ಹರಿಕೆಗಳು, ಹೋಮನೇಮಗಳು, ದಾನಧರ್ಮಗಳು, ಇವೇ ಮುಂತಾದ ಅನೇಕ ಸತ್ಕಾರ್ಯಗಳನ್ನು ಯಥಾಭಕ್ತಿಯಿಂದ ಮಾಡಿದರೂ ಫಲ ಪ್ರಾಪ್ತಿಯಾಗಲಿಲ್ಲ. ಪರಂತು ಇದೇ ರೀತಿಯಲ್ಲಿ ಮುಂದೂ ನಡೆದುಕೊಂಡರೆ ಸಂತತಿಯಾಗದಿರದೆಂಬ ನಂಬಿಕೆಯು ಆ ದಂಪತಿಗಳಿಗೆ ತುಂಬಾ ಇದ್ದುದರಿಂದ ಹೆಚ್ಚಾಗಿ ಚಿಂತೆಗೊಳ್ಳದೆ ಸುಖದಿಂದಿದ್ದರು.

## ೨

ಅದೇ ಅಗ್ರಹಾರದ ಕೇರಿಯಲ್ಲಿ ತಂಬೂರಿ ಬಾಳಾಜಿರಾಯನೆಂಬ ಒಬ್ಬ ಬಡ ವಯೋವೃದ್ಧನು ತನ್ನ ಮಗಂದಿರೊಡನೆ ವಾಸವಾಗಿದ್ದನು. ಬಾಳಾಜಿರಾಯನು ಮೊದಲು ಅನೇಕ ವರುಷಗಳ ಪರ್ಯಂತರ ಸರಕಾರಿ ಉದ್ಯೋಗವನ್ನು ಮಾಡಿ, ಮುದಿಪ್ರಾಯದಲ್ಲಿ "ನಾನ ಪರವರ್ಷಿ" ಹೊಂದಿದ್ದನು. ಆಗಿನ ಕಾಲದಲ್ಲಿ ಸರಕಾರಿ ಉದ್ಯೋಗಸ್ಥರಿಗೆ ಸಂಬಳ

ಬಹು ಕಡಿಮೆಯಾಗಿತ್ತು. ಈಗಿನಂತೆ ನೂರು ಇನ್ನೂರು ರೂಪಾಯಿ ಸಂಬಳವು ಬಹು ಉಚ್ಚಸ್ಥಾನಗಳಿಗಲ್ಲದೆ, ಕಾರಕೂನ ಮುಂತಾದ ಚಿಲ್ಲರೆ ಉದ್ಯೋಗಸ್ಥರಿಗೆ ಇಪ್ಪತ್ತು ರೂಪಾಯಿಗೆ ಮೀರಿದ ಸಂಬಳವಿರಲಿಲ್ಲ. ಬಾಳಾಜಿರಾಯನು ಹದಿನಾರು ರೂಪಾಯಿ ಸಂಬಳದ ಉದ್ಯೋಗದಲ್ಲಿದ್ದು "ನಾನ ಪರವರ್ಷಿ"ಯಲ್ಲಿ ತಿಂಗಳಿಗೆ ಎಂಟು ರೂಪಾಯಿ ಪಡೆಯುತ್ತಿದ್ದನು. ಅವನ ಮೂರು ಮಂದಿ ಮಕ್ಕಳಲ್ಲಿ ಇಬ್ಬರು ಸಾವಕಾರರಲ್ಲಿ ಶಾನಭೋಗಿಕೆಯ ಉದ್ಯೋಗವನ್ನು ಸಂಪಾದಿಸಿ, ಸುಂದರರಾಯನೆಂಬ ಇನ್ನೊಬ್ಬನು ಉದ್ಯೋಗ ದೊರಕದೆ ಅದನ್ನು ದೊರಕಿಸಿಕೊಳ್ಳುವ ಪ್ರಯತ್ನದಲ್ಲಿ ಸಾವಕಾರರಲ್ಲಿ ಉಮೇದುವಾರಿ ಮಾಡುತ್ತಾ ಇದ್ದನು. ಅವನಿಗೆ ಸುಶೀಲೆಯೆಂಬ ಹೆಂಡತಿಯೂ ಭಾಸ್ಕರನೆಂಬ ಐದಾರು ವರುಷ ಪ್ರಾಯದ ಒಂದು ಗಂಡು ಮಗುವೂ ಇದ್ದು, ಇನ್ನೂ ತಾನು ತಂದೆ ಅಣ್ಣಂದಿರನ್ನೇ ಹೊಂದಿರುವುದು ನಾಚಿಕೆಗೇಡೆಂದು ತಿಳಿದು, ಒಂದು ಉದ್ಯೋಗ ಸಂಪಾದನೆಯ ವಿಷಯವನ್ನೇ ಚಿಂತಿಸುತ್ತಾ ಇರುವಾಗ ನೆರೆಯಲ್ಲಿ ಭೀಮರಾಯನ ಸಂಪತ್ತು ಸ್ಥಿತಿಗಳನ್ನು ಚೆನ್ನಾಗಿ ತಿಳಿದ ಮೇಲೆ, ಇನ್ನು ತಾನು ಕಂಡ ಕಡೆಯಲ್ಲೆಲ್ಲ ಪ್ರಯತ್ನಿಸುವುದೇನು? ನರಸಿಂಹ ಶಾಸ್ತ್ರಿಯ ಕಾರಖಾನೆಯಲ್ಲೆ ಭೀಮರಾಯನ ಸಹಾಯದಿಂದೊಂದು ಉದ್ಯೋಗ ಪಡೆಯೋಣವೆಂದು ನಿಶ್ಚಯಿಸಿ, ಭೀಮರಾಯನನ್ನು ಆಶ್ರಯಿಸುತ್ತಾ, ಯಾವಾಗಲೂ ಅವನ ಬಳಿಯಲ್ಲಿ ತಾನೇ ಇದ್ದು, ಭಕ್ತಿ ವಾತ್ಸಲ್ಯದಿಂದಲೂ ಸ್ನೇಹಭಾವದಿಂದಲೂ ಹೇಳಿದ ಕೆಲಸಗಳನ್ನು ಮಾಡುತ್ತಾ ಇರುವಲ್ಲಿ, ಭೀಮರಾಯನು ಅವನ ಸೇವೆಗೆ ಮೆಚ್ಚಿ ಹೆಚ್ಚಾಗಿ ಅವನನ್ನು ತನ್ನ ಮನೆಯಲ್ಲೇ ನಿಲ್ಲಿಸಿಕೊಳ್ಳುತ್ತಾ, ಸಂದರ್ಭಾನುಸಾರವಾಗಿ ಕೂಡುವಷ್ಟು ಬೇಗ ಅವನನ್ನು ತನ್ನ ಸಹಾಯಿಯಾಗಿ ನೇಮಿಸಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿದನು.

ಪರಂತು ಭೀಮರಾಯನು ಯಾವುದೊಂದು ವಿಷಯವನ್ನಾದರೂ ತನ್ನ ಪತ್ನಿಯೊಡ ನಾಲೋಚಿಸದೆ ತೀರ್ಮಾನಿಸುತ್ತಿದ್ದಿಲ್ಲ. ಏಕೆಂದರೆ ಆಕೆಯ ಯೋಗ್ಯತಾಬಲದಿಂದಲೇ ತಾನು ದೊಡ್ಡಸ್ತಿಕೆಗೆ ಬಂದದ್ದೆಂಬುದು ಅವನ ಮನಸ್ಸಿಗೆ ಖಚಿತವಾಗಿ ತಿಳಿದಿತ್ತು. ಆದುದರಿಂದ ನರಸಿಂಹ ಶಾಸ್ತ್ರಿಯು ತನ್ನ ಮಗಳ ಕಲ್ಯಾಣವನ್ನು ಬೆಳೆಯಿಸುವುದಕ್ಕೋಸ್ಕರ ಊರುಮನೆಗೆ ಹೋಗಿರುತ್ತಿದ್ದ ಸಮಯದಲ್ಲಿ ಒಂದು ರಾತ್ರಿ ಭೀಮರಾಯನು ಯಕ್ಷಗಾನ ಪ್ರಸಂಗವೇ ಮುಂತಾದ ನಿತ್ಯನಿಯಮಗಳೂ ರಾತ್ರಿಯ ಭೋಜನವೂ ತೀರಿದ ಬಳಿಕ ಶಯ್ಯಾಗೃಹದಲ್ಲಿ ರೇಶ್ಮೆಯ ಆಸ್ಮಾನಗಿರಿ ಝುಲ್ಲರಿಗಳಿಂದಲೂ ಜಾಮ ದಾನಿಗವಸಣಿಕೆಗಳುಳ್ಳ ಹಾಸಿಗೆ ತಲೆದಿಂಬು ಬಾಲೇಸುಗಳಿಂದಲೂ, ಮಖಮಲ್ಲಿನ ವಲ್ಲಿ, ಮುಡಿವಾಳ ನವಿಲುಗರಿ ಚಾಮರಗಳಿಂದಲೂ, ಆಸ್ಮಾನಿರಂಗಿನ ಜಾಳಿಗೆ ವಸ್ತ್ರದ ತೆರೆಗಳಿಂದಲೂ, ಆಸ್ಮಾನಗಿರಿಯ ಮಧ್ಯಪ್ರದೇಶದಲ್ಲಿ ತೂಗಿಸಲ್ಪಟ್ಟ ಪೀತವರ್ಣದ ರೇಶ್ಮೆ ದಾರಗಳಿಂದಲೂ, ಇಂದ್ರನೀಲವರ್ಣದ ಜಾಲರುಗುಳಿಂದಲೂ, ಸುಶೋಭಿತವಾದ ತಾಂಬೂಲಕೋಶದಿಂದಲೂ ಅಲಂಕೃತವಾದ ಪಲ್ಲಂಗಿನಲ್ಲಿ ಪವಡಿಸುವುದಕ್ಕೆ ಹೋದಾಗ ಸಮಯ ನೋಡಿ–

"ಪತ್ನಿ ಶಿಖಾಮಣಿಯೇ, ಸುಂದರರಾಯನ ಸ್ಥಿತಿಗತಿಗಳೆಲ್ಲವನ್ನು ನೀನು ಸ್ವತಃ

ಬಲ್ಲೆಯಷ್ಟೆ? ಅನೇಕ ದಿವಸಗಳಿಂದ ನಮ್ಮನ್ನಾಶ್ರಯಿಸಿಕೊಂಡಿರುತ್ತಾನೆ, ನಮ್ಮಿಂದೇನಾದರೂ ತನ್ನ ಕಾಲಕ್ಷೇಪಕ್ಕೆ–"

"ಶಾಸ್ತ್ರಿಗಳು ಎಂದಿಗೆ ತಿರಿಗಿ ಬರುವರು?"

"ನಮ್ಮಿಂದೇನಾದರೂ ತನ್ನ ಕಾಲಕ್ಷೇಪಕ್ಕುಪಾಯವಾಗುವುದೆಂಬ ಅಭಿಲಾಷೆಯಿಂದ–"

"ಮಗಳ ಮದುವೆಯ ಸಂಬಂಧ ಶಾಸ್ತ್ರಿಗಳು ಎಷ್ಟು ಹಣ ಖರ್ಚು ಮುಟ್ಟಿಸುವ ಆಲೋಚನೆ ಮಾಡಿದ್ದಾರೊ?"

"ಬಡ ಹುಡುಗನು ನಾವು ಹೇಳಿದ ಸಕಲ ಕೆಲಸಗಳನ್ನು ಮಾಡುತ್ತಾ ಮುಂದೆ ನಾನೇ ಗತಿಯೆಂದು ನಂಬಿಕೊಂಡು–"

"ಈಗಿನ ಕಾಲದಲ್ಲಿ 'ಮದುವೆಗೆ ತಂದ ಅಕ್ಕಿ ಸೇಸೆಗೆ ಹೋಯಿತು' ಎಂಬ ಗಾದೆಯಂತೆ ಮದುವೆಯ ಖರ್ಚಿಗೆ ತೆಗೆದ ಹಣವು ಸೂಳೆಯರ ಪಾಲಿಗೆ ಹೋಗುತ್ತಿದೆಯಲ್ಲವೇ?"

"ಪಾಪದ ಹುಡುಗ! ಹಗಲಿರುಳು ನಮ್ಮ ಬಾಗಿಲಲ್ಲಿ ತಾನೇ ಬಿದ್ದುಕೊಂಡು ಇದ್ದಾನೆ!"

"ಹಾಡಿದ್ದೇ ಹಾಡು, 'ಕಿಸಬಾಯಿ ದಾಸ!' ಸುಂದರರಾಯನ ಧ್ಯಾನದಲ್ಲೇ ಮಗ್ನರಾದಿರಾ?"

"ಪ್ರಿಯಳೇ, ಗಾದೆ ಕೇಳಿದೆಯಷ್ಟೆ? 'ಅಜ್ಜಿಗೆ ಅರುವೆಯ ಚಿಂತೆ, ಮಗಳಿಗೆ ಮಿಂಡರ ಚಿಂತೆ, ಮೊಮ್ಮಗಳಿಗೆ ಖಜ್ಜಾಯದ ಚಿಂತೆ,' ಎಲ್ಲರಿಗೂ ಅವರವರ ಚಿಂತೆಯೂ ತಾಪತ್ರಯಗಳೂ ಇವೆಯಲ್ಲವೆ? ಜಾಣೆಯಾದ ನಿನಗೆ ಹೇಳತಕ್ಕದ್ದೇನಿದೆ?"

"ಸರಿ, ಸರಿ, – ಆದುದರಿಂದ ತಮಗೆ ಸುಂದರರಾಯನ ಚಿಂತೆಯೇ? ತಮಗೇಕವನ ಚಿಂತೆ?"

"ನಮ್ಮನ್ನು ಹೊಂದಿರುವವರ ಸುಖಕಷ್ಟದ ಅವಸ್ಥೆಗಳನ್ನು ಕುರಿತು ನಾವು ಚಿಂತಿಸುವುದು ಶಾಸ್ತ್ರಸಮ್ಮತವಾದ ವಿಷಯವಲ್ಲವೇ?"

"ಶಾಸ್ತ್ರ! ಶಾಸ್ತ್ರಪುರಾಣಗಳನ್ನೆಲ್ಲ ನಾವು ದಿನೇ ದಿನೇ ಕೇಳುತ್ತೇವಷ್ಟೆ? ಎಲ್ಲಾ ಕಾರ್ಯಗಳಲ್ಲಿ ಸ್ವಕಾರ್ಯವೇ ಶ್ರೇಷ್ಠವಾಗಿದೆ. ಆದುದರಿಂದ ನಮ್ಮ ಸ್ವಂತ ಕಾರ್ಯವನ್ನೇ ಮುಂದಾಗಿ ಆಲೋಚಿಸಬೇಕು. ಪರೋಪಕಾರವು ಎಲ್ಲಾ ಪುಣ್ಯಕಾರ್ಯಗಳಲ್ಲಿ ಶ್ರೇಷ್ಠವಾದದ್ದೇ ಸರಿ. ಪರಂತು ಪರೋಪಕಾರ ಮಾಡುವುದರಲ್ಲಿ ಪಾತ್ರಾಪಾತ್ರ ವಿಚಾರವಿರಬೇಕು. ಸುಂದರರಾಯನು ಉಪಕಾರಕ್ಕೆಂದೆಂದಿಗೂ ಪಾತ್ರನಲ್ಲ. ಅವನಂತಹ ದುಷ್ಕರ್ಮಿಯು ಲೋಕತ್ರಯದಲ್ಲೂ ಇಲ್ಲ."

'ದುಷ್ಕರ್ಮಿ! ಇದೇನು ಚೋದ್ಯ! ಸುಂದರರಾಯನ ದುಷ್ಟತನವನ್ನು ನಾನಿದುವರೆಗೆ ಕಂಡದ್ದು ಇಲ್ಲ; ಕೇಳಿದ್ದು ಇಲ್ಲ. ಇದರಲ್ಲೇನೋ ಗುಟ್ಟಿರಬೇಕು' ಎಂದು ಸ್ವಲ್ಪ ಸಮಯದವರೆಗೆ ಆಲೋಚಿಸಿ, –

"ಪ್ರಿಯಳೇ, ಬಹಳ ದಿವಸದಿಂದ ಸುಂದರರಾಯನು ನನ್ನ ಕಣ್ಣೆದಿರಿನಲ್ಲೇ ಇದ್ದು ಭಕ್ತಿಯಿಂದಲೂ ಶ್ರದ್ಧೆಯಿಂದಲೂ,–"

"ಶಾಸ್ತ್ರಿಗಳಲ್ಲಿ ಮದುವೆಗೆ ಯಾವ ಮೇಳದವರು ಹೋಗಿದ್ದಾರಂತೆ?"

“ನಾನು ಯಾವ ಸಮಯದಲ್ಲಿ ಯಾವ ಕೆಲಸವನ್ನು ಹೇಳಿದರೂ, ರವಷ್ಟಾದರೂ ಆಲಸ್ಯವಿಲ್ಲದೆ ತತ್‌ಕ್ಷಣ–”

“ಸರಿ, ನಾನು ಕೇಳುವುದೊಂದು, ತಾವು ಹೇಳುವುದೊಂದು! ನನ್ನ ಮಾತಿಗೆ ತುಸು ಲಕ್ಷ್ಯ ಕೊಡಬಾರದೇ?”

“ಪ್ರಿಯಳೇ, ಕ್ಷಮಿಸು. ನಾನು ಸುಂದರರಾಯನ ವಿಷಯವನ್ನೇ ಚಿಂತಿಸುತ್ತಿದ್ದೆನು. ಶಾಸ್ತ್ರಿಗಳು ರಾಜಾಮಣಿ ಭಾಮಾಮಣಿ ಇವರ ಮೇಳವನ್ನು ತಾನು ಹೋಗುತ್ತಾ ಸಂಗಡ ತಾನೇ ಕರೆದುಕೊಂಡು ಹೋಗಿದ್ದಾರಂತೆ. ಈ ಊರಲ್ಲಿದ್ದ ಮೇಳಗಳಲ್ಲಿ ಅದೇ ಊಚು ಮೇಳವಷ್ಟೆ?”

“ಏನು! ಸಂಗಡಲೇ ಕರೆದುಕೊಂಡುಹೋದರೇ? ಹಾಗಾದರೆ ಹಣವೆಲ್ಲ ಹುಡಿ ಹುಡಿ! ಮಾಡತಕ್ಕದ್ದೇನು! ಗಂಡಸರಿಗೆ ಒಂದು ಹುಚ್ಚು ಹಿಡಿದರೆ, ಅದರಿಂದ ಪರಿಹಾರ ದೊರಕುವುದೇ ದುರ್ಲಭ. ರಾತ್ರಿ ಹೆಚ್ಚಾಯಿತು, ಇನ್ನು ಪವಡಿಸೋಣ” ಎಂದು ಹೇಳುತ್ತಾ ಅಂಬಾಬಾಯಿಯೂ, ಭೀಮರಾಯನೂ ಪವಡಿಸಿದರು.

## ೩

ಕೆಲವು ದಿವಸಗಳು ಕಳೆದವು. ಸುಂದರರಾಯನು ಯಥಾಪೂರ್ವ ತನ್ನ ಉಮೇದುವಾರಿಕೆ, ಭೀಮರಾಯನ ಸೇವೆಯನ್ನು ಸಹ ನಡಿಸುತ್ತಾ ಇದ್ದು, ಭೀಮರಾಯನ ದಯೆಯನ್ನು ಇನ್ನೂ ಅಧಿಕವಾಗಿ ಸಂಪಾದಿಸಿದನು. ನರಸಿಂಹ ಶಾಸ್ತ್ರಿಯು ಮಗಳ ಮದುವೆ ತೀರಿದ ಬಳಿಕ ಕೊಂಚ ದಿವಸದಲ್ಲಿ ತಿರಿಗಿ ಬಂದನು. ಸುಂದರರಾಯನು ಸಮಯ ನೋಡಿ ಒಂದು ದಿವಸ ಭೀಮರಾಯನೊಡನೆ, ಶಾಸ್ತ್ರಿಯ ಕಾರಖಾನೆಯಲ್ಲಿ ತನಗೊಂದು ಸ್ಥಿರ ಉದ್ಯೋಗವನ್ನು ಕೊಡಿಸಬೇಕೆಂದು ಕೇಳಿಕೊಳ್ಳಲು ಭೀಮರಾಯನು–

“ಆ ವಿಷಯವನ್ನು ನಾನು ಇದಕ್ಕೆ ಮುಂಚೆಯೇ ಆಲೋಚಿಸಿದ್ದೇನೆ. ನಿನ್ನ ನಡತೆಯು ನನಗೆ ಚೆನ್ನಾಗಿ ಬೋಧ್ಯವಿದೆ. ಪರಂತು ಅಂಬಾಬಾಯಿಯು ನಿನ್ನ ವಿಷಯದಲ್ಲೇನೋ ಒಂದಾಕ್ಷೇಪ ಮಾತನಾಡುತ್ತಿದ್ದಳು. ಅದರ ಕೂಲಂಕಷ ವಿವರವು ಗೊತ್ತಾಗಲಿಲ್ಲ. ವಿಚಾರಿಸಿ ನೋಡೋಣವೆಂದರೆ ಶಾಸ್ತ್ರಿಗಳು ಬಂದಿರುವುದರಿಂದ ಕೆಲಸದ ತರಾತುರಿಯಲ್ಲಿ ಸಮಯವೇ ಸಿಕ್ಕುವುದಿಲ್ಲ. ಸ್ವಲ್ಪ ದಿವಸ ತಡೆ; ನಿನ್ನ ವಿಷಯವು ಚೆನ್ನಾಗಿ ನೆನಪಿನಲ್ಲಿದೆ. ನಿನಗೊಂದು ಸ್ಥಿತಿಗೆ ತಾರದೆ ಇರಲಾರೆ. ಯೋಚಿಸಬೇಡ” ಎಂದು ಆತನನ್ನು ಸಮಜಾಯಿಸಿದನು. ಹಾಗಾಗಲೆಂದು ಹೇಳಿ ಸುಂದರರಾಯನು ಸುಮ್ಮನಾದನು. ಆ ಬಳಿಕ ನಾಲ್ಕೈದು ದಿವಸದಲ್ಲಿ ನರಸಿಂಹ ಶಾಸ್ತ್ರಿಯು ಮುನ್ಸೀಫ್ ಕೋರ್ಟಿನಲ್ಲಿ ಒಂದಾನೊಂದು ಭೂಸಂಬಂಧವಾದ ವ್ಯವಹಾರವನ್ನು ನಡೆಯಿಸುವುದಕ್ಕೋಸ್ಕರ ಬೆಡಗೂರಿಗೆ ಹೋದನು. ಅದೇ ದಿವಸ ಮಧ್ಯಾಹ್ನದ ನಂತರ ಭೀಮರಾಯನಲ್ಲಿಗೆ ಆಗಾಗ್ಗೆ ಬರುತ್ತಾ ಹೋಗುತ್ತಾ ಇದ್ದ ತುಮಕೂರ

ದೇವಕಿಯು ತಿರುಗಾಡ ಬಂದಳು. ಅಂಬಾಬಾಯಿಯು ಅವಳಿಗೆ ಕುಳಿತುಕೊಳ್ಳುವುದಕ್ಕೊಂದು ಮಣೆಯನ್ನು ತರಿಸಿಕೊಟ್ಟು,–

"ದೇವಕಿ, ಕುಳ್ಳಿರು. ಮೇಲೋಗರವೇನು?"

"ಮೇಲೋಗರವೆಂಥಾದ್ದಮ್ಮಾ! ಒಂದು ಅವರೇ ಹುಳಿ. ಎಳೇ ಕಾಯಿ ಪಲ್ಯವೆಂದರೆ ಹತ್ತಿರ ಹೋಗಲೇಕೂಡದಷ್ಟೆ?" ಇದನ್ನು ಕೇಳಿ ಅಂಬಾಬಾಯಿಯು "ಎಲೋ ಶ್ಯಾಮಾ! ಒಳಗಗೋ ಬದನೆಕಾಯಿಗಳಿವೆ. ಒಂದ್ಹತ್ತಿಪ್ಪತ್ತು ತಂದು ದೇವಕಿಗೆ ಕೊಡು" ಎಂದು ಅಡಿಗೆಯವನನ್ನು ಕರೆದು ಹೇಳಲಾಗಿ ಆತನು ತಂದುಕೊಟ್ಟನು. ದೇವಕಿಯು ಅವುಗಳನ್ನು ಒಟ್ಟುಕೂಡಿಸಿಟ್ಟು,

"ಅಮ್ಮಾ, ನಿಮ್ಮ ಕೊಡುಗೈ ಕೀರ್ತಿಯು ದೊಡ್ಡದು. ದೇವರು ಇನ್ನೂ ಹೆಚ್ಚಿನ ಭಾಗ್ಯ ಕೊಡಲಿ."

"ದೇವಕೀ, ವಿಶೇಷ ವರ್ತಮಾನವೇನು?"

"ವಿಶೇಷವೇನಮ್ಮ! ಕಾವೇರಿಯು ಹೇಗಾದರೂ ಮರ್ಯಾದೆಯುಳಿಸಿಕೊಂಡಳು. ಅಲ್ಲವಾದರೆ ಹೊಟ್ಟೆಯಲ್ಲಿದ್ದ ಬಡ ಪ್ರಾಣಿಯ ಸಮೇತ ಆತ್ಮಹತ್ಯೆಮಾಡಿಕೊಳ್ಳಬೇಕಿತ್ತು?"

"ಅದೇನು ಕಥೆ?"

"ನೀವು ತಿಳಿಯಲಿಲ್ಲವೇ? ಪ್ರಾಪ್ತ್ಯಾನುಸಾರವಾಗಿ ಆಕೆಗೆ ಪ್ರಾಯ ತುಂಬುವ ಮೊದಲೇ ವೈಧವ್ಯ ಬಂತು. ಪ್ರಾಯ ತುಂಬಿದ ನಂತರ–ಮನುಷ್ಯ ಸಂಸಾರವಲ್ಲವೇ? ಗ್ರಹಚಾರ ದೋಷದಿಂದೇನೋ ಅವಿಚಾರ ನಡೆದು ಅದರ ಫಲವು ಚೆನ್ನಾಗಿ ಕಾಣತೊಡಗುವವರೆಗೆ ಬುದ್ಧಿಹೀನರಾದ ತಾಯಿತಂದೆಗಳು ಯಾವ ಉಪಾಯವನ್ನಾದರೂ ಮಾಡದೆ ಸುಮ್ಮಗಿದ್ದು, ಆಮೇಲೇನುಮಾಡುವುದೆಂದು ತಿಳಿಯದೆ ಕಂಗೆಟ್ಟು ಕಟ್ಟಕಡೆಗೆ ನನ್ನಲ್ಲಿಗೆ ಬಂದು, 'ದೇವಕೀ, ಏನಾದರೂ ಒಂದು ದಾರಿ ಮಾಡಿಕೊಡುತ್ತೀಯಾ?' ಎಂದು ಪ್ರಲಾಪಿಸಲು ಕ್ಷಣಮಾತ್ರದಲ್ಲಿ ನಾನು ಹೋಗಿ ಬಹು ಸುಲಭದಿಂದ ಒಂದೇ ಔಷಧಿಯಲ್ಲಿ ಬಸುರು ಇಳಿಸಿ ಬಂದೆನು. ಹುಡುಗಿಯು ಈಗ ಸುಖದಲ್ಲಿದ್ದಾಳೆ."

"ಇದೆಲ್ಲ ನೆರೆಕರೆಯವರಿಗೆ ಗೊತ್ತಾಗಲಿಲ್ಲವೆ?"

"ಹೇಗೆ ಗೊತ್ತಾಗುವುದು? ಸಾಧಾರಣವಾಗಿ ಯಾವಾಗಲೂ ತಿನ್ನುವ ವಸ್ತುವಿನಲ್ಲಿ ಯಾರ ಕಣ್ಣಿಗೂ ಕಾಣದ ಹಾಗೆ ಕೂಡಿಸುವ, ನೀರಿನಂತೆ ತೆಳ್ಳಗಿರುವ ಔಷಧಗಳಿವೆ. ಅವುಗಳನ್ನು ಸುಣ್ಣದಲ್ಲಿ ಕಲಸಿ ವೀಳ್ಯದೆಲೆ ತಿಂದರೆ ಸರಿ, ಕೂಡಲೇ ಗರ್ಭವಿಳಿದು ಹೋಗುವುದು. ನಾನಲ್ಲಿಗೆ ಹೋಗಿ ನಾಲ್ಕು ಮಾತುಗಳನ್ನಾಡಿ ಹುಡುಗಿಗೆ ಒಂದೆಲೆ ತಿನ್ನಿಸಿದ್ದೇ ಸರಿ, ದೋಷವೆಲ್ಲ ಇಳಿದುಹೋಯಿತು."

"ಶಾಭಾಸು ದೇವಕೀ! ಕುಟುಂಬದ ಮರ್ಯಾದೆ ತಾನೇ ಅಲ್ಲ, ಜಾತಿಯ ಮರ್ಯಾದೆ ಸಹ ಉಳಿಸಿದೆ. ನಿನಗೆ ಬೇರೆ ಇದೇ ತರದ ಪ್ರಯೋಗಗಳು ಸಹಾ ಗೊತ್ತಿವೆಯಲ್ಲವೆ?"

"ಎಲ್ಲಾ ಗೊತ್ತಿವೆಯಮ್ಮ. ಇಷ್ಟು ಗೊತ್ತಿದ್ದೇ ಈ ಗತಿಗೇಡು. ಕಳೆದ ರಾಮನವಮಿಯ

ದಿವಸ ಒಂದು ಕೆಲಸವಾಯಿತು. ಕೇಳುತ್ತೀರಾ? ಹೇಳಿದ ಮೇಲೆ ನೀವು ಬಹಿರಂಗಪಡಿಸ ಬಾರದಷ್ಟೆ? ನಾನು ಸುಮ್ಮನೆ ಒಂದು ಹಣತಿ ಎಣ್ಣೆ ಖರ್ಚಿಲ್ಲದೆ ಕೆಟ್ಟುಹೋಗುವೆನು."

"ಛೀ ಛೀ! ನಾನೆಂದೂ ಬಹಿರಂಗಪಡಿಸುವೆನೇ? ನನ್ನ ಸ್ವಭಾವ ನೀನಿನ್ನೂ ಅರಿಯೆಯಾ? ಒಂದು ಮಾತನ್ನು ಹೇಳು ನೋಡು."

"ಬ್ರಹ್ಮಕೊಳದ ರಸ್ತೆಯಲ್ಲಿ ಮೂರಂಗಡಿ ಕೃಷ್ಣಪ್ಪ ಸೆಟ್ಟಿಯ ಎರಡನೇ ಹೆಂಡತಿ ನಾಗಮ್ಮನಿಗೂ ಆಕೆಯ ಭಾವನೆಂಟ ದಾಮೋದರ ಸೆಟ್ಟಿಗೂ ಚಿಕ್ಕಂದಿನಿಂದಲೇ ಅನ್ಯೋನ್ಯ ಮಮತೆ ಇತ್ತು. ಆದರೆ ಆಂತರ್ಯದಲ್ಲಿ ಅವರಿಬ್ಬರೂ ಒಂದೇ ತಾಯಿತಂದೆಗಳ ಮಕ್ಕಳಂತೆ ಶುದ್ಧ ಮನಸ್ಕರಾಗಿದ್ದರು. ಈ ಅಂತರಂಗವನ್ನು ತಿಳಿಯದೆ ಅವರ ನೆರೆಯವನಾದ ರಾಘವ ಸೆಟ್ಟಿಯು ಅವರನ್ನು ಕುರಿತು ಕ್ಷುದ್ರಾ ಹೇಳುತ್ತಿದ್ದನು. ಕೃಷ್ಣಪ್ಪ ಸೆಟ್ಟಿಯು ಕೆಲವು ಸಾರಿ ಅವನನ್ನು ಜರೆದು ವಾಗ್ದಂಡಿಸಿದರೂ, ಅದನ್ನು ಕೇಳದೆ ಅವನು ಇನ್ನೂ ಹೆಚ್ಚಿನ ಕ್ಷುದ್ರಗಳನ್ನು ಪ್ರಕಟಿಸಿದುದರಿಂದ ಕಳೆದ ರಾಮನವಮಿಯ ದಿವಸ ಕೃಷ್ಣಪ್ಪ ಸೆಟ್ಟಿಯು ನಾನಿದ್ದಲ್ಲಿಗೆ ಬಂದು, 'ದೇವಕೀ, ನೀನು ಕೇಳುವುದನ್ನು ಕೊಡುತ್ತೇನೆ. ರಾಘವ ಸೆಟ್ಟಿಗೊಂದು ದಾರಿ ತೋರಿಸುವಿಯಾ?' ಎಂದು ಬಹಳ ನಮ್ರತೆಯೊಡನೆ ಕೇಳಿ ವತ್ತಾಯಪಡಿಸಲು, 'ಸೆಟ್ಟಿಯರೇ, ನೀವು ಹೋಗಿರಿ, ಎರಡು ಗಳಿಗೆಯ ನಂತರ ನನ್ನ ಮಗ ಗೋಪಣ್ಣನು ನಾಲ್ಕು ಬಾಳೇಹಣ್ಣುಗಳನ್ನು ತರುವನು. ಅವುಗಳಲ್ಲಿ ತೊಟ್ಟು ಮುರಿಯಲ್ಪಟ್ಟ ಹಣ್ಣನ್ನು ರಾಘವ ಸೆಟ್ಟಿಗೆ ತಿನ್ನುವುದಕ್ಕೆ ಕೊಡಿರಿ. ಉಳಿದ ಮೂರು ಹಣ್ಣುಗಳನ್ನು ನೀವ್ಯಾರಾದರೂ ಆತನು ತಿನ್ನುವ ಸಮಯದಲ್ಲೇ ಆತನ ಸಮಕ್ಷಮದಲ್ಲೇ ತಿಂದುಬಿಡಿರಿ. ಕೂಡಲೇ ರಾಘವ ಸೆಟ್ಟಿಯು ಮನೆಗೆ ಹೋಗಲಿ, ಹೋದ ಐದು ನಿಮಿಷಗಳಲ್ಲಿ ಕೆಲಸ ನೆಟ್ಟಗಾಗುತ್ತೆ. ನೋಡಿರಿ!' ಎಂದು ಹೇಳಿ, ಕೃಷ್ಣಪ್ಪ ಸೆಟ್ಟಿಯನ್ನು ಮನೆಗೆ ಕಳುಹಿಸಿದೆನು. ಆ ಬಳಿಕ ಹೇಳಿದ ಹಾಗೆಯೇ ಗೋಪಣ್ಣನ ಕೈಯಲ್ಲಿ ಹಣ್ಣುಗಳನ್ನು ಕಳುಹಿಸಿದೆನು. ಅನಂತರದ ವರ್ತಮಾನ ನಿಮಗೆ ಗೊತ್ತಿದೆಯಷ್ಟೆ? ಇಂಥಾ ಮಹತ್ತಾದ ಕೆಲಸಕ್ಕೆ ಪ್ರತಿಫಲವಾಗಿ ನನಗೆ ಸಿಕ್ಕಿದ್ದೇನೆಂದು ಕೇಳುತ್ತೀರಾ? ಇಕ್ಕೊಳ್ಳಿ, ಈ ಉಟ್ಟ ಸೀರೆಯೊಂದು ಮತ್ತು ಐದು ರೂಪಾಯಿ! ಹೀಗಾದರೆ ಗತಿಗೇಡಲ್ಲದೆ ಮತ್ತೇನು?"

"ಗೋಪಣ್ಣನೆಂದರ್‍ಯಾರು? ನಮ್ಮಲ್ಲಿ ಪ್ರಸಂಗದ ಸಮಯದಲ್ಲಿ ಯಾವಾಗಲೂ ಬರುವ ಹುಡುಗನೆಯೇ?"

"ಹೌದಮ್ಮ, ಹೌದು. ಆತನು ಯಾವ ಸಂಗತಿಯನ್ನಾದರೂ ಅರಿಯದ ಬೊಡ್ಡನು."

"ಮತ್ತೇನು ವಿಶೇಷ ವರ್ತಮಾನ, ದೇವಕಿ?"

"ವಿಶೇಷವೇನೂ ಇಲ್ಲವಮ್ಮಾ. ನಾನೀಗ ಮನೆಗೆ ಹೋಗಲೇ?"

"ನೀನಿಲ್ಲಿಗೆ ಬಂದದ್ದೇಕೆ? ಕೆಲಸವೇನಾದರೂ ಇದ್ದರೆ ಹೇಳು."

"ಸುಮ್ಮಗೇ ತಿರುಗಾಡುತ್ತಾ ಬಂದೆನು. ನನ್ನ ಬಾಳೇನಮ್ಮ? 'ಎತ್ತಿದವರ ಕೈಕೂಸು' ಎಂಬ ಮಾತಿನಂತೆ ನಿಮ್ಮಂತಹ ಪುಣ್ಯಾತ್ಮರ ದಯವಿದ್ದರೆ, ನನ್ನ ದಿವಸಗಳು ಹೋದಾವು. ನಾನು ಮಿಠಾಯಿ ಮಾಡಲೂ ಬಲ್ಲೆ. ಆದರೆ ಬರೇ ಮಿಠಾಯಿ ಮಾಡುವುದರಿಂದ ತಾನೇ

ಈಗ ದಿವಸಗಳು ಹೋಗುವುದಿಲ್ಲ. ಹಿಂದಿನ ದಿವಸಗಳಲ್ಲಾದರೋ ರಂಗು, ಪಮ್ಮಚ್ಚು, ತಿಮ್ಮು ಎಂಬ ಪ್ರಖ್ಯಾತಿಪಟ್ಟ ಮೇಳದವರಿರುವಾಗ ಒಬ್ಬೊಬ್ಬಳಲ್ಲಿ ದಿವಸ ಒಂದಕ್ಕೆ ಎಷ್ಟು ಕಡಿಮೆ ಎಂದರೂ ಅರ್ಧ ಮಣಮಿಠಾಯಿ ಬೇಕಿತ್ತು. ಈಗಿನ ಕಾಲ–ಅದೆಲ್ಲಾ ಏನು ಹೇಳಲಿ! ಬರುತ್ತೇನಮ್ಮ."

"ಒಳ್ಳೇದು, ದೇವಕಿ, ಆಗಾಗ್ಗೆ ಬರುತ್ತಲೇ ಇರು, ಬಲ್ಲಿಯಾ?"

"ಹಾಗಾಗಲಮ್ಮಾ" ಎಂದು ಹೇಳಿ ದೇವಕಿಯು ಎದ್ದು ಮನೆಗೆ ಹೋದಳು.

## ೪

ಆ ದಿನ ಸೂರ್ಯಾಸ್ತಮಯವಾದ ನಂತರ ಭೀಮರಾಯನು ಮನೆಗೆ ಬಂದು ಸಾಯಂಕಾಲದ ಫಲಾಹಾರವನ್ನೂ ಆ ಮೇಲೆ ಯಕ್ಷಗಾನದಲ್ಲಿ ವಿರಾಟಪರ್ವದ ಗೋಗ್ರಹಣ ವೆಂಬ ಪ್ರಸಂಗವನ್ನೂ ಮುಗಿಸಿ, ರಾತ್ರಿಯ ಭೋಜನವನ್ನೂ ತೀರಿಸಿ, ಪತ್ನೀಸಮೇತ ಶಯ್ಯಾಗೃಹವನ್ನು ಪ್ರವೇಶಿಸಿ, ವ್ಯಾಪಾರ, ಗೃಹಕೃತ್ಯ ಇವೇ ಮುಂತಾದ ವಿಷಯಗಳನ್ನು ಮಾತನಾಡುತ್ತಾ ಇರುವಾಗ, ಸಮಯ ನೋಡಿ, ಸುಂದರರಾಯನ ವಿಷಯವನ್ನು ಮೆಲ್ಲನೆ ಪ್ರಸ್ತಾಪಕ್ಕೆ ತರಲು, ಅಂಬಾಬಾಯಿಯು ಕೋಪೋದ್ರೇಕಪಟ್ಟು, "ಅಯ್ಯೋ! ಕ್ಷಣೇ ಕ್ಷಣೇ ಸುಂದರರಾಯನ ಹೆಸರನ್ನು ತೆಗೆದು ನನ್ನನ್ನೇಕೆ ಪೀಡಿಸುವುದು? ಅವನನ್ನು ಕಂಡರೆ, ಅವನ ಹೆಸರು ಕಿವಿಯಲ್ಲಿ ಬಿದ್ದರೆ, ನನಗೆ ಮೈ ಎಲ್ಲಾ ಉರಿಯುತ್ತೆ. ತಮಗೇಕೆ ನನ್ನ ಮೇಲಿನ ಪ್ರೀತಿಯು ಕುಂದುತ್ತಾ ಬಂದು, ಸುಂದರರಾಯನ ಮೇಲೆ ವಾತ್ಸಲ್ಯ ಹೆಚ್ಚುತ್ತಾ ಬರುತ್ತೆ? ಅಯ್ಯೋ! ಇಂಥಾ ಕಷ್ಟವನ್ನು ನಾನು ಅನುಭವಿಸಬೇಕಾಯಿತಷ್ಟೆ! ಇಂತಹ ಬಾಳುವೆಗಿಂತ ಮರಣವೇ ಲೇಸು! ದೇವರೇ! ನನಗೇಕೆ ಬೇಗ ಕಳುಹಿಸುವುದಿಲ್ಲ! ಈ ದುಃಖದಲ್ಲಿ ನಾನು ಬಳಲಿ ಬೆಂಡಾದೆ, ಏ ದೇವರೇ!" ಎಂದು ಬಿಕ್ಕಿ ಬಿಕ್ಕಿ ಅತ್ತು ಪ್ರಳಾಪಿಸಲು ಭೀಮರಾಯನು ಮನಸ್ಸಿನಲ್ಲಿ ಗಲಿಬಿಲಿಯುಂಟಾದವನಾಗಿ,

"ಪ್ರಿಯಳೇ, ಈ ತರದ ಮಾತುಗಳೆಂಬ ಅಂಬುಗಳಿಂದ ನನ್ನ ಹೃದಯವನ್ನೇಕೆ ಸೀಳುತ್ತಿದ್ದಿ? ಸುಂದರರಾಯನಿಂದ ನಮಗೆ ಬಂದಿರುವ ಕಂಟಕವಾವುದು? ಸ್ವಲ್ಪ ಮಾತ್ರ ಹೇಳು. ಅವನನ್ನು ಗುಂಡಾಂತರ ಮಾಡುವುದು ಯಾವ ದೊಡ್ಡ ಮಾತು? ನಿನ್ನ ಯೋಗ್ಯತೆಯ ಬಲದಿಂದಲೂ ದೇವರು ನನಗೆ ಕೊಟ್ಟ ಬುದ್ಧಿಯ ಬಲದಿಂದಲೂ ಕ್ಷಣಮಾತ್ರದಲ್ಲಿ ಅವನ ಚಕಣಾಚೂರು ಹಾರಿಸಿಬಿಡಬಹುದು. ವೃಥಾ ದುಃಖದಿಂದ ಕರಗಬೇಡ. ಆತನಿಂದ ಬಂದಿರುವ ದೋಷವೇನೆಂದು ಪ್ರೀತಿಯಿಂದ ಹೇಳು."

"ಮೊನ್ನೆ ಇಲ್ಲಿಗೆ ನೆರೆಮನೆ ಸೀತಾಬಾಯಿ ಬಂದಿದ್ದಳು. ನೆರೆಕರೆಯ ಬೇರೆ ಕೆಲವು ಮಂದಿ ಹೆಂಗಸರು ಸಹಾ ಇದ್ದು ವಿವಿಧ ವಿಷಯಗಳನ್ನು ಮಾತನಾಡುತ್ತಾ ಇರುವಲ್ಲಿ, ನರಸಿಂಹ ಶಾಸ್ತ್ರಿ – ಏ ದೇವರೇ! ಇಂತಹ ಕಷ್ಟ ಹೇಗೆ ಸೈರಿಸಲಿ!"

"ಪ್ರಾಣಪ್ರಿಯಳೇ, ನಿನ್ನ ಮನಸ್ಸಿನಲ್ಲಿದ್ದುದನ್ನು ಪೂರ್ತಿಯಾಗಿ ಹೇಳದೆ, ಒಂದೊಂದೇ ಅಪೂರ್ಣವಾದ ಮಾತನ್ನಾಡಿ ನಿಲ್ಲಿಸಿದರೆ, ನನಗೊಂದೂ ತಿಳಿಯದೇ ಬಹಳ ಸಂಕಟವಾಗುತ್ತೆ. ಸಂಕೋಚಪಡದೆ ಬೇಗನೇ ಹೇಳು."

"ನರಸಿಂಹ ಶಾಸ್ತ್ರಿ– ಅಯ್ಯೋ, ದೇವರೇ! ಹೇಗೆ ಸೈರಿಸಲಿ! ಇಗೋ ಇಲ್ಲಿ ಮುಟ್ಟಿ ನೋಡಿರಿ, ಇದೇನಾಗುತ್ತೆ? ಈಗಲೇ ನನಗೆ ಮರಣ ಬರುತ್ತದೆಯೇ? ಬಂದರೆ ಬರಲಿ! ಅತ್ಯುತ್ತಮವಾಯಿತು! ಈ ಅವಮರ್ಯಾದೆಯ ಸಂಕಟಕ್ಕಿಂತ ಮರಣವೇ ಲೇಸು!"

ಭೀಮರಾಯನು ಅವಳ ಎದೆಗುಂಡಿಯನ್ನು ಮುಟ್ಟಿ ನೋಡಿ "ಪ್ರಿಯಳೇ, ನಿನ್ನ ಎದೆಗುಂಡಿಯು ಹಾರುತ್ತೆ, ಅದು ನಿನ್ನ ಮನಸ್ಸಿನ ಕಳವಳದ ದೆಸೆಯಿಂದಲ್ಲದೆ ಬೇರೇನಲ್ಲ, ಭಯಪಡಬೇಡ" ಎಂದು ತುಸ ಬೆನ್ನು ತಟ್ಟಿ ಪಲ್ಲಂಗದ ಸಮೀಪವಿದ್ದ ಸಂಗಮೀರಕಲ್ಲಿನ ಮೇಜಿನಲ್ಲಿದ್ದ ಗುಲಾಬದಾನಿಯಿಂದ ಸ್ವಲ್ಪ ಪನ್ನೀರನ್ನು ಅವಳ ಕಣ್ಣುಗಳಿಗೆ ಮುಟ್ಟಿಸಿ, ಮೈಯ ಮೇಲೆಯೂ ಚಿಮಿಕಿಸಿ, ಬೀಸಣಿಗೆಯಿಂದ ಸ್ವಲ್ಪ ಗಾಳಿಹಾಕಿ ವಿಶ್ರಾಂತಿಪಡಿಸಿದ ಮೇಲೆ, "ಪ್ರಿಯಳೇ, ಈಗ ಹೇಳು" ಎನಲು,

" 'ನರಸಿಂಹ ಶಾಸ್ತ್ರಿಯು ಹೆಚ್ಚಾಗಿ ನಿಮ್ಮ ಮನೆಯಲ್ಲೇ ಕಾಣಸಿಕ್ಕುತ್ತಾನೆ, ಅದೇನು?' ಎಂದು ಸೀತಾಬಾಯಿಯು ಆ ಎಲ್ಲಾ ಹೆಂಗಸರ ಮುಂದೆ ನನ್ನನ್ನು ಕುರಿತು ಕೇಳಿದಳು; ಹಾಗೆ ಕೇಳಿದ್ದರಲ್ಲಿಯೇ ವಿಪರೀತವೇನೂ ಇದ್ದಿಲ್ಲ. ಸಾವಕಾರನು ತನ್ನ ಗುಮಾಸ್ತನಲ್ಲಿಗೆ ಬರುತ್ತಾ ಹೋಗುತ್ತಾ ಇರುವುದು ಅಪೂರ್ವವಾದ ಸಂಗತಿಯಲ್ಲ. ಪರಂತು ಸೀತಾಬಾಯಿಯು ಹಾಗೆ ಕೇಳುವಾಗ ಕಿರಿನಗೆ ನಗುತ್ತಾ ಹತ್ತಿರ ಕುಳಿತುಕೊಂಡಿದ್ದ ಲಲಿತಾ ಬಾಯಿಯ ತೊಡೆಯನ್ನು ಬೆರಳಿನಿಂದ ಕುಕ್ಕಿ, ತನ್ನ ಮುಖವನ್ನು ತಿರಿಗಿಸಿ ದೊಡ್ಡ ನಗೆ ಬಂದುದನ್ನು ಅಲ್ಲಲ್ಲೇ ಅಣಗಿಸಿದಳು. 'ಸುಂದರರಾಯನು ಆ ದಿವಸ ನಮ್ಮಲ್ಲಿಗೆ ಬಂದಾಗ ನರಸಿಂಹ ಶಾಸ್ತ್ರಿ, ನರಸಿಂಹ ಶಾಸ್ತ್ರಿ, ಎಂದನೇಕ ಸಾರಿ ಹೆಸರುತೆಗೆದು ಗಂಡಸರ ಹತ್ತಿರವೇನೋ ಮಾತಾಡಿಕೊಂಡಿದ್ದನು' ಎಂದು ಇನ್ನಷ್ಟು ನಕ್ಕಳು. ಕೂಡಿದ ಸ್ತ್ರೀಯರೆಲ್ಲ ಒಬ್ಬಾಕೆಯ ಮುಖ ಇನ್ನೊಬ್ಬಾಕೆ ನೋಡಿ ಸ್ವಲ್ಪ ಸ್ವಲ್ಪ ನಗಾಡಿದರು. ತತ್ಕಾಲ ಯಾವುದೊಂದೂ ಉತ್ತರ ಕೊಡುವುದಕ್ಕೆ ನನಗೆ ಸೂಚಿಸದೆ ನಾನಲ್ಲೇ ಸತ್ತಂತಾದೆನು. ಇನ್ನು ಈ ಬಾಳುವೆ ಏಕೆ? ತ್ರಿಕರಣಶುದ್ಧವಾಗಿಯೂ ಯಾವುದೊಂದೂ ಅವಿಚಾರದ ಕೆಲಸಕ್ಕೆ ಹೋಗದೆಯೂ ಇರುವಾಗ ಹೀಗೆ ನಿಷ್ಕಾರಣವಾಗಿ ಅಪವಾದವನ್ನು ಹುಟ್ಟಿಸಿ ನಿವರ್ತಿಸಕೂಡದಾದ ಹಾವಳಿಯನ್ನುಂಟು ಮಾಡಿದ ಸುಂದರರಾಯನನ್ನು ತಾವು ಕ್ಷಣೇ ಕ್ಷಣೇ ಹೊಗಳುವುದು, ತದ್ವಾರ ನನಗೆ ಸಹಿಸಕೂಡದ ಮನೋವೇದನೆಯನ್ನುಂಟುಮಾಡುವುದು – ಅಯ್ಯೋ! ಏನು ಹೇಳಲಿ!"

"ಪ್ರಿಯಳೇ, ನೀನೀಗ ಅತ್ತು ಪ್ರಳಾಪಿಸಿ ಗದ್ದಲಕ್ಕೆ ಕಾರಣಮಾಡಬಾರದಷ್ಟೆ? ಇಂತಹ ವಿಷಯಗಳನ್ನು ಗೋಪ್ಯವಾಗಿಟ್ಟುಕೊಂಡು ನಮ್ಮ ಅಪವಾದವನ್ನು ಬೊಗಳುವವರಿಗೆ ಗುಪ್ತೋಪಾಯದಿಂದ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿಸಬೇಕು. ಸುಮ್ಮಗಿರು."

"ತಾವು ಈಗ ಹೀಗೆಲ್ಲಾ ಮಾತನಾಡುವುದು ಸರಿಯೇ; ಆದರೆ ಯಾವ ಕೆಲಸದಲ್ಲೂ

ಮುಂದರಿಸುವುದಕ್ಕೆ ತಮಗೆ ಧೈರ್ಯವೇ ಕಡಿಮೆಯಷ್ಟೆ. ಇದ್ದ ಮಾತು ಹೇಳುತ್ತೇನೆ. ಸಿಟ್ಟಾಗಬೇಡಿರಿ. ಹೆಣ್ಣು ಜನ್ಮವು ಯಾವ ಪ್ರಾಣಿಗೂ ಜನ್ಮಾಂತರಕ್ಕೂ ಬೇಡ."

"ಪ್ರಿಯಳೇ, ಇಂತಹ ಮಾತುಗಳಿಂದ ನನ್ನ ಹೃದಯವನ್ನು ಕತ್ತರಿಸಿ ಕೊಲ್ಲಬೇಡ. ನಿನ್ನ ಕೈ ಹಿಡಿದಂದಿನಿಂದಲ್ಲವೇ ನಾನೊಂದು ಮನುಷ್ಯರೂಪಕ್ಕೆ ಬಂದುದು? ನೀನು ಯಾವುದಾದರೂ ಒಂದಾಲೋಚನೆಯನ್ನು ಹೇಳಿದರೆ, ನಾನು ಅದೇ ಪ್ರಕಾರವಲ್ಲದೆ ಬೇರೆ ಯಾವ ತರದಲ್ಲೂ ನಡೆಯಲಾರೆನು. ಇದೊಂದು ಪ್ರಮಾಣವಾಕ್ಯವೆಂದು ತಿಳಿದಿರು. ಹೆಚ್ಚು ಮಾತುಗಳಿಂದ ಪ್ರಯೋಜನವೇನು? ಈಗ ಮಾಡಬೇಕಾದುದೇನೆಂದು ಹೇಳು. ನಿನ್ನ ಅಪೇಕ್ಷೆಯನ್ನು ಪೂರಯಿಸುವುದಕ್ಕೆ ಭಗೀರಥ ಪ್ರಯತ್ನಗಳನ್ನು ಮಾಡುವೆನು."

"ಸುಂದರರಾಯನು ಜೀವಂತನಾಗಿರುವವರೆಗೆ ನನಗೆ ಸುಖವಿರದು. ಅದಲ್ಲದೆ ಅವನು ಬದುಕಿರುವುದು ನಮ್ಮ ಮನೆತನದ ಮುಂದಿನ ವೃದ್ಧಿಗೆ ಅಪಾಯವೇ ಸರಿ."

"ಆದುದರಿಂದ ನಾನೇನು ಮಾಡಬೇಕು ಹೇಳು."

"ತಮಗೆ ಸುಲಭವಾದ ಒಂದಾಲೋಚನೆಯನ್ನು ಹೇಳುತ್ತೇನೆ. ಆ ಮೇರೆಗೆ ಪ್ರವರ್ತಿಸಿದಲ್ಲಿ ಪರಿಣಾಮವಿದೆ."

"ತಥಾಸ್ತು–ಹೇಳು."

"ರಾಘವ ಸೆಟ್ಟಿಯ ವರ್ತಮಾನವನ್ನು ಕೇಳಿದ್ದೀರಾ?"

"ಆತನು ಮರಣಪಟ್ಟನೆಂದು ಮಾತ್ರ ಕೇಳಿದ್ದೇನೆ; ಮರಣದ ಸಂಗತಿಗಳನ್ನರಿಯೆ."

"ದೇವಕಿಯನ್ನು ಕರೆಯಿಸಿ ಆ ವಿಷಯವನ್ನು ಮಾತನಾಡಿ ನೋಡಿರಿ. ಎಲ್ಲವೂ ಗೊತ್ತಾಗುವುದು."

"ನಾಳಿಗೆ ತಾನೇ ಕರೆಯಿಸುತ್ತೇನೆ." (ತುಸ ಹೊತ್ತು ಮನಸ್ಸಿನಲ್ಲೇ ಆಲೋಚಿಸಿ) "ಪ್ರಿಯಳೇ, ನಾವು ಮಹಾ ಸತ್ಕರ್ಮಿಗಳೂ ಭಾಗ್ಯವಂತರೂ ಎಂದು ಊರಿನಲ್ಲೆಲ್ಲಾ ಪ್ರಸಿದ್ಧವಾಗಿದೆ. ನಾವು ಈಗ ನೆನಸಿದ ಕೆಲಸವು ಕೈಗೂಡಿ ಬಂದು, ಆ ಮೇಲೆ ಅದು ಊರಿನಲ್ಲೆಲ್ಲಾ ಬಯಲಾದರೆ ದುಷ್ಕೀರ್ತಿಗೂ ಸರಕಾರದವರ ಕೈಯಲ್ಲಿ ಶಿಕ್ಷೆಗೂ ಗುರಿಯಾಗಬೇಕಾದೀತೋ, ಏನೋ, ಎಂಬ ಅನುಮಾನ ಹುಟ್ಟಿದೆ."

"ಇದೇಯೆ ತಮ್ಮ ಧೀರತೆ? ಸುಂದರರಾಯನು ದುಷ್ಟನೆಂಬುದು ತಮ್ಮ ಮನಸ್ಸಿಗೆ ಖಚಿತವಾಗಿದೆಯೇ?"

"ಹೌದು, ನೀನು ಹೇಳಿದ ಮೇಲೆ ಹೇಗೆ ಸಂಶಯಿಸುವುದು?"

"ಹಾಗಾದರೆ ದುಷ್ಟರನ್ನು ನಿಗ್ರಹಿಸುವುದು ಬಹು ಯೋಗ್ಯವಾದ ಕಾರ್ಯವಲ್ಲವೇ? ಪರಮಾತ್ಮನು ಹತ್ತು ಅವತಾರಗಳನ್ನೆತ್ತಿದ್ದೇಕೆಂಬುದನ್ನು ಇಷ್ಟೆಲ್ಲ ಪುರಾಣಗಳನ್ನು ತಿಳಿದ ತಮಗೆ ಹೇಳಬೇಕೆ? ಅಯೋಗ್ಯವಾದ ಕೆಲಸವನ್ನು ದೇವರು ಎಂದಾದರೂ ಮಾಡುವನೇ?"

"ಸರಿ, ಸರಿ, ಅನುಮಾನದ ಒಂದಂಶ ಹೋಯಿತು. ಇನ್ನೊಂದಕ್ಕೊ?"

"ಅದು ಹಣದಿಂದಾಗುವ ಕಾರ್ಯತಾನೇ. ದೇವರು ಕೊಟ್ಟ ನಾಲ್ಕು ಕಾಸುಗಳಿವೆ; ದೊಡ್ಡದಲ್ಲ."

"ಸರಿ, ಎಲ್ಲಾ ಅನುಮಾನವೂ ಹೋಯಿತು. ನಿನ್ನ ಅಪೇಕ್ಷೆಯನ್ನು ನಿಶ್ಚಯವಾಗಿ ಪೂರಯಿಸುತ್ತೇನೆ. ನೋಡು ನಾಳಿನ ಕೆಲಸ."

ಃ

ಭೀಮರಾಯನಿಗೆ ಆ ರಾತ್ರಿಯಲ್ಲಿ ನಿದ್ರೆಯು ಸಾಕಷ್ಟಿರಲಿಲ್ಲ. ಮರುದಿನ ಮಾಡುವುದಕ್ಕಿದ್ದ ಸೂಕ್ಷ್ಮವಾದ ಕೆಲಸದ ನೆರವೇರಿಕೆಯ ಬಗೆಯನ್ನು ಚಿಂತಿಸುತ್ತಾ ಗಂಡಾಂತರವೇನಾದರೂ ಬರುವುದೋ ಎಂಬ ದಿಗಿಲಿನಿಂದ ಒಮ್ಮೆ ನಿಶ್ಚಯಿಸಿದ ಕ್ರಮವನ್ನು ಮರೆತು, ಪುನಃ ಅದನ್ನೇ ಆಲೋಚಿಸುತ್ತಾ ತಾನು ಸ್ವತಃ ಕಂಡು ಕೇಳರಿಯುವುದಕ್ಕೆ ಮುಂಚಿತವಾಗಿಯೇ ಸೀತಾಬಾಯಿ ಯಾಡಿದ ಮಾತುಗಳನ್ನಾಧರಿಸಿ ಕೆಲಸವನ್ನು ಮುಂದರಿಸಗೊಟ್ಟರೆ, ನರಹತ್ಯ ಪಾತಕಕ್ಕೆ ಗುರಿಯಾಗಬೇಕಾದೀತೋ, ಎಂದು ಸಂಶಯಿಸುತ್ತಾ ತನ್ನ ದೊಡ್ಡಸ್ತಿಕೆಗೇನಾದರೂ ಕೇಡನ್ನುಂಟು ಮಾಡುವುದಕ್ಕೋಸ್ಕರವೇ ಊರಿನ ಹೆಂಗಸರು ಸ್ವಕಲ್ಪಿತ ಮಾತುಗಳನ್ನೇಕಾಡಬಾರದು? ಸುಂದರರಾಯನೇಕೆ ನಿರಪರಾಧಿಯಾಗಿರಕೂಡದು? 'ಕಣ್ಣಾರೆ ಕಂಡರೂ ಪರಾಮರಿಸಿ ನೋಡಬೇಕೆ'ಂದು ಬಲ್ಲವರ ಮಾತಿದೆ. ತಾನು ಫಕ್ಕನೇ ಮುಂದರಿಸಿದರೆ, ಆ ಕೆಲಸದ ಪರ್ಯವಸಾನವು ಹೇಗಾಗುವುದೋ? ಎಂದು ಹೀಗೆಲ್ಲಾ ಮನಸ್ಸಿನಲ್ಲಿ ವಿಚಾರಿಸುತ್ತಾ ಸ್ವಲ್ಪ ಸಮಯಕ್ಕೆಲ್ಲಾದರೂ ಕಣ್ಣು ತೂಗುವಷ್ಟರಲ್ಲಿ ಸುಂದರರಾಯನು ಎದಿರಿನಲ್ಲಿ ನಿಂತು, 'ಸ್ವಾಮಿ, ಸ್ನೇಹದಿಂದಲೂ ಭಕ್ತಿಯಿಂದಲೂ ತಮ್ಮನ್ನಾಶ್ರಯಿಸಿಕೊಂಡಿದ್ದೇನೆ, ನನ್ನನ್ನು ತಾವೇ ರಕ್ಷಿಸಬೇಕಷ್ಟೆ' ಎಂದು ಹೇಳಿದಂತೆ ಕನಸು ಕಂಡು ಬೆಬ್ಬರಬಿದ್ದೆದ್ದು, ಕಣ್ಣುಗಳನ್ನುಜ್ಜಿಕೊಂಡು, 'ಅಯ್ಯೋ! ಇನ್ನೆಷ್ಟು ರಾತ್ರಿ ಇದೆಯಪ್ಪಾ!' ಎಂದು ಗಡಿಯಾರವನ್ನು ನೋಡುತ್ತಾ, ಕಡೆಗೆ ಪತ್ನಿಗೆ ಕೊಟ್ಟ ವಾಗ್ದಾನವನ್ನು ನೆನಪಿಗೆ ತಂದುಕೊಂಡು, ಆದುದಾಗಲಿ, ತನ್ನ ಪತ್ನಿಯ ಭಾಗ್ಯದ ಬಲದಿಂದ ಯಾವ ಕಷ್ಟವಾದರೂ ಸಂಭವಿಸದು, ಶ್ರೀರಾಮನಂತೆ ಏಕವಚನಿಯಾಗಿರಬೇಕೆಂದು ಮನಸ್ಸಿನಲ್ಲಿ ದೃಢವಾಗಿ ನಿಶ್ಚಯಿಸಿ ಧೈರ್ಯ ತಾಳುತ್ತಾ, ಬೆಳಗಾಗಲಿಕ್ಕೆ ಸ್ವಲ್ಪ ಸಮಯವಿರುವಾಗ ಗಾಢವಾದ ನಿದ್ರೆಯಲ್ಲಿ ಮುಳುಗಿದನು.

ಅಂಬಾಬಾಯಿಯು ನಿತ್ಯದಂತೆ ಬೇಗನೇ ಎದ್ದು ಶ್ಯಾಮನಿಂದ ಕಾಫಿ ಮುಂತಾದನ್ನು ಮಾಡಿಸಿಟ್ಟು, ಶಯ್ಯಾಮಂದಿರದಲ್ಲಿ ಹೋಗಿ ನೋಡಲು, ಪತಿಯು ಗಾಢ ನಿದ್ರೆಯಲ್ಲಿರುವುದನ್ನು ಕಂಡು, ಎದ್ದೇಳುವುದಕ್ಕೆ ಇನ್ನೂ ಸ್ವಲ್ಪ ಸಮಯವಿದ್ದುದರಿಂದ ಹೊರಗೆ ಬಂದು ತೊತ್ತಾದ ಮೈರೆಯನ್ನು ಕರೆದು, ಇಗೋ, ನಡುಕೋಣೆಯಲ್ಲಿ ಕಾಯಿಪಲ್ಯಗಳು ಕೊಳೆಯಲಾರಂಭಿಸುತ್ತಿವೆ, ದೇವಕಿಯನ್ನು ಕರೆದು ಕೆಲವನ್ನು ತೆಗೆದುಕೊಂಡು ಹೋಗ ಹೇಳು, ನೀನು ಸಹ ಕೆಲವನ್ನು ಕೊಂಡುಹೋಗು ಎನಲು, ಅವಳು ತನಗೆ ಬೇಕಾದಷ್ಟನ್ನು ತೆಗೆದು ಬಚ್ಚಲಮನೆಯಲ್ಲಿಟ್ಟು ದೇವಕಿಯನ್ನು ಕರೆದುತಂದು ಮನೆಯಲ್ಲಿ ಬಿಡೋಣವೇ, ಅಂಬಾಬಾಯಿಯು– "ದೇವಕಿ, ಇಗೋ, ನಡುಕೋಣೆಯಲ್ಲಿ ಕಾಯಿಪಲ್ಯಗಳಿವೆ. ನಿನಗೆ ಬೇಕಾದವುಗಳನ್ನು ಕೊಂಡುಹೋಗು"

ಎಂದು ಹೇಳಲಾಗಿ, ಅವಳು ನಡುಕೋಣೆಗೆ ಹೋಗುವಷ್ಟರಲ್ಲಿ ಭೀಮರಾಯನು ಎಚ್ಚತ್ತು ಹೊರಗೆ ಬರುವಾಗ ಅವಳನ್ನು ಕಂಡು, "ಓಹೋ, ದೇವಕಿ! ಏನು? ಕಾಶಿಗೆ ಹೋಗುವಾಗ ಭಾಗೀರಥಿಯು ತಾನಾಗಿ ಎದಿರು ಬಂದಂತಾಯಿತಲ್ಲ! ಇತ್ತ ಬಾ" ಎಂದವಳನ್ನು ಒತ್ತಟ್ಟಿಗೆ ಕರೆದು, ಉಪಾಯದಿಂದ ಮಾತನಾಡಿ, ರಾಘವ ಸೆಟ್ಟಿಯ ವರ್ತಮಾನವನ್ನೆಲ್ಲ ಅವಳಿಂದ ಸಂಗ್ರಹಿಸಿಕೊಂಡು, "ದೇವಕಿ, ರಾಘವ ಸೆಟ್ಟಿಯಂತಹ ಮನುಷ್ಯರು ಇನ್ನು ಬೇರೆಯೂ ಇದ್ದಾರೆ. ನಮಗೂ ಕೃಷ್ಣಪ್ಪ ಸೆಟ್ಟಿಗೆ ಬಂದಂತಹ ಕಷ್ಟವೇ ಬಂದೊದಗಿದೆ. ನೀನೇ ನಮ್ಮನ್ನು ಪಾರುಮಾಡಬೇಕು. ನೀನಿರುವವರೆಗೂ ನಿನ್ನ ಕಾಲಕ್ಷೇಪದ ಗೊಡವೆ ನಿನಗೆ ಬೇಡ. ನಾನೇ ನೋಡಿಕೊಳ್ಳುವೆನು. ತತ್ಕಾಲಕ್ಕೆ ಇಗೋ" ಎಂದು ಎರಡು ಪವನುಗಳನ್ನು ತಂದು ಒಂದೊಂದು ಕೈಯಲ್ಲಿ ಒಂದೊಂದನ್ನಿಟ್ಟುಬಿಟ್ಟನು. ಆಗಲವಳು—"ಹಾಗಾಗಲಿ. ಸ್ವಾಮೀ, ನಾನು ತಮ್ಮ ದಾಸಿಯಾಗಿದ್ದೇನೆ. ಮಧ್ಯಾಹ್ನ ದಾಟಿದ ನಂತರ ಗೋಪಣ್ಣನು ನಾಲ್ಕು ಬದನೇ ಕಾಯಿಯ ಬಜ್ಜೆಗಳನ್ನು ತಂದುಕೊಡುವನು. ಅವುಗಳನ್ನು ತಮ್ಮ ಯುಕ್ತಪ್ರಕಾರ ಉಪಯೋಗಿಸಬಹುದು. ಅದರೆ ಆ ಕೆಲಸವನ್ನು ಬೇರೆಯವರ ಕೈಗೊಪ್ಪಿಸದೆ ತಾವೇ ಜಾಗ್ರತೆಯಿಂದ ಮಾಡಬೇಕು" ಎಂದವಶ್ಯವಿರುವ ಉಪದೇಶವೆಲ್ಲವನ್ನು ಕೊಟ್ಟು, ಪವನು ಗಳನ್ನು ಸೆರಗಿಗೆ ಬಿಮ್ಮನೆ ಕಟ್ಟಿ ಸೊಂಟದಲ್ಲಿ ಭದ್ರವಾಗಿ ಸೇರಿಸಿಟ್ಟು, "ಸ್ವಾಮೀ, ಮನೆಯಲ್ಲಾರೂ ಇಲ್ಲ. ಗೋಪಣ್ಣನು ಅಂಗಡಿಗೆ ಹೋಗಿದ್ದಾನೆ. ಅಡಿಗೆಯಾಗಬೇಕು, ಪೇಟೆಗೆ ಹೋಗಿ ಅಕ್ಕಿಯನ್ನು ತಂದಾಗಬೇಕು, ನಾನು ಹೋಗಲೇ?" ಎಂದು ಕೇಳಲು, ಭೀಮರಾಯನು ಊಳಿಗದ ಸೋಮಯ್ಯನನ್ನು ಕರೆದು, ಒಳಗಿನಿಂದ ಒಂದು ಮುಡಿ ಅಕ್ಕಿಯನ್ನು ತೆಗೆದುಕೊಂಡು ಹೋಗಿ ದೇವಕಿಯಲ್ಲಿಟ್ಟು ಬರಬೇಕೆಂದು ಹೇಳಲು, ಆತನು ಹಾಗೆಯೇ ತೆಗೆದುಕೊಂಡು ಹೋಗಿಬಿಟ್ಟನು. ದೇವಕಿಯು ಸಂತೋಷದಿಂದ ಮನೆಗೆ ಹೋದಳು. ಆ ಬಳಿಕ ಭೀಮರಾಯನು ಮುಖಮಜ್ಜನವನ್ನು ಮಾಡಿ ಕಾಫಿ ಫಲಾಹಾರವನ್ನು ಸೇವಿಸಿ, ಹೊರಚಾವಡಿಗೆ ಬಂದು, ಲೋಡುತಿವಾಸಿಯ ಮೇಲೆ ಒಡ್ಡೋಲಗವಾಗಿ ವೀಳ್ಯಹಾಕುತ್ತಿರುವಾಗ ಅಡಿಗೆಯ ಶ್ಯಾಮನನ್ನು ಕರೆದು "ಇಗೋ, ಶ್ಯಾಮಾ, ನಿನ್ನೆ ರಾತ್ರೆ ಕೀಚಕವಧೆಯ ಪ್ರಸಂಗವಷ್ಟೆ? ಈ ಹೊತ್ತೊಂದು ಬ್ರಾಹ್ಮಣ ಸಂತರ್ಪಣೆಯಾಗಬೇಕಿತ್ತು. ಈಗ ಅದಕ್ಕೆಲ್ಲ ತಯಾರುಮಾಡುವುದಕ್ಕೂ ಆಮಂತ್ರಣೆಗೂ ಸಮಯವಿಲ್ಲ. ಒಂಭತ್ತು ತಾಸಾಯಿತು. ಮಧ್ಯಾಹ್ನದ ನಂತರ ಒಂದು ಫಲಾಹಾರ ಮಾಡಿಸಿಬಿಡೋಣವೆಂದು ಆಲೋಚಿಸಿದ್ದೇನೆ. ಮೊನ್ನೆ ತಂದ ಅರ್ಧಮಣದ ಕವಳಿಗೆಯಲ್ಲಿ ತುಂಬಾ ಕಾಫಿ, ಕೂವೆ ಹಿಟ್ಟಿನ ದೋಸೆ, ಬದನೆಕಾಯಿಯ ಬಜ್ಜೆ, ನಾಲ್ಕೈದು ಸೇರು ಹುರುಳಿಯ ತಾಳದ ಸಹಾ ಮಾಡಿಡು" ಎಂದು ಹೇಳುವಷ್ಟರಲ್ಲಿ ಸುಂದರರಾಯನು ಮನೆಯಿಂದ ಬಂದು ಮುಟ್ಟಿದನು. ಭೀಮರಾಯನು ಅವನೊಡನೆ,

"ಹೇಗೆ? ಕೀಚಕವಧೆಯ ಸಂಬಂಧ ಸಂತರ್ಪಣೆಯ ಬದಲಿಗೆ ಫಲಹಾರ ಕೊಡುವುದೆಂದು ಮಾಡಿದ್ದೇನೆ, ಹೇಗೆ?"

"ಚೆನ್ನಾಯಿತು ಸ್ವಾಮಿ, ಚೆನ್ನಾಯಿತು! ಆಮಂತ್ರಣೆಯಾಗಬೇಕಷ್ಟೆ?"

"ಅದೇನು ದೊಡ್ಡ ಮಾತು? ನೀನು ಮನಸ್ಸು ಮಾಡಿದರೆ, ನಿಮಿಷ ಮಾತ್ರದಲ್ಲಾಗುತ್ತೆ."

ಹಾಗಾಗಲೆಂದು ಹೇಳಿ ಸುಂದರರಾಯನು ಹೋಗಿ ಹತ್ತು ಹನ್ನೆರಡು ಮಂದಿ ಸ್ನೇಹಿತರನ್ನು ಆಮಂತ್ರಿಸಿದನು. ಗೋಪಣ್ಣನು ನಾಲ್ಕು ಬಜ್ಜೆಗಳನ್ನು ತಂದು ಯಾರಿಗೂ ಗೊತ್ತಾಗದ ಹಾಗೆ ಭೀಮರಾಯನ ಕೈಯಲ್ಲಿ ಕೊಟ್ಟನು. ಭೀಮರಾಯನು ಫಲಾಹಾರಕ್ಕೆ ಕುಳಿತುಕೊಳ್ಳುವುದಕ್ಕೆ ಬೇಕಾದ ಸಾಮಾಗ್ರಿ ಸನ್ನಾಹವನ್ನು ಸೇವಕರಿಂದ ಅನುಗೊಳಿಸುವಷ್ಟರಲ್ಲಿ ಸುಂದರರಾಯನೂ ಒಬ್ಬರಿಬ್ಬರಾಗಿ ಅಭ್ಯಾಗತರೆಲ್ಲರೂ ಬಂದು ಮುಟ್ಟಿದರು. ಅವರನ್ನೆಲ್ಲ ಎರಡಲು ಪಂಙ್ತಿಗಳಾಗಿ ಕುಳ್ಳಿರಿಸಿ, ಬಾಳೆಯೆಲೆಯ ತುಂಡುಗಳ ಮೇಲೆ ಶ್ಯಾಮನು ಹುರುಳಿಯ ತಾಳದ ಮತ್ತು ದೋಸೆಗಳನ್ನು ಬಡಿಸಿ, ಒಂದೊಂದು ಪಂಚಪಾತ್ರದಲ್ಲಿ ಕಾಫಿಯನ್ನು ಕೊಡುವಾಗ, ಭೀಮರಾಯನು ನಾಲ್ಕು ನಾಲ್ಕು ಬಜ್ಜೆಗಳನ್ನು ಬಡಿಸುತ್ತಾ ಬರುವಾಗ ಗೋಪಣ್ಣನು ತಂದುಕೊಟ್ಟ ಬಜ್ಜೆಗಳನ್ನು ಸುಂದರರಾಯನಿಗೆ ಬಡಿಸಿದನು. ಎರಡನೇ ಸಾರಿಯೂ ಎಲ್ಲರಿಗೆ ಬಡಿಸಿ ಆದ ನಂತರ ಭೀಮರಾಯನು ನಿಂತು ಕೈಗಳನ್ನು ಜೋಡಿಸಿ "ಪ್ರಿಯ ಮಿತ್ರರೇ, ಕೀಚಕ ವಧೆಯ ಸಂಬಂಧ ಸಂತರ್ಪಣೆಯಾಗಬೇಕಿತ್ತು. ಸಂಗತಿವಶಾತ್ 'ಹೂವುಕೊಡುವಲ್ಲೆಸಳು' ಎಂಬಂತೆ ಈ ಚಿಕ್ಕ ಫಲಾಹಾರ ಮಾಡಿಸಿದೆ. ಸಂತೋಷದಿಂದ ಸ್ವೀಕರಿಸಬೇಕಾಗಿ ಪ್ರಾರ್ಥಿಸುತ್ತೇನೆ" ಎನಲು, "ಭಕ್ತಿಪೂರ್ವಕವಾಗಿ ಕೊಟ್ಟ ಒಂದು ತೃಣವಾದರೂ ಮಹತ್ತು. ಸುಧಾಮನು ಅವಲಕ್ಕಿ ಕಾಳನ್ನು ಕೊಟ್ಟು ಶ್ರೀಕೃಷ್ಣನನ್ನು ತೃಪ್ತಿಪಡಿಸಲಿಲ್ಲವೇ!" ಎಂದು ಸುಂದರರಾಯನು ಎಲ್ಲರೂ ಕೇಳುವ ಹಾಗೆ ಪ್ರತ್ಯುತ್ತರವಾಗಿ ಹೇಳಿದನು. ಆ ಬಳಿಕ ಭೀಮರಾಯನು ಪುನಃ ಕೈಜೋಡಿಸಿ, "ನನ್ನ ಇನ್ನೊಂದರಿಕೆ ಇದೆ. ನಾಳೆ ರಾತ್ರೆ ವಾಲಿ ವಧೆಯ ಪ್ರಸಂಗವಿರುವುದು. ನಾಡದು ಯಥಾನುಶಕ್ತಿ ಕಿಂಚಿತ್ ಒಂದು ಸಂತರ್ಪಣೆಯೆಂದು ಸಂಕಲ್ಪಿಸಿದ್ದೇನೆ; ಅದಕ್ಕೆ ಈಗ ಕೂಡಿದವರೆಲ್ಲರೂ ಕೃಪೆಯಿಟ್ಟು ದಯೆ ಮಾಡಿಸಬೇಕಾಗಿ ಪ್ರಾರ್ಥಿಸುತ್ತೇನೆ" ಎಂದು ಹೇಳಿಕೊಳ್ಳಲು ಎಲ್ಲರೂ "ತಥಾಸ್ತು" ಎಂದರು. ಆ ಬಳಿಕ ಫಲಾಹಾರವು ಮುಗಿದು, ಅಭ್ಯಾಗತರೆಲ್ಲರೂ ವೀಳ್ಯತೆಗೆದುಕೊಂಡು ತಂತಮ್ಮ ಮನೆಗಳಿಗೆ ತೆರಳಿದರು.

## ೬

ಸುಂದರರಾಯನು ಮುಂತಾಗಿ ಅಭ್ಯಾಗತರೆಲ್ಲರೂ ತಂತಮ್ಮ ಮನೆಗಳಿಗೆ ಹೋದಮೇಲೆ ಭೀಮರಾಯನು ನಡೆದ ಕಾರ್ಯವನ್ನು ಗುಟ್ಟಿನಿಂದ ಅಂಬಾಬಾಯಿಗೆ ತಿಳಿಸಲು, ಅವಳು "ತಾವಿನ್ನು ಹೊರಜಗಲಿಯಲ್ಲಿ ಒಡ್ಡೋಲಗಗೊಳ್ಳುವದು ಸರಿಯಲ್ಲ. ಮಂಚದಲ್ಲಿ ಮಲಗಿಕೊಂಡಿರಬೇಕು. ಯಾರಾದರೂ ಕೇಳಿದರೆ, ಕಠಿಣವಾದ ಉದರಶೂಲೆಯೂ ಅತಿಸಾರವೂ ಆಗಿರುವ ಹಾಗೆ ಕಾಣಿಸಿಕೊಳ್ಳಬೇಕು. ಉಳಿದ ಕೆಲಸವನ್ನು ನಾನು

ನೋಡಿಕೊಳ್ಳುತ್ತೇನೆ. ಜೀವರಕ್ಷಣೆಗೋಸ್ಕರ ಸಟೆಯಾಡುವುದರಲ್ಲಿ ದೋಷವಿಲ್ಲವೆಂದು ಶಾಸ್ತ್ರಗಳು ಹೇಳುತ್ತವೆ. ಸ್ವಸ್ಥವಾಗಿ ಮಲಗಿಕೊಂಡಿರಿ. ತಮ್ಮ ಕೈಕಾಲುಗಳನ್ನು ಹಿಸುಕುವುದಕ್ಕೆ ಸೋಮಯ್ಯನನ್ನು ಕಳುಹಿಸುತ್ತೇನೆ. ನಡೆಯಿರಿ" ಎನಲು, ಭೀಮರಾಯನಿಗೆ ಮನಸ್ಸಿನಲ್ಲಿ ದಿಗಿಲು ಉಂಟಾಗಿ ಏನು ಮಾಡುವುದೆಂದು ಸೂಚಿಸದೆ, ಈ ವರೆಗಿನ ತನ್ನ ಸಕಲ ಕಾರ್ಯಗಳಲ್ಲೂ ಪತ್ನಿಯ ಆಲೋಚನೆಗಳಿಗನುಸಾರವಾಗಿ ನಡೆದುಕೊಂಡುದರಿಂದ ಅವುಗಳೆಲ್ಲ ಕೈಗೂಡಿವೆ. ಮುಂದೂ ಹಾಗೆ ತಾನೇ ನಡೆದುಕೊಳ್ಳುವುದು ಉತ್ತಮವೆಂದು ಗ್ರಹಿಸಿಕೊಂಡು, ಅವಳು ಹೇಳಿದಂತೆ ಹೋಗಿ ಮಂಚದಲ್ಲಿ ಮಲಗಿಕೊಂಡು ಕಿರಿಹೊಟ್ಟೆಯನ್ನು ಕೈಗಳಿಂದ ಹಿಸುಕುತ್ತಾ, "ದೇವರೇ! ಅಯ್ಯೋ! ಕುಯ್ಯೋ" ಎಂದು ಕೀಯನೇ ಕೂಗುತ್ತಾ ತುಟಿಗಳನ್ನು ಕಚ್ಚುತ್ತಾ ಹಾಸಿಗೆಯ ಮೇಲೆ ಹೊರಳಾಡುತ್ತಾ ನಾನಾ ಪ್ರಕಾರದ ವಿಕಾರಗಳನ್ನೆಲ್ಲಾ ಮಾಡತೊಡಗಿದನು. ಅಂಬಾಬಾಯಿಯು ಸೋಮಯ್ಯನನ್ನು ಕರೆದು, ಒಳಗೆ ಕಳುಹಿಸಿ, ತಾನು ಒಂದು 'ವೈನು ಗ್ಲಾಸು,' ಸ್ವಚ್ಛವಾದ ನೀರು ತುಂಬಿಸಿದ ಕೆಲವು ಗಾಜಿನ ಕುಪ್ಪಿಗಳು, ಒಂದು 'ಟೈಮ್ ಪೀಸ್' ಎಂಬ ಗಡಿಯಾರು ಇವುಗಳನ್ನು ತೆಗೆದುಕೊಂಡು ಹೋಗಿ, ಮಂಚದ ಸಮೀಪದಲ್ಲಿದ್ದ ಮೇಜಿನ ಮೇಲಿಟ್ಟು, ಒಂದು ದೊಡ್ಡ ಪಿಂಗಾಣಿಯಲ್ಲಿ ಆ ದಿವಸ ಮಧ್ಯಾಹ್ನದಲ್ಲಿ ಬೇಯಿಸಿದ ಹುರುಳಿಯ ಸಾರು, ಊಟಕ್ಕುಪಯೋಗಿಸಿ ಉಳಿದ ಬದನೇಕಾಯಿಯ ಬಜ್ಜಿಯನ್ನು ಸಹ ಒಟ್ಟುಕೂಡಿಸಿ, ಒಂದು ವಿಧದ ಕಲಬೆರಿಕೆ ಮಾಡಿ, ಆ ಕೋಣೆಯ ಒಂದು ಮೂಲೆಯಲ್ಲಿ ತಂದಿಟ್ಟು, ಭೀಮರಾಯನ ಅಣ್ಣ ತಮ್ಮಂದಿರುಗಳಿಗೆ ವರ್ತಮಾನ ಕಳುಹಿಸಿ, ಅವರನ್ನು ಬರಮಾಡಿಸಿ, ಅವರೆಲ್ಲರೂ ಹೆಂಗಸರು ಮಕ್ಕಳು ಸಮೇತ ಬಂದು, "ಏನಾಯಿತಪ್ಪಾ! ಏನಾಯಿತವ್ವಾ! ಅಯ್ಯೋ! ಗ್ರಹಚಾರವೇ! ಲಕ್ಷ್ಮಣ ಭಟ್ಟರನ್ನು ಕರೆಯಿಸಿ ಒಂದು ನಿಮಿತ್ಯದ ರಾಶಿಯನ್ನಾದರೂ ಇಡಿಸಿ ನೋಡಬೇಕಷ್ಟೆ? ರಾಮಕುಟ್ಟಿ ಪಂಡಿತನನ್ನು ಕರೆದು ಔಷಧಿ ಮಂತ್ರವೇನಾದರೂ ಮಾಡಿಸಬೇಕಷ್ಟೆ?" ಎಂದು ಹೀಗೆಲ್ಲಾ ಮಾತನಾಡುವಾಗ ಅಂಬಾಬಾಯಿಯು "ಅದೆಲ್ಲ ಬೇಡ, ಮೊದಲು ಸಹ ಒಂದೆರಡು ಬಾರಿ ಹೀಗೆಯೇ ಆಗಿದೆ–ಹೆಚ್ಚಿನ ಭಯವೇನೂ ಇಲ್ಲ; ಕಳೆದ ಸಾರಿ ಅವರಿಗೆ ಹೀಗೆಯೇ ಆದಾಗ ಒಂದು ನವಗ್ರಹ ಶಾಂತಿ, ಒಂದು ಗೋದಾನ ಇವುಗಳನ್ನು ಹೇಳಿಕೊಳ್ಳಲು ಗುಣಾಂಶ ಬಂದಿತ್ತು. ಈ ಸಾರಿ ಮೊದಲಿನಷ್ಟು ಕಠಿಣ ಆಪತ್ತಿಲ್ಲವಾದರೂ, ಪ್ರತಿ ಶನಿವಾರದಲ್ಲೂ ಅಶ್ವತ್ಥನಾರಾಯಣ ಪೂಜೆ, ಶನಿಪ್ರದೋಷ ವ್ರತವನ್ನು ಸಹ ಆಚರಿಸುವುದಾಗಿ ಹರಿಕೆ ಹೇಳಿಕೊಂಡಿದ್ದೇನೆ. ಬೇರೆ ಔಷಧಿ ಮುಂತಾದ್ದವಶ್ಯವಿಲ್ಲ. ನಿಮಿತ್ಯದ ರಾಶಿಯೂ ಬೇಕಾದ್ದಿಲ್ಲ. ಅಸ್ವಸ್ಥದ ಸಮಯದಲ್ಲಿ ಮನೆಯಲ್ಲಿ ಜನರು ಬೇಕಾಗುವರೆಂಬುದರಿಂದ ನಿಮ್ಮನ್ನೆಲ್ಲರನ್ನು ಕರೆಯಿಸಿದೆ. ಒಂದೆರಡು ಸಾರಿ ಒಂದು ವಿಧವಾದ ಭೇದಿಯಾಯಿತು. ಅಗೋ ಪಿಂಗಾಣಿಯಲ್ಲಿ ಮುಚ್ಚಿಟ್ಟಿದ್ದೇನೆ; ಬದನೇಕಾಯಿಯ ಬಜ್ಜಿ ಹುರುಳಿಯ ತಾಳದ ಸಹ ಹೆಚ್ಚಾಗಿ ತಿಂದು ನೀರಡಿಕೆಗೆ ನೀರು ಪದೇ ಪದೇ ಕುಡಿದ ದೆಸೆಯಿಂದ ಹೀಗಾಯಿತೇನೋ? ಹರಿಕೆ ಹೇಳಿಕೊಂಡ ಬಳಿಕ ಈಗ ಹತ್ತಕ್ಕೈದರಂತಿದೆ" ಎನಲು, ಅವರೆಲ್ಲ ಸ್ವಲ್ಪ ಸಮಾಧಾನಪಟ್ಟು, ಇನ್ನು ಭೀಮರಾಯನ ಹತ್ತಿರ ಮಾತನಾಡೋಣ

ವೆಂದು ಅಣ್ಣನಾದ ಶಂಕರರಾಯನು ಮಂಚದ ಬಳಿಗೆ ಬಂದು, "ಏನಪ್ಪಾ! ಏನಾಗುತ್ತೆ? ಆಹಾರ ಪಾನಗಳಲ್ಲಿ ತುಂಬಾ ಎಚ್ಚರಿಕೆಯಿಂದಿರಬೇಕು. ನಮಗ್ಯಾರಿಗಾದರೂ ತುಸು ತಲೆನೋವೆಂದರೆ ನಗಾಡುವುದಕ್ಕೆ ಶತ್ರುಗಳಿದ್ದಾರೆ. ಇನ್ನು ಮುಂದೆ ಕರ್ನಪರ್ವದ ಪ್ರಸಂಗವನ್ನು ಹಾಡಬೇಡ. ಅದರಿಂದ ದೇಹದಲ್ಲಿ ತಾನೇ ಅಶಕ್ತಿಯುಂಟಾಗುತ್ತದೆ" ಎನಲು, ಭೀಮರಾಯನು–"ನಿನ್ನೆ ಕೀಚಕ ವಧಾ ಪ್ರಸಂಗವನ್ನು ಹೇಳಿದುದರಿಂದ ಈ ಹೊತ್ತು ಚಿಕ್ಕದಾದ ಅತಿಥಿ ಸತ್ಕಾರವನ್ನು ಮಾಡಿದೆ. ಹುರುಳಿಯ ತಾಳದ, ಬದನೇಕಾಯಿಯ ಬಜ್ಜಿಗಳನ್ನು ತಿಂದು ಸ್ವಲ್ಪ ನೀರು ಕುಡಿದುದರಿಂದ ಹೀಗಾಗಿದೆ, ಹೆದರಬೇಡಿರಿ" ಎಂದನು. ಶಂಕರರಾಯನು ತಿರುಗಿಬಂದು ಒಂದು ಕಡೆಯಲ್ಲಿ ಕುಳಿತುಕೊಂಡನು. ಆತನ ಪತ್ನಿ ದುರ್ಗಾಬಾಯಿಯು ಅಂಬಾಬಾಯಿಯ ಹತ್ತಿರದಲ್ಲಿ ಗಡಿಯಾರು ಕುಪ್ಪಿಗಳು ಮುಂತಾದ ಕೆಲವು ಸಾಮಾನುಗಳನ್ನು ಕಂಡು,–

"ಅದೆಲ್ಲ ಏನವ್ವಾ?"

"ಇದೇ? ಇವೆಲ್ಲ ಉಮಾಪತಿ ಔಷಧಿಗಳು. ಅಸ್ವಸ್ಥವು ಬೇಗನೆ ನಿಲ್ಲದಿದ್ದರೆ, ಇವುಗಳನ್ನು ಹೊಟ್ಟೆಯಲ್ಲಿ ಕೊಡಬೇಕೆಂದು ಪಂಡಿತ ಘನಶ್ಯಾಮರಾಯರು ಹೇಳಿಹೋಗಿದ್ದಾರೆ."

"ಗಡಿಯಾರು ಏತಕ್ಕೆ?"

"ಔಷಧಿಗಳನ್ನು ಸರಿಯಾಗಿ ಗಂಟೆ ಗಂಟೆಗೆ ಕೊಡಬೇಕು. ಸಮಯ ತಿಳಿಯುವುದಕ್ಕೆ ಬೇಕು."

"ರಾತ್ರಿ ಕಾಲದಲ್ಲಿ ನಿದ್ರೆ ಬಿದ್ದುಹೋದರೋ?"

"ಅದು ಎಲೆರಾಮನ ಗಡಿಯಾರ. ನಮಗೆ ನಿದ್ರೆ ಹತ್ತಿದಾಗ ಇದೊಂದು ಶಬ್ದಮಾಡಿ ಎಚ್ಚರಿಸುತ್ತೆ. ಎಷ್ಟು ಗಂಟೆಗೆ ಎಚ್ಚರವಾಗಬೇಕೆಂದಿದೆಯೋ ಅಷ್ಟು ಗಂಟೆಗೆ ಎಲೆರಾಮನೆಂಬ ಇದರ ಒಂದು ಮುಳ್ಳನ್ನು ಮೊದಲೇ ತಿರುಗಿಸಿಟ್ಟರೆ, ಆ ಗಂಟೆಗೆ ಸರಿಯಾಗಿ ಶಬ್ದಮಾಡಿ ಎಚ್ಚರಿಸುತ್ತೆ."

"ಅಹ! ಇಂಗ್ರೇಜಿ ಜನರು ಕಲಿತ ಯುಕ್ತಿಗೆ ಜೋಡಿಲ್ಲ! ಆ ಕುಪ್ಪಿಗಳಲ್ಲೆಲ್ಲ ಔಷಧಿಗಳೆಯೇ?"

"ಕೆಲವುಗಳಲ್ಲಿ ಔಷಧಿಗಳು. ಬೇರೆಯವುಗಳಲ್ಲಿ ಪೀಟರಿನ ನೀರಿದೆ."

"ಅದೆಂತಹ ನೀರು?"

"ಒಳಗೆ ಸ್ವಲ್ಪ ಕಾರೆಗಾರಿಕೆ ಇದ್ದ ಒಂದು ಗಾಜಿನ ಭರಣಿ ಇದೆ. ಅದರಲ್ಲಿ ನೀರು ತುಂಬಿಸಿಟ್ಟರೆ, ಸ್ವಲ್ಪ ಸ್ವಲ್ಪ ನೀರು ಭರಣಿಗಿಟ್ಟಿರುವ ಒಂದು ಕೊಳವಿಯಿಂದ ಹೊರಗೆ ಬರುತ್ತೆ. ಈ ನೀರಿಗೆ ಪೀಟರನ ನೀರೆನ್ನುತ್ತಾರೆ. ಕೆಲವು ವರುಷಗಳ ಹಿಂದೆ ಉಮಾಪತಿ ಔಷಧಿಗಳಿಗೆ ಸಾಧಾರಣ ನೀರನ್ನೇ ಉಪಯೋಗಿಸುತ್ತಿದ್ದರಲ್ಲ? ಈಗ ಇಲಿಕತ್ರಿ ಉಮಾಪತಿ ಎಂಬ ಒಂದು ಹೊಸ ಬಗೆಯ ಉಮಾಪತಿ ಬಂದಿದೆ. ಅದನ್ನು ಉಪಯೋಗಿಸುವುದಕ್ಕೆ ಪೀಟರಿನ ನೀರು ತಾನೇ ಬೇಕಂತೆ. ಸಮಯದಲ್ಲಿ ವ್ಯತ್ಯಾಸ ಬರಕೂಡದಾದ್ದರಿಂದ ಎಲೆರಾಮನ ಗಡಿಯಾರೇ ಬೇಕಂತೆ. ಇನ್ನು ಈ ಕಲಿಯುಗದಲ್ಲಿ ಏನೇನೆಲ್ಲ ಬರುವುದೋ ಗೊತ್ತಿಲ್ಲ."

ಈ ಸಂದರ್ಭದಲ್ಲಿ ಶಂಕರರಾಯನು ಮಧ್ಯ ಪ್ರವೇಶಿಸಿ, "ಇದೆಲ್ಲ ಇಂಗ್ರೇಜಿ ಜನರು ಜಾತಿ ಕೆಡಿಸುವುದಕ್ಕೆ ಮಾಡಿದ ಕುಯುಕ್ತಿಗಳು. ಈ ಔಷಧಿಗಳನ್ನು ಕೊಡಬೇಡಿರಿ. ಅವಶ್ಯವಾದರೆ, ಕೊಚ್ಚಿಪಂಡಿತನೋ, ತಕ್ಕಡಿ ವೆಂಕಟರಾಯನೋ, ಯಾರಾದರೂ ಒಬ್ಬನನ್ನು ಕರೆಯಿಸಬಹುದು. ಜಾತಿ ಹೋದಮೇಲೆ ಜೀವವನ್ನುಳಿಸಿಕೊಂಡು ಸಾರ್ಥಕವೇನಿದೆ? ಇಂಗ್ರೇಜಿ ಜನರು ಮಾಡಿರುವ ಮತ್ತೊಂದು ಕುಯುಕ್ತಿಯನ್ನು ಕೇಳಿದ್ದೀರೆ?"

ದುರ್ಗಾಬಾಯಿ: "ಏನದು?"

"ಚಿಮಿಣಿಯೆಣ್ಣೆ ಎಂಬ ಸೀಮೆಯೆಣ್ಣೆಯನ್ನು ಇಲ್ಲಿಗೆ ತಂದು ಅದನ್ನು ಬಹುಜನರು ಕೊಂಡುಕೊಳ್ಳಬೇಕೆಂಬುದರಿಂದ ಬಹು ಅಲ್ಪ ಕ್ರಯಕ್ಕೆ ಮಾರುತ್ತಾರೆ. ಈ ಎಣ್ಣೆಯನ್ನು ದೇವಸ್ಥಾನಗಳಲ್ಲಾಗಲೀ, ಮನೆಯಲ್ಲಿ ದೇವರ ಕೋಣೆಯಲ್ಲಾಗಲೀ ದೀಪಗಳಿಗೆ ಹಾಕಿ ಉರಿಸಿದೊಡನೆ ದೇವರ ಕಲಾಸಾನ್ನಿಧ್ಯವೆಲ್ಲ ನಿಂತೆಹೋಗುತ್ತೆ. ಅಲ್ಲವಾದರೆ, ಅಂಥಾ ಕಾರ್ಯಾಕಾರಣಿಕೆಯುಳ್ಳ ಮೂಕಾಂಬಿಕಾ ದೇವಸ್ಥಾನದಲ್ಲಿ ಕಳ್ಳರು ಚೋರಿಮಾಡುವಾಗ ಮಹಾದೇವಿಯು ಸುಮ್ಮ ಗಿರುತ್ತಿದ್ದಳೇ? ಕಳ್ಳರು ದೇವಸ್ಥಾನದಲ್ಲಿ ನುಗ್ಗಿದೊಡನೆ ಕೆಲವರಿಗೆ ಕಣ್ಣುಕತ್ತಲೆ ಬಂದಂತಾಯಿತು. ಇನ್ನು ಕೆಲವರಿಗೆ ನಾಗರಹಾವು ಕಚ್ಚುವುದಕ್ಕೆ ಬಂದಂತಾಯಿತು. ಇದು ಮಹಾದೇವಿಯ ಕಾರ್ಯಾಕಾರಣಿಕೆ ಎಂದವರಿಗೆ ಗೊತ್ತಾಗಿ, ಅವರಲ್ಲಿ ಕೆಲವರು ಬೇಗನೆ ಹೋಗಿ, ಮೂರು ನಾಲ್ಕು ಕುಪ್ಪಿ ಚಿಮಿಣಿಯೆಣ್ಣೆ ತಂದು ಗೆರಟೆಯಲ್ಲಿ ಹಾಕಿ ಉರಿಸಿದರು. ಆ ಬಳಿಕ ಅವರಿಗೆ ಯಾವ ಉಪದ್ರವವೂ ಉಂಟಾಗದ್ದರಿಂದ ದೇವಸ್ಥಾನದಲ್ಲಿದ್ದ ದ್ರವ್ಯವೆಲ್ಲವನ್ನು ಕೊಳ್ಳೆಮಾಡಿದರು. ಮಹಾದೇವಿಯಿಂದೇನೂ ನಡೆಯಲಿಲ್ಲ. ಅದು ಆ ಚಿಮಿಣಿಯೆಣ್ಣೆಯ ಕರಾಮತ್ತು."

"ವಾಸ್ತವವೇ, ಅಂಬಾಬಾಯಿ, ಬಂದದ್ದು ಬರಲವ್ವಾ, ನಮಗೆ ಬೇಡ ಈ ಉಮಾಪತಿ ಔಷಧಿಗಳು."

"ಹಾಗಾಗಲಮ್ಮ."

ಹೀಗೆಲ್ಲಾ ಮಾತುಕತೆಗಳು ನಡೆಯುತ್ತಿರುವಾಗ ಭೀಮರಾಯನು ಆಗಾಗ್ಗೆ ಮರಗುತ್ತಾ, ಸೋಮಯ್ಯನು ಅವನ ಹೊಟ್ಟೆ ಕೈಕಾಲುಗಳನ್ನು ಹಿಸುಕುತ್ತಾ ಇರಲು, ಸೂರ್ಯಾಸ್ತಮಯ ಸಮೀಪಿಸಿತು.

## ೭

ಇತ್ತಲಾಗಿ ಸುಂದರರಾಯನಲ್ಲಿ ಸುಮಾರು ಸೂರ್ಯಾಸ್ತಮಯ ಸಮಯದಲ್ಲಿ ಘೋ! ಎಂದು ಗೋಳಾಟ ಬಿತ್ತು. ಸುಂದರರಾಯನು ಮನೆಗೆ ಬಂದ ಒಂದರೆಡು ಗಳಿಗೆಯಲ್ಲೇ ಏನೋ ಒಂದು ಕಾಗದವನ್ನು ಬರೆಯುತ್ತಾ ಕುಳಿತ ಸಮಯದಲ್ಲಿ ಫಕ್ಕನೆ ಕಣ್ಣಿಗೆ ಕತ್ತಲೆ ಬಂದಂತೆಯಾಗಿ ಹಿತ್ತಲಲ್ಲಿ ಬೇರೆ ಕೆಲಸದಲ್ಲಿದ್ದ ಅಣ್ಣ ಚಿದಂಬರರಾಯನನ್ನು ಕರೆದು,

"ಅಣ್ಣಾ, ನನಗೆ ಮೈಯಲ್ಲೇನೋ ವಿಕಾರವಾಗುತ್ತೆ. ಏನೆಂದು ಸರಿಯಾಗಿ ವಿವರಿಸಿ ಹೇಳಲಾರೆನು. ಹೊಟ್ಟೆಯಲ್ಲಿ ನರಗಳೆಲ್ಲ ಸೆಳೆದಂತಾಗುತ್ತೆ. ಮೈಯಲ್ಲೆಲ್ಲ ಜುಮ್ ಜುಮ್ಮೆಂದು ವೇಗ ಹತ್ತಿದಂತಾಗುತ್ತೆ. ದರದರ ಬೆವರು ಹರಿಯುತ್ತೆ. ನನಗೆ ದಿನ ಬಂತೆಂದೆಣಿಸುತ್ತೇನೆ. ಅಯ್ಯೋ! ದೇವರೇ! ಏನು ಮಾಡಲಿ!" ಎಂದು ಕೂಗುತ್ತಾ ಅಲ್ಲೇ ಚಾಪೆಯಲ್ಲಿ ಧಡ್ಡೆಂದು ಬಿದ್ದು, ಮೂರ್ಛೆಹೋದನು. ಚಿದಂಬರರಾಯನೂ ಮನೆಯೊಳಗಿಂದ ಹೆಂಗಸರೂ ಮಕ್ಕಳೂ ಬಂದು ಅವನ ಪ್ರಾಣಸಂಕಟವನ್ನು ನೋಡಿ ಬೆದರಿ, ಕಂಗೆಟ್ಟು, "ದೇವರೇ! ನಾವು ದರಿದ್ರರಾಗಿದ್ದದ್ದೇ ಸಾಲದೇ! ಚಾಕರಿ ಚೂಕರಿ ಇಲ್ಲದಿದ್ದರೂ, ಎಲ್ಲರ ಹತ್ತಿರವೂ ಸ್ನೇಹದಿಂದಲೂ ಪ್ರೀತಿಯಿಂದಲೂ ಬಡತನಕ್ಕೆ ಯೋಗ್ಯವಾದ ಒಳ್ಳೇ ನಡತೆಯಿಂದಲೂ ಇದ್ದದ್ದು ಸಹ ನಿನ್ನ ಮನಸ್ಸಿಗೆ ಅಸಂತುಷ್ಟಿಯಾಯಿತೇ? ಅಯ್ಯೋ! ನಾವೆಂತಹ ಪಾಪಿಗಳಪ್ಪಾ!" ಎಂದು ಕೆಲವರು ಅಳುತ್ತಾ, ಕೆಲವರು ಕೂಗುತ್ತಾ ದೊಡ್ಡ ಗಲಾಟೆ ಬಿತ್ತು. ನೆರೆಹೊರೆಯವರೆಲ್ಲರೂ ಕೂಡಿದರು; ತಣ್ಣೀರನ್ನು ಕಣ್ಣುಗಳಿಗೆ ಮುಟ್ಟಿಸಿ, ಮೈಯ ಮೇಲೆಲ್ಲ ಚಿಮಿಕಿಸಿದರು. ಕೆಲವರು ಡಾಕ್ಟರರೂ ಪಂಡಿತರೂ ಇದ್ದಲ್ಲಿಗೆ ಓಡಿದರು. ಅವನ ಹೆಂಡತಿ ಸುಶೀಲೆಯು ಭಾಸ್ಕರನೆಂಬ ತನ್ನ ಮಗನ ಸಮೇತ ಬಂದು ಗಂಡನ ಕಾಲಡಿಯಲ್ಲಿ ಬಿದ್ದು ಹೊರಳಾಡಿ, "ನಾನಲ್ಲವೇ ಮುಂದಾಗಿ ಹೋಗಬೇಕಾದದ್ದು! ಮುಂದಿನ ನನ್ನ ಗತಿಯೇನು? ಈ ಚಿಕ್ಕ ಪ್ರಾಣಿಯ ಗತಿಯೇನು? ಅಯ್ಯೋ! ನಾನು ಯಾವ ಜನ್ಮದಲ್ಲಿ ಯಾರ ಮೇಲೆ ಏನು ಪಾಪ ಮಾಡಿದೆನೋ! ಯಾವ ದಂಪತಿಗಳೊಳಗೆ ವಿರೋಧವನ್ನುಂಟುಮಾಡಿದೆನೋ! ಯಾರ ಬಾಯಿಯ ತುತ್ತನ್ನು ಸೆಳೆದುಕೊಂಡೆನೋ! ಯಾರ ಮಗುವಿಗೆ ಅನಾದರಣೆ ಮಾಡಿದೆನೋ! ಯಾವ ಕಾರಣದಿಂದಪ್ಪಾ ನನಗೆ ಈ ಭವಣೆ ಬಂತು! ಏ ದೇವರೇ! ದೇವರೇ!" ಎಂದು ಪ್ರಳಾಪಿಸಿದಳು. ಮಗನನ್ನೆತ್ತಿ ಹಿಡಿದುಕೊಂಡು, "ಮುದ್ದುವೆ! ಏನಪ್ಪಾ ಮುಂದೆ ನಿನ್ನ ಗತಿ! ನೀನೆಂದರೆ ನಿನ್ನ ತಂದೆಯವರಿಗೆ ಪ್ರಾಣಕ್ಕಿಂತ ಹೆಚ್ಚಾಗಿದ್ದೆ. ಒಂದೇ ಕ್ಷಣ ದೃಷ್ಟಿಯು ಹೊರಗಾದರೆ, 'ಭಾಸ್ಕರನೆಲ್ಲಿ? ಭಾಸ್ಕರನೆಲ್ಲಿ?' ಎಂದು ವಿಚಾರಿಸುವುದೂ, ಉಣ್ಣುವಲ್ಲಿಯೂ ತಿನ್ನುವಲ್ಲಿಯೂ ಎಲ್ಲಾ ಕಡೆಗಳಲ್ಲಿಯೂ ನಿನ್ನ ನೆನಪು ತಾನೇ ಇತ್ತಷ್ಟೆ? ಇಗೋ ತಂದೆಯವರನ್ನು ಕರೆದು ಒಂದು ಮಾತನ್ನಾಡು. ನಮ್ಮನ್ನು ಅನಾಥರಾಗಿಮಾಡಿ ಬಿಟ್ಟು ಹೋಗಬೇಡವೆಂದು ಹೇಳು!" ಎಂತ ಹೀಗೆಲ್ಲ ನಾನಾ ಪ್ರಕಾರದಲ್ಲಿ ದುಃಖಮಾಡಿ ಮಗನನ್ನು ತಂದೆಯ ಹತ್ತಿರ ಮುಖಕ್ಕೆ ಮುಖ ತಾಗುವಂತೆ ಮಲಗಿಸಿ ಜಡೆಕಟ್ಟಿದ ತನ್ನ ಕೂದಲುಗಳನ್ನು ಬಿಡಿಸಿ ತಲೆಯಲ್ಲಿದ್ದ ಹೂವನ್ನೂ ಕೊರಳಲ್ಲಿದ್ದ ಮಂಗಳಸೂತ್ರ ತಾಳಿಯನ್ನೂ ಕಿತ್ತೊಗೆದು, ಹಣೆಯಲ್ಲಿದ್ದ ಕುಂಕುಮದ ತಿಲಕವನ್ನು ಅಳಿಸಿ ಆ ಕುಂಕುಮವನ್ನು ತಾಳಿಗೂ ಹೂವಿಗೂ ಮುಟ್ಟಿಸಿ, ಅವುಗಳನ್ನೆಲ್ಲ ಪತಿಯ ಪಾದಗಳ ಮೇಲಿಟ್ಟು, ಪತಿಯನ್ನೂ ಭಾಸ್ಕರನನ್ನೂ ಸಹ ನಾಲ್ಕೈದು ನಿಮಿಷಗಳವರೆಗೆ ಏಕಾಗ್ರದೃಷ್ಟಿಯಿಂದ ನೋಡಿ, ಥಕ್ಕನೆ ಮೂರ್ಛಿತಳಾಗಿ ಪತಿಯ ಕಾಲಡಿಯಲ್ಲಿ ಬಿದ್ದಳು. ಇವಳ ಗೋಳಾಟವನ್ನು ಮುದ್ದುಮೋರೆಯ ಭಾಸ್ಕರನು ಏನೂ ತಿಳಿಯದೆ ತಾಯಿಯ ಅಪ್ಪಣೆಯ ಮೇರೆಗೆ ತಂದೆಯ ಮುಖಕ್ಕೆ ಮುಖ ತಾಗಿಸಿ ಸುಮ್ಮನೇ

ಮಲಗಿಕೊಂಡ ಸೊಬಗನ್ನು ನೋಡಿ, ಅಲ್ಲಿ ಕೂಡಿದ ಸಮಸ್ತರೂ ಕಣ್ಣೀರಿಟ್ಟರು. ಅಲ್ಲಿಂದಿಲ್ಲಿಂದ ಡಾಕ್ಟರರೂ ಪಂಡಿತರೂ ಬಂದು ಮುಟ್ಟಿ ಪರೀಕ್ಷಿಸಿ ನೋಡಿದಲ್ಲಿ ಸುಂದರರಾಯನಿಗೆ ಎಷ್ಟು ಮಾತ್ರವೂ ಪ್ರಾಣದ ಸುಳಿವು ಇರಲಿಲ್ಲ. ಶರೀರವೆಲ್ಲ ನೀಲಛಾಯೆಯಾಗಿಹೋಗಿತ್ತು. ಇದು ವಿಷಪ್ರಯೋಗವಲ್ಲದೆ ಬೇರೇನೂ ಅಲ್ಲವೆಂದು ವೈದ್ಯರೆಲ್ಲರೂ ಹೇಳಿದರು. ಭೀಮರಾಯನಲ್ಲಿಗೆ ಅವನನ್ನು ಕರೆಯುವುದಕ್ಕೆ ಹೋದವರು ತಿರುಗಿ ಬಂದು ಆತನು ಸಹ ಏನೋ ಅಸ್ವಸ್ಥದಿಂದ ಮಲಗಿಕೊಂಡಿದ್ದಾನೆ, ಸಂಬಂಧಿಕರೆಲ್ಲರೂ ಕೂಡಿದ್ದಾರೆ ಎಂದು ಹೇಳಿದರು. ಸೂರ್ಯಾಸ್ತಮಯವಾಗಿ ಕತ್ತಲೆಯಾಯಿತು. ನಗರದ ಪೋಲೀಸಿನವರು ಶವವನ್ನು ನೋಡಿ ಒಬ್ಬರಿಬ್ಬರೊಡನೆ ಒಂದೆರಡು ಮಾತುಗಳನ್ನು ಕೇಳಿ, ರಾತ್ರಿಕಾಲದಲ್ಲಿ ಶವ ಪರೀಕ್ಷೆ ಮಾಡುವ ಕ್ರಮವಿಲ್ಲದುದರಿಂದ ಮರುದಿನ ಬೆಳಿಗ್ಗೆ ಮಾಡುವುದೆಂತ ನಿಶ್ಚಯಿಸಿ, ನಿಯಮಾನುಸಾರ ಶವದ ಹತ್ತಿರ ಬೆಳಗಾಗುವವರೆಗೆ ಕಾವಲು ನಿಂತರು. ಮಧ್ಯರಾತ್ರಿಯಾಯಿತು. ಆಹಾರವಿಲ್ಲದೆ ದುಃಖದಿಂದ ಬಳಲಿ ಅಕಲವಿಕಲವಾದ ಆ ಮನೆಯವರು ಒಬ್ಬೊಬ್ಬರೇ ನಿದ್ರೆಹೋದರು. ಆಗ ಮೆಲ್ಲಗೆ ಜಮೇದಾರ ನಿಕ್ಲಾವ ಫೆರ್ನಾಂದನು ಜವಾನ ಅಂತೋನ ಸೋಜನೊಡನೆ,

| | |
|---|---|
| “ಕಿತೆಂಗಾ ಅಂತೊನ ಸೋಜ್, ಅಂತು ಕಿತೆಂಕೀ ಥೊಡೆ॰ಸ್ ಗುಮಾನ್ ದಿಸ್ತಾಮುಗಾ?” | “ಏನಯ್ಯಾ, ಅಂತೋನ ಸೋಜ? ಇದರ ಲ್ಲೇನೊ ರವಷ್ಟು ಸಂಶಯ ಕಾಣುತ್ತಷ್ಟೆ.” |
| “ಮಾಕ್ಯಾ ತಹಂಚ್ ದಿಸ್ತಾ. ಇಸಾ ಪರ್ಯೊಗ ಮ್ಹೊಣು ಡಾಕ್ತೆರ ಮ್ಹಣ್ತಾ.” | “ನನಗೂ ಹಾಗೆ ತಾನೇ ಕಾಣುತ್ತೆ. ವಿಷ ಪ್ರಯೋಗವೆಂದು ಡಾಕ್ಟರರು ಹೇಳುತ್ತಿದ್ದರು.” |
| “ಮೊಡ್ಯಾಚೊ ಬೊಣ್ಣು ಪೊಳ್ಯಾಲಾಕ್ಕೆ?” | “ಶವದ ಬಣ್ಣ ನೋಡಿದೆಯಾ?” |
| “ಪೊಳ್ಯಾಲೊಗಾ, ಕಾಳೊಚ್ ಆಹಾ.” | “ನೋಡಿದ್ದೇನಯ್ಯಾ, ಕಪ್ಪಾಗಿದೆ.” |
| “ಯೆಂ॰ ಕಿತೆ॰ ಉದ್ಯಾ॰ ಮ್ಹಣ್ಸರ್ ರಾಕ್ ಬೆಂಟ್‌ಕ್ಯಾ? ಆಂತು ಕ್ಯಾ॰ ಫ್ಯಾದೊ ಆಹಾಕ್ಯಾ?” | “ಇದೇನು ಬೆಳಿಗ್ಗೆ ಪರ್ಯಂತರ ಕಾಯುವು ದೆಯೋ? ಅಲ್ಲ ಇದರಲ್ಲೇನಾದರೂ ಪ್ರಯೋ ಜನವಿದೆಯೋ?” |
| “ಪೊಳೈಜೆ; ತೂ॰ ಘಟ್‌ರಾವ್, ವೊ ಮೆಲೆಲೊ ಕೊಣೆ ಜಾಣಕ್ಯಾ?” | “ನೋಡಬೇಕು, ನೀವು ಗಟ್ಟಿಯಾಗಿ ನಿಲ್ಲಿರಿ, ಈ ಮೃತವಾದವನ್ಯಾರೆಂದು ಬಲ್ಲಿರಾ?” |
| “ಕೋಣ?” | “ಯಾರು?” |
| “ತೋ ಪೋಳೆ, ಭಿಮಾರಾವು ಲೊಂಕ್‌ಣಾಚಿ ಬೊಂಣ್‌ಸಾಳ್ ದೊವರ್ತಾ, ತಾಚೊ ಕಿತೆಂಕೀ ಜಾಯಿಚೆ.” | “ಅವನಿಗೋ, ಭೀಮರಾಯ, ಕಬ್ಬಿಣದ ಭಂಡಸಾಲೆಯನ್ನಿಟ್ಟಿದ್ದಾನೆ. ಅವನಿಗೇನೋ ಆಗಬೇಕು.” |

“ತೊ ಕಿತೆಂ ವೊಡ್ಲೊ ಸಾವ್‌ಕಾರು ಕ್ಯಾ?”

“ಅವನೇನು ದೊಡ್ಡ ಸಾವುಕಾರನೇ?”

“ತು ನೇಣಾ, ತುಂ ಪೋರಾ ಆಯಿಲ್ಲೊ, ತೊವೊಡ್ಲೊದೆವ್‌ಚಾರು!”

“ನಿಮಗೆ ಗೊತ್ತಿಲ್ಲ, ನೀವು ನಿನ್ನೆ ಬಂದವರು. ಅವನು ದೊಡ್ಡ ಭೂತ.”

“ತಾಚೆಂ ಗರ್ ಕಂಚಾಕುಸಿನ್? ಅಚೆಂ ಗರ್ ಕಂಚಾಕುಸಿನ್? ತು ಕಿತೆಂ ಮ್ಹಂಟಾಗಾ?”

“ಅವನ ಮನೆ ಯಾವ ದಿಕ್ಕಿನಲ್ಲಿ? ಇವನ ಮನೆ ಯಾವ ದಿಕ್ಕಿನಲ್ಲಿ? ನೀನೇನು ಹೇಳುತ್ತೀಯಾ?”

“ತುಂ ಉಗೊಚ್‌ರಾವ್, ಪಾಲ್ಯಾ ಕಲ್ಚೆಂ.”

“ನೀವು ಸುಮ್ಮಗಿರ್ರಿ. ನಾಳೆ ತಿಳಿಯುವುದು.”

ಹೀಗೆಲ್ಲ ತಮ್ಮೊಳಗೆ ಮಾತನಾಡುತ್ತಾ ಇರುವ ಸಮಯದಲ್ಲಿ ರಾತ್ರೆ ರೋಂದಿನ ಜವಾನರಾದ ಬೊಗ್ಗು, ಜಾರಪ್ಪ ಇವರು ಅಲ್ಲಿಗೆ ಬಂದು ಮುಟ್ಟಿ, ಶವದ ಬಳಿಯ ಕಾವಲಿದ್ದವರೊಡನೆ ಮಾತನಾಡಿ, ಮುಂದರಿಸಿಹೋಗುತ್ತಾ ಭೀಮರಾಯನ ಮನೆ ಬಳಿಗೆ ತಲುಪಿದಾಗ ಕಗ್ಗತ್ತಲೆಯಲ್ಲಿ ಭಯಪಟ್ಟು, ಎರಡು ಮೂರು ಸಾರಿ ಬಿಗಿಲ್ ಊದಿಬಿಟ್ಟರು. ಸುಂದರರಾಯನ ಮನೆಯಿಂದ ಗುಲ್ಲು ಕೇಳಿದ ಮೇಲೆ ಭಯದಿಂದ ಮೊದಲೇ ಕಂಗಾಲಾಗಿದ್ದ ಭೀಮರಾಯನು ಈ ಬಿಗಿಲ್‌ಗಳನ್ನು ಕೇಳಿದೊಡನೆ ಕಳವಳಿಸಿ ರೋಮಾಂಚನಾಗಿ ಅಂಬಾಬಾಯಿಯನ್ನು ಕರೆದು, “ಪ್ರಿಯಳೇ, ಇಗೋ ಇದೇನೋ ಬಂತು ಪೀಕಲಾಟ! ಇದಕ್ಕೇನು ಮಾಡೋಣ?” ಎನಲು, ಅವಳು, “ತಾವು ಹೆಂಗಸರಿಗಿಂತ ಕಡೆಯಾಗಿ ಹೆದರುವುದೇಕೆ? ಅವರನ್ನು ಒಳಗೆ ಕರೆದುತಂದು ಏನಿದ್ದರೂ ಒಂದೂ ಇಲ್ಲದಂತೆ ಮಾಡುವುದು ದೊಡ್ಡ ಮಾತೇ?” ಎಂದು ಧೈರ್ಯಕೊಡಲು, ಭೀಮರಾಯನು ಮೆಲ್ಲಗೇ ಹೊರಗೆ ಬಂದು, ಅವರನ್ನು ಒಳಗೆ ಕರೆದುಕೊಂಡು ಹೋಗಿ, ಚಕಾರ ಶಬ್ದವಿಲ್ಲದೆ ಒಬ್ಬೊಬ್ಬನ ಕೈಯಲ್ಲಿ ಒಂದೊಂದು ಪವನನ್ನಿಟ್ಟು, “ನಡೀರಣ್ಣಾ” ಎಂದು ಹೇಳಿಕಳುಹಿಸಿದನು. ಅವರು ಇದೇನೆಂದು ತಮ್ಮಲ್ಲೇ ಬೆರಗುಗೊಂಡು, ಏನಿದ್ದರೂ ನಾಳೆ ನೋಡಿಕೊಳ್ಳೋಣ, ಈಗ ಸಿಕ್ಕಿದ್ದು ಮಕ್ಕಳ ಪುಣ್ಯವೆಂದು ಮಾತನಾಡಿಕೊಂಡು ಮುಂದರಿಸಿಹೋಗಿ, ಒಂದು ವಾಸ್ತವ್ಯವಿಲ್ಲದ ಅಂಗಡಿಯಲ್ಲಿ ಬೆಳಗಾಗುವವರೆಗೆ ಮಲಗಿಕೊಂಡರು.

## ೮

ಮಾರಣೆದಿನ ಸೂರ್ಯೋದಯವಾಗುತ್ತಲೆ ನಗರದ ಅಧಿಕಾರಿ ಸೋಮನಾಥಯ್ಯ, ಶಿಪಾಯಿ ಯಾಕುಬಖಾನ್, ಪೋಲೀಸ್ ಸ್ಟೇಶನಿನಿಂದ ಫೌಜುದಾರ ರಂಗರಾವ್, ಬೇರೆ ಒಬ್ಬರಿಬ್ಬರು ಪೋಲೀಸ ಜವಾನರು ಸಹ ಸುಂದರರಾಯನ ಶವವಿದ್ದಲ್ಲಿಗೆ ಬಂದು, ನೆರೆಕರೆ ಗೃಹಸ್ಥರನ್ನು ಕರೆಯ ಕಳುಹಿಸಿದ್ದಲ್ಲಿ, ಭೀಮರಾಯನು ತನಗೆ ಸ್ವಲ್ಪ ಅಸ್ವಸ್ಥವಿರುವುದರಿಂದ ಬರುವುದಕ್ಕೆ ಕೂಡುವುದಿಲ್ಲವೆಂದು ಹೇಳಿಕಳುಹಿಸಿದನು. ಬೇರೆ ಎಲ್ಲರೂ ಬಂದು ಕೂಡಿ

ಕ್ರಮಾನುಸಾರವಾಗಿ ಶವವನ್ನು ಪರೀಕ್ಷಿಸಿ, ಪಂಚಾಯತಿ ಮಾಡಿ, ಯಾದಾಸ್ತನ್ನು ಬರೆದರು. ಮರಣ ಉಂಟಾಗುವ ಮೊದಲು ಸುಂದರರಾಯನು ಯಾವುದೊಂದೂ ರೋಗವಿಲ್ಲದೆ ಆರೋಗ್ಯಸ್ಥಿತಿಯಲ್ಲಿದ್ದು, ಭೀಮರಾಯನಲ್ಲಿ ಫಲಾಹಾರ ಮಾಡಿ ಬಂದ ಸ್ವಲ್ಪ ಸಮಯದಲ್ಲೇ ಮರಣಪಟ್ಟನೆಂದು, ಮೃತನ ವಿಧವೆ ಸುಶೀಲೆಯೂ ಹಾಗೆಯೇ ಬೇರೆ ಸಂಬಂಧಿಕರೂ ನೆರೆಕರೆಯವರೂ ಹೇಳಿದುದರಿಂದಲೂ ಬೇರೆ ಯಾವ ಕಾರಣದಿಂದಲಾದರೂ ಮರಣ ಉಂಟಾಗಿರಬಹುದೆಂದು ಎಣಿಸುವುದಕ್ಕೆ ಸಂಗತಿಗಳು ಕಂಡುಬಾರದುದರಿಂದಲೂ, ಶವವು ಡಾಕ್ಟರ್ ದೊರೆಯಿಂದ ಪರಶೋಧಿಸುವಣಾಗುವುದು ಅತ್ಯವಶ್ಯವೆಂದು ಪಂಚಾಯತರು ಕಂಡುಕೊಂಡು, ಅದೇ ಪ್ರಕಾರ ಫೈಸಲು ಬರೆದು ಪೋಲೀಸ್ ಜವಾನ ಅಂತೋನ ಸೋಜನ ಭದ್ರಿಕೆಯಲ್ಲಿ ಶವವನ್ನು ಆಸ್ಪತ್ರಿಗೆ ಕಳುಹಿಸಿಕೊಟ್ಟ ಬಳಿಕ ಫೌಜುದಾರನು ಜಮೇದಾರನ ಸಮೇತ ಈ ಮರಣವನ್ನು ಕುರಿತು ಪ್ರತ್ಯಕ್ಷವಾದ ಅಥವಾ ಸಂಗತ್ಯಾನುಸಾರವಾದ ರುಜುವಾತು ಸಿಕ್ಕುವುದೋ ನೋಡೋಣವೆಂದು ಅಲ್ಲಿಂದ ಹೊರಟುಹೋದನು. ನೆರೆಕರೆಯಲ್ಲಿ ಕೆಲವು ಸ್ಥಳಗಳಲ್ಲಿ ವಿಚಾರಿಸಲಾಗಿ ತತ್ಕಾಲಕ್ಕೆ ವಿಶೇಷವಾದ ಯಾವುದೊಂದೂ ರುಜುವಾತು ಸಂಗ್ರಹವಾಗದಿದ್ದರೂ, ಸುಂದರರಾಯನು ಅಂಬಾಬಾಯಿಯನ್ನು ಕುರಿತು ಏನೋ ಕ್ಷುದ್ರಾ ಹೇಳುತ್ತಿದ್ದನೆಂದೂ, ತತ್ಸಂಬಂಧದಲ್ಲಿ ಸೀತಾಬಾಯಿಗೂ ಅವಳಿಗೂ ಸ್ವಲ್ಪ ಮಾತುಕತೆ ನಡೆದಿತ್ತೆಂದೂ, ಫಲಾಹಾರಕ್ಕೆ ಬದನೇಕಾಯಿ ಬಜ್ಜೆಗಳನ್ನು ಪ್ರಖ್ಯಾತಿಪಟ್ಟ ತುಮಕೂರು ದೇವಕಿಯು ತಯಾರುಮಾಡಿಕೊಟ್ಟಿದ್ದಳೆಂದೂ, ಆ ದಿವಸ ಬೆಳಿಗ್ಗೆ ಸೋಮಯ್ಯನು ಒಂದು ಮುಡಿ ಅಕ್ಕಿಯನ್ನು ದೇವಕಿಯ ಮನೆಯ ಕಡೆಗೆ ಹೊತ್ತುಕೊಂಡುಹೋಗಿದ್ದನೆಂದೂ "ದುಖಿಪಿ"ಯಿಂದ ಸ್ವಲ್ಪ ವರ್ತಮಾನ ಸಿಕ್ಕಿತು. ಹಾಗೆಯೇ ಹೆಚ್ಚಿನ ವರ್ತಮಾನವನ್ನು ಸಂಗ್ರಹಿಸುತ್ತಿರುವಲ್ಲಿ ಅಂತೋನ ಸೋಜನು ಡಾಕ್ಟರ್ ದೊರೆಯ ಸರ್ಟಿಫಿಕೇಟೆಂಬ ಸಾಕ್ಷ್ಯಪತ್ರವಿರುವ ಕೆಂಪರಗಿನ ಮುದ್ರೆಗಳಿಂದ ಭದ್ರಮಾಡಲ್ಪಟ್ಟ ಲಕೋಟೆಯನ್ನು ತಂದು ಫೌಜುದಾರನ ಕೈಯಲ್ಲಿ ಕೊಟ್ಟನು. ಅವನದನ್ನು ಬಿಚ್ಚಿ ಸಾಕ್ಷ್ಯಪತ್ರವನ್ನು ಓದಲಾಗಿ, ಅದರಲ್ಲಿ ಮರಣವು ಬಹು ಕಠಿಣವಾದ ವಿಷದಿಂದುಂಟಾದದ್ದೆಂದು ತಾನು ಅಭಿಪ್ರಾಯಪಡೆದಿದ್ದೇನೆಂತಲೂ ಅನ್ನಕೋಶವನ್ನು "ಕೆಮಿಕಲ್ ಎಗ್ಝಾಮಿನರ್" ಎಂಬ ರಸಾಯನ ಪರೀಕ್ಷಕರ ಬಳಿಗೆ ಪರಿಶೋಧನೆಗೋಸ್ಕರ ಕಳುಹಿಸುವುದಕ್ಕೆ ನಿಶ್ಚಯಿಸಿದೆಯೆಂತಲೂ ಬರೆದಿರುವುದನ್ನು ನೋಡಿ, ಜಮೇದಾರನನ್ನು ಕರೆದು, "ಇಗೋ, ಇದು ಸಾಧಾರಣವಾದ ಮೊಕದ್ದಮೆಯಲ್ಲ, ಕೊಲೆ ಎಂದು ತೋರುತ್ತೆ; ಇದನ್ನು ಬಹು ಯುಕ್ತಿಯಿಂದಲೂ ಪ್ರಯತ್ನದಿಂದಲೂ ತಲಾಸು ಮಾಡಬೇಕು. ಒಬ್ಬ ದೊಡ್ಡ ಮನುಷ್ಯನು ಇದರಲ್ಲಿ ಸೇರಿರುವುದಾಗಿ ತೋರುತ್ತೆ; ಹಗಲು ರಾತ್ರಿ ರೋಂದಿನ ಜವಾನರಿಗೆಲ್ಲ ಚೆನ್ನಾಗಿ ಉಪದೇಶ ಉತ್ತೇಜನಗಳನ್ನು ಕೊಟ್ಟು ರುಜುವಾತು ವರ್ತಮಾನಗಳನ್ನು ಸಂಗ್ರಹಿಸಿ, ಅಪರಾಧಿಯನ್ನು ನ್ಯಾಯಕ್ಕೆ ಗುರಿಪಡಿಸುವುದಕ್ಕೆ ಬೇಕಾದ ಸಕಲ ಪ್ರಯತ್ನಗಳನ್ನು ತಿಲಮಾತ್ರವೂ ಆಲಾಜೋಲಿ ಇಲ್ಲದೆ ಮಾಡಬೇಕು. ಈ ಮೊಕದ್ದಮೆಯಲ್ಲಿ ಮೆಹನತ್ತು ಮಾಡಿ ಅಪರಾಧಿಯ ಶಿಕ್ಷೆಗೆ ಬೇಕಾದುದಷ್ಟು ರುಜುವಾತನ್ನು

ಸಂಗ್ರಹಿಸಿ ರಿಪೋರ್ಟು ಮಾಡುವವನಿಗೆ ಬಡತಿಯೂ ಇನಾಮೂ ನಿಶ್ಚಯವಾಗಿ ಸಿಕ್ಕುವುದು. ಇಂಥಾ ನಗರದಲ್ಲಿ ರಾತ್ರಿ ಹಗಲು ಪೋಲೀಸ ಜವಾನರೂ ಹುದ್ದೇದಾರರೂ ಗಲ್ಲಿಗಲ್ಲಿಗಳಲ್ಲಿ ತಿರುಗುತ್ತಿರುವಾಗ ಇಂತಹ ಘೋರತರದ ತಪ್ಪುಗಳು ನಡೆಯುವುದೂ, ಅವುಗಳನ್ನು ಪತ್ತೆಮಾಡಿ ತಪ್ಪುಗಾರರನ್ನು ಶಿಕ್ಷೆಗೆ ಗುರಿಪಡಿಸದೆ ಇರುವುದೂ, ನಮಗಂತೂ ನಾಚಿಕೆಯ ವಿಷಯತಾನೇ. ಶ್ರೀ ಮಹಾರಾಣಿಯವರ ಸಾಮ್ರಾಜ್ಯದ ಮಹಿಮೆಗೂ ಕೊರತೆಯನ್ನುಂಟು ಮಾಡುವುದು. ಮಂಜಪ್ಪ ಸೆಟ್ಟಿಯ ಕೊಲೆಯು ಈ ವರೆಗೆ ಪತ್ತೆ ಸಿಕ್ಕದೆ ಇದ್ದ ದೆಸೆಯಿಂದ ನಗರದ ಪೋಲೀಸಿನವರಿಗೆ, ಮುಖ್ಯವಾಗಿ ನನಗೆ, ಬಂದ ಅಪಕೀರ್ತಿಯೇ ಸಹಿಸಕೂಡದ್ದು. ಹುಷಾರು! ನೋಡಿಕೊಳ್ಳಿರಿ!" ಎಂದು ಹೀಗೆಲ್ಲಾ ಎಚ್ಚರಿಕೆಯ ಮಾತುಗಳನ್ನು ಹೇಳಿ ಮುಂದಣ ಕಾರ್ಯಗಳನ್ನಾಲೋಚಿಸುತ್ತಾ ಇರುವಾಗ ಸಾಯಂಕಾಲದ ಕವಾತಿಗೆ ಹೋಗುತ್ತಿದ್ದ ಬೊಗ್ಗು, ಜಾರಪ್ಪ ಇವರು ಅಲ್ಲಿಗೆ ಬಂದು ಮುಟ್ಟಿದರು. ಫೌಜುದಾರನು ಅವರನ್ನು ಕರೆದು,

"ಏನಿರೈ, ಈ ವಾರದಲ್ಲಿ ಅಗ್ರಹಾರದ ಕೇರಿಯಲ್ಲಿ ರೋಂದು ನೀವಲ್ಲವೇ ಮಾಡುತ್ತಿದ್ದೀರಿ?"

ಬೊಗ್ಗು: "ಹೌದು, ಸ್ವಾಮಿ."

"ಈ ಕೊಲೆಯ ಸಂಗತಿಗಳೇನಾದರೂ ಈ ವರೆಗೆ ನಿಮ್ಮ ತಿಳುವಳಿಕೆಗೆ ಬಂದಿವೆಯೋ?"

"ಈ ವರೆಗೇನೂ ಇಲ್ಲ ಸ್ವಾಮೀ; ಆದರೂ ನಾವಿದರಲ್ಲಿ ತಲಾಸಿಗೆ ತೊಡಗಿದರೆ, ಮೊಕದ್ದಮೆಯು ಪತ್ತೆಯಾಗದೆಹೋಗದೆಂದು ನಂಬುತ್ತೇವೆ."

"ಅದೇನು? ನಿಮಗೇನಾದರೂ ಗುಟ್ಟು ಮೊದಲೇ ಸಿಕ್ಕಿದೆಯೇ?"

"ಗುಟ್ಟೆಂದರೆ, ಸ್ವಾಮಿ, ನಿನ್ನೆ ರಾತ್ರಿ ನಾವು ರೋಂದಿನಲ್ಲಿದ್ದಾಗ ಎರಡು ಮೂರು ಸಾರಿ ನಮ್ಮ ಬಿಗಿಲ್–"

(ಜಾರಪ್ಪನು ಅಷ್ಟರಲ್ಲಿ ಬೊಗ್ಗುವಿನ ಬೆನ್ನನ್ನು ಬೆರಳಿನಿಂದ ಕುಕ್ಕಿ ಆ ಸುದ್ದಿಯನ್ನು ಹೇಳದ ಹಾಗೆ ಸೂಚನೆ ಮಾಡಿದನು.)

ಫೌಜುದಾರ: "ಏನೆಲೋ? ಮುಖ ಮುಖ ನೋಡುತ್ತಿದ್ದೀ? ಪೂರ್ಣವಾಗಿ ಮಾತನಾಡು; ಬಿಗಿಲ್ ಏನು ಮಾಡಿದಿರಿ?"

"ಬಿಗಲ್–ಸ್ವಾಮಿ–"

"ಏನೆಲೋ? ನಾಲಿಗೆಯೇ ತಡವರಿಸುತ್ತೆ? ಇದ್ದದ್ದನ್ನು ಹೆದರದೆ ಹೇಳಿ ಬಿಡು."

"ಭೀಮರಾಯನ ಮನೆಯ ಬಳಿ ಮುಟ್ಟಿದಾಗ ಕಗ್ಗತ್ತಲೆಯಲ್ಲಿ ಭಯಪಟ್ಟು ನಮ್ಮ ಬಿಗಲ್–"

"ಅರೆ! ಇವನ–ಬೊಗಳೆಲೊ! ಏನಾಯಿತೊ? ಬಿಗಿಲ್ ಏನು ಮಾಡಿದೆಯೋ?"

"ಇದ್ದದ್ದನ್ನು ಹೇಳುತ್ತೇನೆ; ಸ್ವಾಮಿ, ನಮ್ಮನ್ನು ಮಾತ್ರ ರಕ್ಷಿಸಬೇಕಷ್ಟೆ."

"ನಿಮ್ಮ ಪ್ರಾಣಕ್ಕೆ ಬಂದಿರುವುದೇನು, ಹೇಳು?"

"ಸ್ವಾಮಿ, ನಾವು ಎರಡು ಮೂರು ಸಾರಿ ಬಿಗಿಲ್ ಊದಿಬಿಟ್ಟೆವು. ಕೂಡಲೇ ಭೀಮರಾಯನು ಬಾಗಿಲು ತೆರೆದು ಹೊರಗೆ ಬಂದು ನಮ್ಮನ್ನು ಕರೆದುಕೊಂಡು ಹೋಗಿ ಒಬ್ಬೊಬ್ಬರಿಗೊಂದೊಂದು ಪವನು ಕೊಟ್ಟು, 'ನಡೀರಣ್ಣಾ' ಎಂದನು. ಅದೇನೆಂದು ನಮಗೆ ಗೊತ್ತಾಗಲಿಲ್ಲ. ಆದರೂ ಅನಾಯಾಸದಿಂದ ಸಿಕ್ಕಿದ್ದನ್ನು ಬಿಡುವುದೇಕೆಂದು ಯೋಚಿಸಿ ಕಿಸೆಯಲ್ಲಿ ಹಾಕಿಕೊಂಡು ಅಲ್ಲಿಂದ ಹೋಗಿ ಬೆಳಗಾಗುವ ಪರಿಯಂತರ ರೋಂದು ಮಾಡಿದೆವು. ಇದರಲ್ಲೇನೋ ಗುಟ್ಟಿದೆಯೆಂದು ಈಗ ಅನುಮಾನವಾಗುತ್ತೆ. ಆದುದರಿಂದ ನಮ್ಮನ್ನು ತಲಾಸಿಗೆ ಬಿಡಬಹುದೆಂದು ಸೂಚಿಸಿದೆ."

"ನೀವೇನೂ ಹೆದರಬೇಕಾದ್ದಿಲ್ಲ. ಈ ಗುಟ್ಟನ್ನು ಇನ್ಯಾರಿಗೂ ಹೇಳಬೇಡಿರಿ. ನಾನು ಬೇಗನೆ ಸುಪರಿಂಟೆಂಡೆಂಟ್ ದೊರೆಯನ್ನು ಕಂಡು ಮಾತನಾಡಿ ಬರುತ್ತೇನೆ. ಈಗ ನೀವೆಲ್ಲರೂ ಹೋಗಿರಿ" ಎಂದು ಹೇಳಿ ಫೌಜುದಾರನು ಸುಪರಿಂಟೆಂಡೆಂಟ್ ದೊರೆಯ ಬಂಗಲೆಯ ಕಡೆಗೆ ಕುದುರೆ ಹತ್ತಿ ಓಡಿಸಿದನು.

| | |
|---|---|
| ಜಮೇದಾರ ನಿಕ್ಲಾಂವ ಫೆರ್ನಾಂದ: "ಏನಯ್ಯಾ, ಅಂತೋನ್ ಸೋಜ, ಬೆಂಕಿ ಹತ್ತಿತೇನು?" | "ಕಿತೆಂಗಾ? ಉಜ್ಜೊ ಪೆಟ್ಲೊಕ್ಯಾ?" |
| ಅಂತೋನ್ ಸೋಜ: "ನಾನು ಮೊದಲೇ ಹೇಳಲಿಲ್ಲವೇ?" | "ಆವೆಂ ಪ್ಯೊಲೆಂಚ್ ಸಾಂಗೋಕ್ ನಾ ಕ್ಯಾ?" |
| ಬೊಗ್ಗು: "ಹೇಗೆ ಜಾರಪ್ಪ? ಬಾಯಿಗೆ ಮಣ್ಣಾಯಿತೇ?" | "ಎಂಚಾ, ಜಾರಪ್ಪಾ, ಬಾಯಿಗ್ ಮಣ್ಣಾಂಡಾ?" |
| ಜಾರಪ್ಪ: "ನಿನ್ನ ಕರ್ಮಾಂತರವೆಲ್ಲ ಹೇಳಿ ಕೊಟ್ಟೆ. ಈಗ ನಿನ್ನ ಬೊಜ್ಜ ಯಾರ ಹತ್ತಿರ ಹೇಳುತ್ತೀ" | "ನಿನಾ ಸಾವುಡ್ ಮಾತ ಪಂಡ್ ಕೊರ್ಡಿಯಾ. ಇತ್ತೆ ನಿನ್ನ ಬೊಜ್ಜಾ ಏರೆಡಾ ಪಣ್ಪಾ?" |
| "ಅದು ದೊಡ್ಡ ಭೂತ, ಹೇಳದಿದ್ದರೆ ಬಿಡುವುದೇ? ಅಯ್ಯೋ!" | "ಅವು ಮಲ್ಲ ಬೂತಾ! ಪಣಂದೆ ಬುಡುವಾ? ಉಳೊ!" |

ಹೀಗೆಲ್ಲಾ ಮಾತನಾಡುತ್ತಾ ಅವರೆಲ್ಲರೂ ತಂತಮ್ಮ ದಾರಿ ಹಿಡಿದುಹೋದರು.

## ೬

ಫೌಜುದಾರನು ಸುಪರಿಂಟೆಂಡೆಂಟ್ ದೊರೆಯನ್ನು ಕಂಡು, ಮೊಕದ್ದಮೆಯಲ್ಲಿ ಕಂಡುಬಂದ ಸಂಗತಿಗಳನ್ನೆಲ್ಲಾ ವಿವರವಾಗಿ ತಿಳಿಸಲು, ದೊರೆಯು, "ಫೌಜುದಾರರೇ, ಇದು ಮಂಜಪ್ಪ ಸೆಟ್ಟಿಯ ಕೊಲೆಯಂತೆ ಆಗಬಾರದು. ನಿಮಗೆ ಎರಡನೇ ಕ್ಲಾಸಿನ ದರ್ಜೆ ಸಿಕ್ಕುವುದು ಈ ಮೊಕದ್ದಮೆಯ ತೀರ್ಮಾನದ ಮೇಲೆ ಆಧರಿಸಿದೆ, ನೋಡಿರಿ!" ಎನ್ನುತ್ತಲೇ ಕುದುರೆಯನ್ನು ಓಡಿಸಿ ಮನೆಗೆ ಬಂದು, ರಾತ್ರಿಯ ಭೋಜನವನ್ನು ತೀರಿಸಿ, ರಾತ್ರಿಯಲ್ಲೂ ಜವಾನರನ್ನು ರೋಂದಿಗೆ ಕಳುಹಿಸುವುದಕ್ಕೆ ಅರ್ಧ ತಾಸು ಮುಂಚಿತವಾಗಿಯೇ ಸ್ಟೇಶನ್ನಿಗೆ ಬಂದು, ನಿಕ್ಲಾಂವ್ ಫೆರ್ನಾಂದ, ಅಂತೋನಿ ಸೋಜ, ಬೊಗ್ಗು, ಜಾರಪ್ಪ ಇವರನ್ನು ತನ್ನ ಆಫೀಸಿನ ಕೋಣೆಗೆ ಕರೆದು, "ನೋಡಿರಿ, ಈ ಹೊತ್ತು ರಾತ್ರಿಯಲ್ಲಿ ನೀವು ಯಾರಿಗೂ ಗೊತ್ತಾಗದಂತೆ ಭೀಮರಾಯನ ಮನೆಯ ಅತ್ರಾಫಿನಲ್ಲಿ ಹೊಂಚುಹಾಕಿ ಕಾದುಕೊಂಡಿದ್ದು, ಅವನಲ್ಲಿ ಯಾರು ಬರುತ್ತಾರೆ, ಯಾರು ಹೋಗುತ್ತಾರೆ, ಏನು ಮಾತನಾಡುತ್ತಾರೆ, ಭೀಮರಾಯ ಅಂಬಾಬಾಯಿ ಇವರು ಯಾವ ಸ್ಥಿತಿಯಲ್ಲಿರುತ್ತಾರೆ, ಮುಖ್ಯವಾಗಿ ಆ ಮನೆಯಲ್ಲಿಯೂ ಅತ್ರಾಫಿನಲ್ಲಿಯೂ ವಿಶೇಷವಾದ ಯಾವ ಸಂಗತಿ ನಡೆಯುತ್ತಿದೆ ಎಂಬುದನ್ನು ಚೆನ್ನಾಗಿ ದೃಷ್ಟಿ ಇಟ್ಟು ನೋಡಿ, ಕೇಳಿ, ತಿಳಿದು, ವಿಶೇಷವೇನಾದರೂ ಇದ್ದರೆ, ತತ್‌ಕ್ಷಣವೇ ನನಗೆ ತಿಳಿಸಬೇಕು, ಬಲ್ಲಿರಾ?" ಎಂದೆಚ್ಚರಿಸಿ ಹೇಳಿ, ಬೇಕಾದ ಬೇರೆ ಯುಕ್ತಿಗಳನ್ನೆಲ್ಲ ಹೇಳಿಕೊಟ್ಟು, ತಾನು ಹೇಳಿದಂತೇ ನಡೆದುಕೊಳ್ಳುತ್ತಾರೋ, ಇಲ್ಲವೋ ಎಂಬುದನ್ನು ತಿಳಿಯುವುದಕ್ಕೋಸ್ಕರ ತನ್ನ ಸರಕಾರಿ ಉಡಿಗೆಯನ್ನು ತೆಗೆದಿಟ್ಟು, ಒಂದು ಕಪ್ಪು ಸಕಲಾತಿಯ ಮುಸುಕು ಹಾಕಿಕೊಂಡು, ಯಾರಿಗೂ ತಿಳಿಯದ ಹಾಗೆ ಸಂಚರಿಸಿದನು.

ಬೊಗ್ಗು, ಜಾರಪ್ಪ, ಇವರು ಭೀಮರಾಯನ ಮನೆಯ ಚಾವಡಿಯಲ್ಲಿ 'ವಾಲಿವಧೆ'ಯ ಪ್ರಸಂಗ ನಡೆಯುವಲ್ಲಿ ಹೋಗಿ ಕುಳಿತುಕೊಂಡರು. ಭೀಮರಾಯನು ಅವರನ್ನು ನೋಡಿ "ಏನಿರಯ್ಯಾ? ಸುಂದರರಾಯನ ಮೊಕದ್ದಮೆಯ ತನಖಿ ಎಷ್ಟರಮಟ್ಟಿಗೆ ಬಗೆಹರಿಯಿತು? ಮರಣದ ಕಾರಣದ ವಿಷಯದಲ್ಲಿ ಏನಾದರೂ ಸಂಶಯವಿದೆಯೇ?" ಎಂದು ಕೇಳಲಾಗಿ, "ಡಾಕ್ಟರ ದೊರೆಯು ಕೊಟ್ಟ ಸರ್ಟಿಫಿಕೇಟಿನಲ್ಲಿ ಸಂಶಯಕ್ಕಾಸ್ಪದವಾಗುವ ಹಾಗಿನ ಸಂಗತಿಗಳೇನೋ ಇವೆಯಂತೆ. ಫೌಜುದಾರರು ಅತ್ತಲಾಗಿತ್ತಲಾಗೆ ಕುದುರೆಯನ್ನೋಡಿಸಿ ಸವಾರಿ ಮಾಡುತ್ತಾರೆ. ಈಗಲೇ ಸ್ಟೇಶನಿಗೆ ಬಂದು ಈ ಮೊಕದ್ದಮೆಯಲ್ಲಿ ಬ್ರಹ್ಮಾಂಡ ಪ್ರಯತ್ನಗಳನ್ನು ಮಾಡಬೇಕೆಂದು ಎಲ್ಲರಿಗೂ ಎಚ್ಚರಿಕೆ ಹೇಳಿ ಕೆಲವರಿಗೆಲ್ಲ ಅಂತರಂಗವಾಗಿ ಯುಕ್ತಿಗಳನ್ನು ಹೇಳಿಕೊಟ್ಟು ಮನೆಗೆ ಹೋದರು. ನಾವು ನಮ್ಮ ರೋಂದಿಗೆ ಬಂದೆವು. ನಾವು ಉಂಡ ಮನೆಗೆರಡು ಬಗೆಯುವವರಲ್ಲ. ನಾವು ಹೆಚ್ಚಾಗಿ ಅವರ ಮಾತಿಗೆ ಕಿವಿಗೊಡದೆ, ಹೇಳಿದ್ದಕ್ಕೆಲ್ಲ ಹೂಂಕುಟ್ಟಿ ಬಂದುಬಿಟ್ಟೆವು. ಎಂತಹ ತಲಾಸಿ, ಸ್ವಾಮಿ? ಮಂಜಪ್ಪ ಸೆಟ್ಟಿಯ ಕೊಲೆ ಈ ವರೆಗೆ ತಲಾಸಿಯಾಯಿತೇ? ನಾಲ್ಕು ಕಾಸು ಕೈಯಲ್ಲಿದ್ದವನು ಇಂಥಾ

ಮೊಕದ್ದಮೆಗಳಿಗೆಲ್ಲ ಹೆದರುವುದುಂಟೇ? ಪೋಲೀಸಿನವರ ಸ್ವಭಾವ ತಮಗೆ ಗೊತ್ತಿರುವುದೇ ತಾನೇ? 'ಹಣ ಕಂಡರೆ ಹೆಣ ಬಾಯಿಬಿಡುತ್ತೆ'. ಅದೆಲ್ಲ ಹಾಗಿರಲಿ, ಪ್ರಸಂಗವನ್ನು ಕೇಳಿ ಹೋಗೋಣವೆಂದು ಬಂದೆವು." ಎಂದುತ್ತರ ಕೊಡಲು, ಫೌಜುದಾರನ ಕೃತ್ಯಗಳನ್ನು ಕೇಳಿ ಭೀಮರಾಯನು ತುಂಬಾ ಭಯಪಟ್ಟನಾದರೂ, ಅದನ್ನು ಕಾಣಿಸದೆ, "ಹಾಗಾಗಲಿ, ಕುಳ್ಳಿರಿ, ಪ್ರಸಂಗ ಕೇಳಿ ಹೋಗಬಹುದು" ಎಂದವರಿಗೆ ಹೇಳಿದನು.

ಪ್ರಸಂಗದಲ್ಲಿ ಮದ್ದಳಿಗ, ಚಂಡೆ ಬಡೆಯುವವ, ಅರ್ಥ ನುಡಿಯುವವರು ಇವರೇ ಮುಂತಾಗಿ ಎಲ್ಲರೂ ಬಂದು ಕೂಡಿ ಸಭಾಲಕ್ಷಣ ಪ್ರಾರಂಭವಾಯಿತು. ಸ್ವಲ್ಪ ಪದಗಳನ್ನು ಹೇಳಿದ ಮೇಲೆ ಭೀಮರಾಯನು–"ಈ ಹೊತ್ತೇನೂ ನನ್ನ ಕಂಠವೇ ಸರಿ ಇಲ್ಲ? ಒಂದೆರಡು ಪದಗಳನ್ನು ಹಾಡುವಷ್ಟರಲ್ಲಿಯೇ ಬೆವರು ಹರಿಯುತ್ತೆ, ಒಂದೆರಡು ಸಾರಿ ನಾಲಿಗೆಯೇ ತಡವರಿಸಿದ ಹಾಗಾಗುತ್ತೆ. ಮನಸ್ಸೇ ಶುದ್ಧವಿದ್ದ ಹಾಗೆ ತೋರುವುದಿಲ್ಲ. ಪ್ರಸಂಗವನ್ನು ಬೇಗನೇ ಹೇಳಿ ಮುಗಿಸಿ ಮಲಗಿಕೊಳ್ಳೋಣ"ವೆಂದು ಹೇಳಿ, ಸಭಾಲಕ್ಷಣವನ್ನು ಪೂರ್ಣವಾಗಿ ಹೇಳದೆ, ಅಲ್ಲಲ್ಲಿ ಅಸಂದರ್ಭಗಳಲ್ಲಿ ಬಿಟ್ಟುಬಿಡುತ್ತಾ, ಅರ್ಥ ನುಡಿಯುವವರ ಕಡೆಗೆ ಎಂದಿನಂತೆ ಗಮನಿಸದೆ, "ಈ ಹೊತ್ತೇನೋ ನನಗೆ ಉತ್ಸಾಹವೇ ಇಲ್ಲ"ವೆಂದು ಹೇಳಿ, ಅರೆವಾಸಿಯಲ್ಲೇ ಸಭಾಲಕ್ಷಣವನ್ನು ನಿಲ್ಲಿಸಿ, ಪ್ರಸಂಗ ಹೇಳತೊಡಗಿದನು. ಪ್ರಸಂಗ ಪೀಠಿಕೆಯಲ್ಲಿ ಚಂಡೆ ಬಡೆಯುವ ಬಪ್ಪಯ್ಯನನ್ನು ಕುರಿತು, "ಈ ಹೊತ್ತು ಚಂಡೆ ಅಗತ್ಯವಿಲ್ಲ, ಅದರ ಶಬ್ದವು ಕಿವಿಯಲ್ಲಿ ಬೀಳುತ್ತಲೆ ಹೊಟ್ಟೆಯಲ್ಲೇನೋ ಕಳವಳ ಹುಟ್ಟುತ್ತೆ. ಮೃದಂಗ ಮಾತ್ರವೇ ಸಾಕು" ಎಂದು ಹೇಳಲು, ಅವನು ಚಂಡೆ ಬಡೆಯುವುದನ್ನು ನಿಲ್ಲಿಸಿದನು. ಪ್ರಸಂಗದಲ್ಲಿ ಅಲ್ಲಲ್ಲಿ ಕೆಲವು ಪದಗಳನ್ನು ಬಿಡುತ್ತಾ, ಸೀತಾಹರಣ, ಜಟಾಯು ಮರಣ, ಕಿಷ್ಕಿಂಧಾ ಪ್ರವೇಶ, ಸುಗ್ರೀವ ಸಖ್ಯ, ಇವೇ ಮುಂತಾದ ವಿಷಯಗಳನ್ನು ಬೇಗ ಬೇಗನೆ ಹೇಳುತ್ತಾ, ತನ್ಮಧ್ಯೆ ಅನೇಕ ಸಾರಿ ಪಂಕೆಯಿಂದ ಗಾಳಿ ಹಾಕಿಸಿಕೊಳ್ಳುತ್ತಾ, ವಾಲಿವಧೆಯಲ್ಲಿ ವಾಲಿಯು ಶ್ರೀ ರಾಮನಿಗೆ ಜರೆದು ಮಾತನಾಡಿದ,

> ಗಂಡರಿಲ್ಲದ ಹೆಂಗಳಂತೆ, ನಾಚಿ
> ಕೊಂಡು ನೀ ಮರೆಯಲ್ಲಿ ನಿಂತೆ,
> ಹೆಂಡತಿಗಾಗಿ ಕಂಡವರ ಮಾತಿನ ಮೇಲೆ
> ಭಂಡಾಟಗಳ ಮಾಡಿದೆ॥

ಎಂಬ ಪದವು ಬಾಯಿಂದ ಹೊರಗೆ ಬಿದ್ದದ್ದೇ ಸರಿ, ಕಣ್ಣಿಗೆ ಕತ್ತಲೆಮುಚ್ಚಿ ದೊಪ್ಪನೆ ತಿವಾಸಿಯ ಮೇಲೆ ಬಿದ್ದನು. ಆಗ ಪ್ರಸಂಗದ ಗದ್ದಲವೆಲ್ಲ ನಿಂತು ಹೋಗಿ, "ಏನಾಯಿತು ನೋಡಿರೋ!" ಎಂದು ಕೆಲವರು, "ಪನ್ನೀರನ್ನು ತಂದು ಕಣ್ಣುಗಳಿಗೂ ಎದೆಗುಂಡಿಗೂ ಮುಟ್ಟಿಸಿರೋ!" ಎಂದು ಇನ್ನು ಕೆಲವರು ಕೂಗಿ, ಹೀಗೆಲ್ಲ ತಾರು ಮಾರಾಯಿತು. ಮನೆಯೊಳಗೆ ಮಲಗಿಕೊಂಡಿದ್ದ ಅಂಬಾಬಾಯಿಯನ್ನು ಶ್ಯಾಮನು ಎಬ್ಬಿಸಿ, ಚಾವಡಿಯಲ್ಲಿ ನಡೆದ ವಿದ್ಯಮಾನವನ್ನು ತಿಳುಹಿಸಿದ ಕ್ಷಣವೇ ಅವಳು ಹೊರಗೆ ಬಂದು ಪನ್ನೀರು ಮೈಯ ಮೇಲೆ

ಹೊಯ್ದು, ಒಂದಿಷ್ಟು ಜ್ಞಪ್ತಿ ಬರುತ್ತಲೆ "ಕೇಳಿದಿರೇನು? ಕೇಳಿದಿರೇನು?" ಎಂದು ಒಂದೆರಡು ಸಾರಿ ಕರೆಯಲಾಗಿ ಭೀಮರಾಯನು ಕಣ್ಣುತೆರೆದು, ಒಂದು ಶ್ವಾಸವನ್ನು ಬಿಟ್ಟು, ಮೆಲ್ಲನೆ "ಸುಂದರರಾಯನೇ!" ಎಂದು ಕರೆದನು. ಅಂಬಾಬಾಯಿಯು ಇದನ್ನು ಕೇಳಿ ಇನ್ನು ಹೊರ ಚಾವಡಿಯು ಸಲ್ಲದೆಂದು ತಿಳಿದುಕೊಂಡು, ಕೈಗೆ ಕೈಕೊಟ್ಟು ಮೆಲ್ಲನೆ ಒಳಗೆ ನಡೆಯಿಸಿಕೊಂಡು ಹೋಗಿ ಮಂಚದಲ್ಲಿ ಮಲಗಿಸಿ, ಅಲ್ಲಿಗೆ ಬೇರೆ ಯಾರೂ ಬಾರದ ಹಾಗೆ ಕದವನ್ನು ಮುಚ್ಚಿ, ಬೀಸಣಿಗೆಯಿಂದ ಗಾಳಿ ಹಾಕಿ ಸ್ವಲ್ಪ ಹಾಲು ಕುಡಿಸಿ ತಕ್ಕ ಹಾಗೆ ಶುಶ್ರೂಷೆಯನ್ನು ಮಾಡಿ, ಸರಿಯಾಗಿ ಮಾತನಾಡತೊಡಗಿದ ಬಳಿಕ–

"ಕೇಳಿದಿರೇನು? ತಮ್ಮ ಸ್ವಂತ ಕೃತ್ಯಗಳಿಂದಲೇ ತಮ್ಮ ಮೇಲೆ ಅನುಮಾನ ಹುಟ್ಟುವಂತೆ ಮಾಡುತ್ತೀರಾ? ಸತ್ತುಹೋದ ಸುಂದರರಾಯನನ್ನೇಕೆ ಕರೆದಿರಿ?"

"ಪ್ರಿಯಳೇ, ನಾನು ಬೇಕೆಂದು ತಿಳಿದು ಕರೆದದ್ದಲ್ಲ. ಏನೋ ಬಾಯಿಯಿಂದ ಆ ಮಾತು ಬಂದುಹೋಗಿರಬೇಕು."

"ಇನ್ನಾದರೂ ತಾವು ಧೈರ್ಯದಿಂದಿರುವಿರಾ? ಸುಂದರರಾಯನನ್ನು ಕುರಿತು ಮಾತನಾಡದೆ, ಅವನ ನೆನಪು ಸಹ ಮಾಡದೆ ಇರುವಿರಾ?"

"ಹಾಗೆಯೇ ಇರುವೆನು."

"ಹಾಗಾದರೆ ಈಗ ಸುಮ್ಮಗೆ ಸ್ವಸ್ಥವಾಗಿ ಮಲಗಿಕೊಳ್ಳಿರಿ" ಎಂದು ಹೇಳಿ ಬೆನ್ನು ತಟ್ಟುತ್ತಾ ಕುಳಿತುಕೊಂಡು, ಅವನಿಗೆ ನಿದ್ರೆ ಹತ್ತಿದ ಬಳಿಕ ತಾನು ಸಹ ಮಲಗಿಕೊಂಡಳು.

ಪ್ರಸಂಗಕ್ಕೆ ಕೂಡಿದವರೆಲ್ಲರೂ ತಂತಮ್ಮ ಮನೆಗಳಿಗೆ ನಡೆದರು. ಬೊಗ್ಗು, ಜಾರಪ್ಪ, ಇವರು ಫೌಜುದಾರನ ಮನೆಗೆ ಹೋಗುತ್ತಾ ದಾರಿಯಲ್ಲಿ ಅವನು ಸಿಕ್ಕಿ ಭೀಮರಾಯನಲ್ಲಿ ನಡೆದ ಸಂಗತಿಗಳನ್ನೆಲ್ಲ ಸಾಂಗವಾಗಿ ಅವನಿಗೆ ಹೇಳಲು, "ಶಾಭಾಸು! ಒಳ್ಳೇ ಕೆಲಸ ಮಾಡಿದಿರಿ. ಇನ್ನು ಮುಂದೆ ನಮಗೆ ಪೂರ್ಣವಾಗಿ ರುಜುವಾತು ಸಿಕ್ಕುವವರೆಗೆ ಹೀಗೆಯೇ ವರ್ತಮಾನಗಳನ್ನು ಸಂಗ್ರಹಿಸಿ ನನ್ನಲ್ಲಿ ತಿಳುಹಿಸಬೇಕು, ಬಲ್ಲಿರಾ?" ಎಂದು ಬುದ್ಧಿ ಹೇಳಿ ಅವರನ್ನು ಕಳುಹಿಸಿಬಿಟ್ಟನು.

## ೧೦

ಮಾರಣೆದಿನ ಬೆಳಿಗ್ಗೆ ಭೀಮರಾಯನು ಎದ್ದು ಕಾಫಿಕುಡಿದು ಫಲಾಹಾರವನ್ನು ತೀರಿಸಿ, ಚಾವಡಿಯಲ್ಲಿ ಒಡ್ಡೋಲಗವಾಗಿ ತಾಂಬೂಲ ಚರ್ವಣ ಮಾಡುವಾಗ, ಫೌಜುದಾರನು ಕುದುರೆಯೋಡಿಸಿಕೊಂಡು ಬರುತ್ತಾನೆಂದು ಸೋಮಯ್ಯನು ಬಂದು ಹೇಳಿದ ಕೂಡಲೆ, ಗಡಗಡನೆ ನಡುಗುತ್ತಾ ಬೇಗನೆ ಬೀದಿಯ ಬಾಗಿಲಿಗೆ ಹೋಗುತ್ತಿರುವಾಗ ಚಾವಡಿಯ ಮೆಟ್ಟಲುಗಳಲ್ಲಿ ಕಾಲುತಪ್ಪಿ ಅಂಗಳದಲ್ಲಿ ದಡ್ಡೆಂದು ಬಿದ್ದು, ವಸ್ತ್ರಗಳಿಗೆ ಕೆಸರು ಅಂಟಿತು. ಮೆಲ್ಲಗೆ ಎದ್ದು ಬಾಗಿಲಿನ ಹತ್ತರ ಮುಟ್ಟುವಷ್ಟರೊಳಗೆ ಫೌಜುದಾರನು ಅಲ್ಲಿಗೆ ಬಂದಿಳಿಯಲು, "ಸ್ವಾಮೀ", ಎಂದು ನಮಸ್ಕರಿಸಿ ಒಳಗೆ ಕರೆದುಕೊಂಡು ಬಂದನು.

ಫೌಜುದಾರನು– “ಏನು ಭೀಮರಾಯರೇ, ಕ್ಷೇಮವೇ?”

“ಕ್ಷೇಮವೇ, ನಿನ್ನೆ ರಾತ್ರಿ ಪಿತ್ತದಿಂದ ತಲೆ ತಿರಿಗಿದಂತಾಗಿ ಮೈಯಲ್ಲೇನೋ ತುಸು ಆಯಾಸವಾಗಿತ್ತು. ಈಗ ಚಾವಡಿಯ ಮೆಟ್ಲುಗಳನ್ನಿಳಿದು ಬರುತ್ತಾ ಅಶಕ್ತಿಯ ದೆಸೆಯಿಂದೇನೋ ಕಾಲುತಪ್ಪಿ ಅಂಗಳದಲ್ಲಿ ಬಿದ್ದೆನು. ಮತ್ತೇನೂ ವಿಶೇಷವಿಲ್ಲ. ತಾವು ದಯಮಾಡಿಸಿದ ಕಾರ್ಯಾಕಾರಣ ತಿಳಿಯಲಿಲ್ಲವಷ್ಟೆ.”

“ನಿಮ್ಮನ್ನು ಕಂಡು ಮಾತನಾಡಿ ಹೋಗೋಣವೆಂದು ಬಂದೆನು.”

“ಚೆನ್ನಾಯಿತು. ಅಪರೂಪ ದರ್ಶನ. ರವಷ್ಟು ಕಾಫಿ ಫಲಾಹಾರ ಮಾಡೋಣ” ಎಂದು ಹೇಳಿ, ಶ್ಯಾಮನನ್ನು ಕರೆದು, ಒಳಗಿನ ಕೋಣೆಯಲ್ಲಿ ಫಲಾಹಾರ ತಯಾರು ಮಾಡೆಂದು ಹೇಳಿದನು.

“ನಾನೀಗ ತಾನೇ ಕಾಫಿ ಕುಡಿದು ಬಂದೆನು.”

“ಚಿಂತಿಲ್ಲ, ರವಷ್ಟೇ ತೆಗೆದುಕೊಳ್ಳೋಣ” ಎಂದಾದರಣೆ ಮಾಡಿ ತಾನು ಮುಂದಾಗಿ ಫೌಜುದಾರನು ಹಿಂದಾಗಿ ಒಳಗಿನ ಕೋಣೆಗೆ ಹೋದರು. ಅಂಬಾಬಾಯಿಯು ಒಂದು ಬೆಳ್ಳಿಯ ಪಾತ್ರದಲ್ಲಿ ಕಾಫಿ, ಒಂದು ಚಿಕ್ಕ ಬೆಳ್ಳಿ ಹರಿವಾಣದಲ್ಲಿ ಐದಾರು ಮಿಠಾಯಿ ಲಡ್ಡುಗಳನ್ನು ತೆಗೆದುಕೊಂಡು ಬಂದು, ಅವರು ಕುಳಿತಲ್ಲಿಟ್ಟಳು.

ಫೌಜುದಾರನು: “ಈಗಿನ ದಿವಸಗಳಲ್ಲಿ ಬೇರೆಯವರಲ್ಲಿ ಫಲಾಹಾರ ಮಾಡುವುದು ಅಪಾಯಕರವಾಗಿದೆ.”

“ಇದು ಬಹು ಚಲೋ ಮಿಠಾಯಿ. ತುಪ್ಪದಲ್ಲಿ ತಾನೇ ಮಾಡಿದ್ದು. ನಮ್ಮಲ್ಲಿ ಯಾವಾಗಲೂ ಒಳ್ಳೇ ಮಿಠಾಯಿಯೇ ಇರುವುದು.”

“ಆಗಿರಬಹುದು, ಸುಂದರರಾಯನು ನಿಮ್ಮಲ್ಲೇ ಫಲಾಹಾರ ತಿಂದು ಮೃತನಾದನು.”

“ಸುಂದ–ರ–ರಾಯ–ನು–ನಮ್ಮಲ್ಲಿ–ಫಲ–” ಇಷ್ಟು ಶಬ್ದಗಳನ್ನು ಸರಿಯಾಗಿ ಜೋಡಿಸಿ ಮಾತನಾಡಕೂಡದೆ, ಭೀಮರಾಯನು ಬಣ್ಣದ ಚಾಪೆಯ ಮೇಲೆ ಫಕ್ಕನೆ ಮಾಲಿಬಿದ್ದನು.

ಕೋಣೆಯ ಬಾಗಿಲಿಗೆ ತಾಗಿ ಹೊರಗೆ ನಿಂತುಕೊಂಡಿದ್ದ ಅಂಬಾಬಾಯಿಯು ಕೂಡಲೇ ಶ್ಯಾಮನನ್ನು ಕರೆದು, “ಶ್ಯಾಮಾ, ನಮಗೇನೋ ಗ್ರಹಚಾರ ಪೀಡಿಸುತ್ತೆ. ಯಜಮಾನರಗೋ ಬಿದ್ದಿದ್ದಾರೆ. ಶುಶ್ರೂಷೆ ಮಾಡಿ ಎಬ್ಬಿಸು!” ಎಂದು ಹೇಳಿ, ಫೌಜುದಾರನು ಕೇಳುವ ಹಾಗೆ, “ಇದು ನಮ್ಮ ಪ್ರಾಪ್ತಿ. ಈಗ ಕೆಲವು ತಿಂಗಳೀಚೆಗೆ ಹೀಗೆಯೇ ಆಗುತ್ತೆ. ಆ ದಿವಸ ಇಲಿ ಕತ್ರಿ ಉಮಾಪತಿ ಔಷಧಿಯನ್ನು ಕೊಡಬೇಕೆಂದಾಲೋಚಿಸಿದ್ದಾಗ ಎಲ್ಲರೂ ಬೇಡವೆಂದು ಹೇಳಿದರು. ಉಮಾಪತಿಯೋ ಅಲ್ಲಾಪತಿಯೋ ಯಾವುದಾದರೂ ಔಷಧಿಕೊಡದೆ ಇದು ಗುಣವಾಗದು” ಎಂದು ತನ್ನಲ್ಲಿ ತಾನೇ ಮಾತನಾಡಿಕೊಳ್ಳುವಷ್ಟರಲ್ಲಿ ಭೀಮರಾಯನು ಎದ್ದು ಕುಳಿತುಕೊಳ್ಳಲು, ಅಂಬಾಬಾಯಿಯು ಪುನಃ ಅಡಿಗೆಯವನನ್ನು ಕರೆದು, “ಶ್ಯಾಮಾ, ಬಿಳೀ ಡಾಕ್ತರರನ್ನು ಕರೆದುಕೊಂಡು ಬಾ” ಎಂದು ಹೇಳಿ, ಆತನು ಹೊರಟುಹೋಗುವಾಗ ಬೇಡವೆಂದು ಕೈಯಿಂದ ಸಂಜ್ಞೆಮಾಡಿ ಅವನನ್ನಡಿಗೆಕೋಣೆಗೆ ಕಳುಹಿಸಿದಳು. ಭೀಮರಾಯನು

ಎದ್ದು, "ಸ್ವಾಮಿ, ಬೇಸರಿಸಬಾರದಷ್ಟೆ. ನನಗಿತ್ತಲಾಗಿ ಕೆಲವು ದಿವಸಗಳಿಂದ ಹೀಗೆಯೇ ಆಗುತ್ತೆ. ಏಕೆಂದರಿಯೆನು" ಎನಲು, ಫೌಜುದಾರನು "ನಿಮಗೆ ಸುಂದರರಾಯನ ಹೆಸರು ತೆಗೆದರೆ, ಅಥವಾ ಆತನ ನೆನಪಾದರೆ ಮಾತ್ರ ಹೀಗಾಗುತ್ತದೇನೋ? ಇದಕ್ಕೆ ಡಾಕ್ಟರನ ಔಷಧಿಯಲ್ಲ, ನನ್ನ ಹತ್ತಿರ ಚಲೋ ಔಷಧಿ ಇದೆ" ಎಂದು ಹೇಳಿದನು. ಭೀಮರಾಯನು "ನನಗೆ ಗಂಟಲೇ ಆರಿ ಬರುತ್ತೆ, ಶ್ಯಾಮಾ, ಸ್ವಲ್ಪ ಚಲೋ ತಣ್ಣೀರು ತಾರಪ್ಪಾ" ಎನಲು, ಆತನು ಒಂದು ಚೊಂಬಿನಲ್ಲಿ ತುಂಬಾ ನೀರು ತಂದುಕೊಡಲಾಗಿ, ಅದನ್ನೆಲ್ಲ ಘಟಘಟನೆ ಕುಡಿದು, "ಸ್ವಾಮೀ, ಈ ಹೊತ್ತು ರಾತ್ರಿ ತಾವು ಪುನಃ ಇಲ್ಲಿಗೆ ದಯಮಾಡಿಸಬೇಕಷ್ಟೆ. ಕೆಲವು ಸಂಗತಿಗಳನ್ನು ತಮ್ಮ ಹತ್ತಿರ ಅಂತರಂಗವಾಗಿ ಹೇಳುವುದಕ್ಕಿದೆ. ಆಗಬಹುದೆ?" ಎಂದು ಕೇಳಿದನು. ಫೌಜುದಾರನು "ಓಹೋ, ಆಗಬಹುದಷ್ಟೆ" ಎಂದು ಹೇಳಿ ಎದ್ದು ಹೊರಟುಹೋದನು. ಕೂಡಲೇ ಅಂಬಾಬಾಯಿಯು ಒಳಗೆ ಬಂದು ಗಂಡನೊಡನೆ "ಚೆನ್ನಾಯಿತು. ಎಲ್ಲಾ ಕೆಲಸವನ್ನು ನಾನು ಸರಿಗೊಳಿಸುತ್ತೇನೆ. ಅವರು ಬಂದಾಗ ಮಾತ್ರ ತಾವು ಚೆನ್ನಾಗಿ ಮಾತನಾಡುತ್ತಾ ಅತ್ತಿತ್ತ ನಡೆದಾಡುತ್ತಾ, ಹರ್ಷದಲ್ಲಿದ್ದ ಹಾಗೆ ಕಾಣಿಸಿಕೊಳ್ಳಬೇಕಷ್ಟೆ" ಎಂದಳು. ಭೀಮರಾಯನು ಹಾಗಾಗಲೆಂದು ಹೇಳಿ ಫೌಜುದಾರನು ರಾತ್ರಿ ಬಂದಾಗ ಮಾಡಬೇಕಾದದ್ದೇನೆಂದು ಇಬ್ಬರೂ ಮಾತನಾಡಿ ನಿಶ್ಚಯಿಸಿದರು. ಫೌಜುದಾರನನ್ನು ಮಾತ್ರವೇ ರಾತ್ರಿ ಬರುವುದಕ್ಕೆ ಹೇಳಿದರೆ, ತಿಳಿದವರೇನಾದರೂ ಅಪಖ್ಯಾತಿಯ ಮಾತುಗಳನ್ನಾಡುವರೆಂದು ತಿಳಿದುಕೊಂಡು, ಅಂಬಾಬಾಯಿಯು ಗಂಡನೊಡನೆ, ಈ ಹೊತ್ತಿನ ಬ್ರಾಹ್ಮಣ ಸಂತರ್ಪಣೆಯು ಬದಲಿಗೆ ರಾತ್ರಿ ಭೋಜನವನ್ನು ಮಾಡಿಸುವುದುತ್ತಮವೆಂದು ಸೂಚಿಸಲು, ಅವನು ಸಮ್ಮತಿಸಿ, ಶ್ಯಾಮನನ್ನು ಕರೆದು, "ಶ್ಯಾಮಾ, ಬೇಗನೇ ಹೋಗಿ ನಾನು ಮೊನ್ನೆ ಊಟಕ್ಕೆ ಕ್ಷಣಿಸಿದವರಿಗೆಲ್ಲ ನನ್ನ ದೇಹಸ್ಥಿತಿ ಮುಂತಾದ್ದನ್ನು ತಿಳುಹಿಸಿ, ಹಗಲಿನ ಭೋಜನವು ರಾತ್ರಿಗೆಂದು ನಿಶ್ಚಯಿಸಿರುವುದಾಗಿ ಹೇಳಿ ಬಾ," ಎನಲು ಅವನು ಕೂಡಲೇ ಹೋಗಿ ಎಲ್ಲರಿಗೂ ಅದೇ ಪ್ರಕಾರ ತಿಳುಹಿಸಿಬಂದನು.

ಆ ಬಳಿಕ ರಾತ್ರಿ ಭೋಜನಕ್ಕೆ ಬೇಕಾದ ಸನ್ನಾಹವನ್ನು ಮಾಡಿಸಿ, ಮೈಯಲ್ಲಿ ಶಕ್ತಿ ಇಲ್ಲದುದರಿಂದಲೂ ಮನಸ್ಸಿನಲ್ಲಿ ನೆಮ್ಮದಿ ಇಲ್ಲದುದರಿಂದಲೂ ಆ ರಾತ್ರಿಯಲ್ಲಿ ಪ್ರಸಂಗ ಬೇಡವೆಂದು ನಿಶ್ಚಯಿಸಿ, ಫೌಜುದಾರನು ಮುಂತಾದ ಅಭ್ಯಾಗತರ ಬರೋಣವನ್ನು ನಿರೀಕ್ಷಿಸುತ್ತಾ, ಅಂಬಾಬಾಯಿಯು ಪತಿಗೆ ನಾನಾ ಪ್ರಕಾರದಲ್ಲಿ ಧೈರ್ಯ ಹೇಳುತ್ತಾ ಮಾತನಾಡಿಕೊಂಡಿರುವಾಗ ಅಭ್ಯಾಗತರು ಒಬ್ಬರಿಬ್ಬರಾಗಿ ಬರತೊಡಗಿದರು. ಫೌಜುದಾರನೂ ಬಂದು ಮುಟ್ಟಿದ ನಂತರ ಭೀಮರಾಯನು ತಾರತಮ್ಯಾನುಸಾರವಾಗಿ ಕೆಲವರಿಗೆ ಬೆಳ್ಳಿಯ ಬಟ್ಟಲುಗಳನ್ನು ಕೆಲವರಿಗೆ ಬಾಳೆಯೆಲೆಗಳನ್ನು ಇಡಿಸಿ, ಬಗೆಬಗೆಯ ಮೇಲೋಗರಗಳೂ ಭಕ್ಷ್ಯಪರಮಾನ್ನಗಳೂ ರಸಾಯನ ಪಾಯಸಗಳೂ ಇವೇ ಮೊದಲಾದ ಪದಾರ್ಥಗಳನ್ನು ಬಡಿಸಿ ಉಪಚರಿಸಿದನು. ಭೋಜನವಾದ ತರುವಾಯ ಎಲ್ಲರೂ ಚಾವಡಿಯಲ್ಲಿ ಕುಳಿತು, ಮಾತುಕಥೆಯನ್ನಾಡುತ್ತಾ, ವೀಳ್ಯಹಾಕುತ್ತಾ ಇರುವಾಗ, ಭೀಮರಾಯನು ತನ್ನೆದಿರಿನಲ್ಲಿ

ನೋಡಿ, “ಬಾ ಸುಂದರರಾಯನೇ, ಏಕೆ ನಿಂತಿದ್ದೀ? ಕುಳ್ಳಿರು” ಎಂದನು. ಕೂಡಿದವರೆಲ್ಲರೂ ಇದೇನು ಸೋಜಿಗವೆಂದತ್ತಿತ್ತ ನೋಡಿದರೂ, ಅವರಿಗ್ಯಾರಿಗೂ ಸುಂದರರಾಯನು ಕಾಣಿಸದೆ, ಅವರಲ್ಲಿ ಒಬ್ಬನು, “ಏನು ರಾಯರೇ ಏನು ಮಾತನಾಡುತ್ತೀರಿ?” ಎಂದು ಕೇಳಲು, “ಅಗೋ ಸುಂದರರಾಯ ನಿಂತಿದ್ದಾನೆ. ಬಾ ಎಂದು ಕರೆಯುತ್ತಾನೆ. ಸುಂದರರಾಯನೇ ಕುಳ್ಳಿರು, ನಿನ್ನ ಸಂಗತಿ–ಆ ದಿವಸ–ನರಸಿಂಹ ಶಾಸ್ತ್ರಿ–ದೇವಕಿ–ಒಂದು ಮುಡಿ ಅಕ್ಕಿ–”ಎಂದು ಹೀಗೆಲ್ಲ ಅಕಾಂಡತಾಂಡವ ಭಾಷಣಮಾಡತೊಡಗಿದನು. ಇದನ್ನರಿತು ಅಂಬಾಬಾಯಿಯು ಒಳಗಿನಿಂದಲೇ “ಅವರು ಒಳಗೆ ಬಂದು ಸ್ವಸ್ಥವಾಗಿ ಒಂದು ಕಡೆಯಲ್ಲಿ ಕೂಡ್ರಲಿ. ಎರಡನೇ ಪಿತ್ತೋದ್ರೇಕವಾಯಿತೇನೊ” ಎಂದಳು. ಭೀಮರಾಯನನ್ನು ಶ್ಯಾಮನು ಕೈಹಿಡಿದು ಒಳಗೆ ನಡೆಯಿಸಿಕೊಂಡು ಹೋದನು. ಫೌಜುದಾರನೂ ಅವರ ಸಂಗಡಲೇ ಒಳಗೆ ಹೋದನು. ಕೂಡಿದ ಬೇರೆ ಜನರು ತಮ್ಮೊಳಗೆ ಪಿಸಿಪಿಸೆಂದು ಮಾತನಾಡುತ್ತಾ ತಂತಮ್ಮ ಮನೆಗಳಿಗೆ ಹೋದರು. ಭೀಮರಾಯನೂ ಫೌಜುದಾರನೂ ಕುಳಿತುಕೊಂಡು ಮಾತನಾಡುವುದಕ್ಕೆ ಪ್ರಾರಂಭಿಸುವಷ್ಟರಲ್ಲಿ, ಅಂಬಾಬಾಯಿಯು ಒಂದು ಚಿಕ್ಕ ಬೆಳ್ಳೀ ಹರಿವಾಣದಲ್ಲಿ ನೂರು ಪವನುಗಳನ್ನಿಟ್ಟು ಅದನ್ನು ಫೌಜುದಾರನ ಮುಂದೆ ತಂದಿಟ್ಟು, “ಸ್ವಾಮೀ, ನನ್ನನ್ನು ರಕ್ಷಿಸಬೇಕಷ್ಟೇ!” ಎಂದು ಪ್ರಾರ್ಥಿಸಿದಳು. ಫೌಜುದಾರನು, ‘ಈಗ ಈ ಪವನುಗಳನ್ನು ತೆಗೆದುಕೊಳ್ಳದಿದ್ದರೆ, ಇವರಿಗೆಷ್ಟುಮಾತ್ರವೂ ತನ್ನ ಮೇಲೆ ವಿಶ್ವಾಸ ಹುಟ್ಟದು. ಯಾವುದೊಂದು ಗುಟ್ಟನ್ನಾದರೂ ಹೇಳಲಾರರೆಂ’ದು ಮನಸ್ಸಿನಲ್ಲೇ ಭಾವಿಸಿ, ಅದನ್ನು ತೆಗೆದು ಕಿಸೆಯಲ್ಲಿಟ್ಟು, “ಹೆದರುವುದೇಕೆ? ನಾನಿದ್ದೇನೆ, ನಾನು ಮಾಡುವ ಕೆಲಸಗಳಿಗೆಲ್ಲ ನೀವು ಸಮ್ಮತಿಸಬೇಕು. ತಲೆಯ ಹೂವು ಬಾಡದು. ನಾನಿನ್ನು ನಿಮ್ಮ ಮನೆಗೆ ಆಗಾಗ್ಗೆ ಬರುವುದು ಚಂದವಲ್ಲ. ಕರೆದಾಗ ಭೀಮರಾಯರು ಸ್ಟೇಶನಿಗೊ, ಬೇರೆ ಕಡೆಗೋ ಬರಲಿ. ಎಷ್ಟು ಮಾತ್ರಕ್ಕೂ ಬೆದರಬೇಡಿರಿ” ಎಂದು ಹೇಳಿ, ಹೊರಟು ಮನೆಗೆ ಹೋದನು. ಆ ಬಳಿಕ ಅಂಬಾಬಾಯಿಯು ಗಂಡನೊಡನೆ “ಹೇಗೆ ಚಮತ್ಕಾರಗಳು! ತಾವು ಬರೀ ಧೈರ್ಯಶೂನ್ಯರು, ಕೆಲಸ ನೆಟ್ಟಗಾಯಿತಷ್ಟೆ?” ಎಂದು ಕೇಳಿದಳು. ಭೀಮರಾಯನು “ಶಾಭಾಸು! ದಶರಥಮಹಾರಾಯನು ಬಲಿಶಂಬರನೊಡನೆ ಯುದ್ಧಮಾಡುತ್ತಿರುವಾಗ, ರಥದ ಚಕ್ರದ ಕೀಲು ತಪ್ಪಿ, ರಥ ನಡೆಯದೆ ಆಪತ್ತೊದಗಿದಾಗ, ಹೆಂಡತಿಯಾದ ಕೈಕಾದೇವಿಯು ತನ್ನ ಕೈಬೆರಳನ್ನು ಕೀಲಾಗುಪಯೋಗಿಸಿ ರಥವನ್ನು ನಡೆಸಲು, ಹೇಗೆ ಸಂಬರವನ್ನು ಗೆಲಿದನೋ, ಹಾಗೆಯೇ ಈ ಹೊತ್ತು ನನ್ನನ್ನು ಪ್ರಳಯತುಲ್ಯವಾದ ಗಂಡಾಂತರದಿಂದ ನೀನು ತಪ್ಪಿಸಿದೆ! ಆಹ! ನಿನ್ನ ಕೈಹಿಡಿದುದರಿಂದ ನನ್ನ ಜನ್ಮವು ಸಾರ್ಥಕವಾಯಿತು! ಈ ಉಪಕಾರ ವನ್ನೆಂದಿಗಾದರೂ ಮರೆಯುವುದುಂಟೇ!” ಎಂದನು.



ಭೀಮರಾಯನಲ್ಲಿ ಸ್ವತಃ ಕಂಡು ತಿಳಿದ ಸಂಗತಿಯಿಂದಲೂ ತನಗೂ ಜವಾನರಿಗೂ ಲಂಚಕೊಟ್ಟ ಸಂಗತಿಯಿಂದಲೂ ಊರಿನಲ್ಲಿದ್ದ ವರ್ತಮಾನಗಳಿಂದಲೂ ಭೀಮರಾಯನೇ ಸುಂದರರಾಯನನ್ನು ವಿಷಹಾಕಿ ಕೊಂದಿರಬೇಕೆಂದು ಮನಸ್ಸಿಗೆ ಖಚಿತವಾದುದರಿಂದ ಮುಂದೆ ನಡೆಯಿಸಬೇಕಾದ ಕಾರ್ಯಗಳನ್ನೆಲ್ಲ ಆ ರಾತ್ರಿಯೇ ಚೆನ್ನಾಗಿ ಆಲೋಚಿಸಿಟ್ಟು ಮರುದಿನ ಬೆಳಗಾಗುತ್ತಲೆ ಫೌಜುದಾರನು ತನ್ನ ಆಫೀಸಿಗೆ ಬಂದು ಜಮೇದಾರ ನಿಕ್ಲಾಂವ್ ಫೆರ್ನಾಂದನನ್ನು ಕರೆದು,–

"ನಿನ್ನೆಯ ವರ್ತಮಾನವೇನು?"

"ಸ್ವಾಮಿ, ಭೀಮರಾಯನೇ ವಿಷಹಾಕಿ ಕೊಂದನೆಂದು ಊರಲ್ಲೆಲ್ಲ ಜನಜನಿತ ಪ್ರಸ್ತಾಪವಿದೆ. ಸುಂದರರಾಯನ ಮರಣಾನಂತರ ಭೀಮರಾಯನು ಹುಚ್ಚನಂತೆ ಯದ್ವಾತದ್ವಾ ಮಾತನಾಡುತ್ತಾನೆಂದು ತಿಳಿದು ಬಂದಿದೆ. ಅವನ ಮನೆಯಲ್ಲೊಂದು ಶೋಧನೆಮಾಡುವುದು ಅವಶ್ಯವೆಂದು ಕಾಣುತ್ತೆ. ಅಪ್ಪಣೆಯಾದರೆ, ಈಗಲೇ ಹೋಗಿ ಮಾಡಿ ಬರುತ್ತೇನೆ."

"ವಿಹಿತವೇ,– ಜಾಗ್ರತೆಯಿಂದ ಶೋಧನೆ ಮಾಡಿ, ವಿಷಪದಾರ್ಥಗಳೇನಾದರೂ ಸಿಕ್ಕಿದರೆ ಹಿಡಿದು ತರಬೇಕು. ಸಂಗಡ ಒಳ್ಳೇ ಹಿತವಾರಿಯ ಜನರನ್ನು ಕರೆದುಕೊಂಡು ಹೋಗಿರಿ."

"ಅಂತೋನ ಸೋಜ, ಬೊಗ್ಗು, ಜಾರಪ್ಪ, ಇವರನ್ನು ಕರೆದುಕೊಂಡು ಹೋಗಲೇ?"

"ಬೇಕಾದವರನ್ನು ಕರೆದುಕೊಂಡು ಹೋಗಿರಿ. ಏವಂಚ ಶೋಧನೆಯನ್ನು ಜಾಗ್ರತೆಯಿಂದ ಕ್ರಮಪ್ರಕಾರ ಲೋಪವಿಲ್ಲದ ಮರ್ಯಾದಸ್ತರಾದ ಗೃಹಸ್ಥರನ್ನು ಮುಂದಿಟ್ಟುಕೊಂಡು ಮಾಡಬೇಕು."

"ಹಾಗೆಯೇ ನಡೆದುಕೊಳ್ಳುತ್ತೇನೆ ಸ್ವಾಮಿ."

"ನೀವು ಶೋಧನೆಮಾಡಿ ತಿರಿಗಿ ಬರುತ್ತಾ ಭೀಮರಾಯನ ಊಳಿಗದ ಸೋಮಯ್ಯ, ತುಮಕೂರ ದೇವಕಿ–ಇವರನ್ನಿಲ್ಲಿಗೆ ಕರೆದು ತರಬೇಕು."

"ಒಳ್ಳೇದು, ಸ್ವಾಮಿ" ಎಂದು ಹೇಳಿ ಜಮೇದಾರನು ಆ ಮೂರು ಮಂದಿ ಜವಾನರನ್ನು ಸಂಗಡ ಕರೆದುಕೊಂಡು ಹೋದನು. ಹೋಗುತ್ತಾ ದೇವಕಿಯನ್ನು ಕರೆದುತರುವುದಕ್ಕೆ ಬೊಗ್ಗುವನ್ನೂ, ಸೋಮಯ್ಯನನ್ನು ತರುವುದಕ್ಕೆ ಜಾರಪ್ಪನನ್ನೂ ನೇಮಕಮಾಡಿ ಮುಂದರಿಸಿ ಕಳುಹಿಸಿದನು. ಆ ಬಳಿಕ ಮುಂದರಿಸಿ ಹೋಗುತ್ತಾ ಅಂತೋನ್ ಸೋಜನು,–

| | |
|---|---|
| "ಜಮ್‌ದಾರ್ ಮಾಮಾ, ಮೊಜೆ ಉಡ್‌ಗಾಸ್ ಆಹಜೆ." | "ಜಮೇದಾರರೇ, ನನ್ನ ನೆನಪಿರಬೇಕು." |
| "ಕಿತ್ತೆಂ ಮ್ಹಂಟಾಗಾ?" | "ನೀನೇನು ಹೇಳುತ್ತಿ ಅಯ್ಯಾ?" |
| "ತೆ ದೊಗಾಂಕ ಪೋಟ ಬರ್ನ್ ಮೆಳಾಂ. | "ಅವರಿಬ್ಬರಿಗೆ ಹೊಟ್ಟೆ ತುಂಬಾ ಸಿಕ್ಕಿದೆ. |

| | |
|---|---|
| ತೂಯೆಂ ಮೊನ್ ಕೆಲಾರ್, ಬೊರೆ ಕಾಮ ಜಾತ್ತೆಲೆಂ." | ನೀವು ಮನಸ್ಸು ಮಾಡಿದರೆ ಒಳ್ಳೇ ಕೆಲಸವಾಗುವುದು." |
| "ಜ್ಯಾತಗಾ." | "ಆದೀತಯ್ಯಾ." |

ಎಂದು ಹೀಗೆಲ್ಲ ತಮ್ಮ ತಮ್ಮೊಳಗೆ ಮಾತನಾಡುತ್ತಾ ಭೀಮರಾಯನ ಮನೆಗೆ ಬಂದು ಮುಟ್ಟಿದರು.

ಭೀಮರಾಯನು: "ಸಲಾಮ್, ಪ್ರಭುಗಳೇ, ಏನು ಬಂದಿರಿ?"

"ನಿಮ್ಮ ಮನೆಯಲ್ಲಿ ಶೋಧನೆಮಾಡಬೇಕೆಂದು ಫೌಜುದಾರರ ಅಪ್ಪಣೆಯಾಗಿದೆ. ಅದಕ್ಕೋಸ್ಕರ ಬಂದೆನು."

"ಶೋಧನೆಮಾಡದೆ ನಿರ್ವಾಹವಿಲ್ಲವೇ? ಇತ್ತ ಬನ್ನಿರಿ" ಎಂದು ಜಮೇದಾರನ ಕೈಹಿಡಿದುಕೊಂಡು ಮಾಳಿಗೆಗೆ ಹೋಗಿ, ಕುರ್ಚಿಯಲ್ಲಿ ಕುಳ್ಳಿರಿಸಿ, ಕೆಳಗೆ ಹೋಗಿ, ಏಳು ಪವನುಗಳನ್ನು ತೆಗೆದುಕೊಂಡು ಬರುತ್ತಾ, ಅಂತೋನ ಸೋಜನನ್ನು ಸಹ ಮೇಲಕ್ಕೆ ಕರೆದು ತಂದು, ಜಮೇದಾರನ ಕೈಯಲ್ಲೈದು, ಜವಾನನ ಕೈಯಲ್ಲೆರಡು ನಾಣ್ಯಗಳನ್ನಿಟ್ಟು, "ನೀವೆಲ್ಲರೂ ನನ್ನ ಕಡೆಗಿರಬೇಕು. ಇನ್ನು ಮುಂದೆ ಈ ಮೊಕದ್ದಮೆಯಲ್ಲಿ ಅನೇಕ ಕಾರ್ಯಗಳಾಗಲಿಕ್ಕಿವೆ. ನಿಮ್ಮನ್ನೆಲ್ಲ ನಾನು ಮರೆಯಲಾರೆ. ಹೆಸರಿಗೆ ಮಾತ್ರ ಶೋಧನೆಯಾಯಿತೆಂದು ಮಾಡಿ ಹೋಗಿಬಿಡಿರಿ" ಎಂದನು. ಜಮೇದಾರನು, "ಅದಾಗದು, ಫೌಜುದಾರರು ಕೇಳಿದರೆ, ನಮ್ಮನ್ನು ಗುಂಡಾಂತರ ಮಾಡ್ಯಾರು. ಮನೆಯ ಕೆಲವು ಭಾಗಗಳಲ್ಯಾದರೂ ಶೋಧನೆಯ ಕ್ರಮ ನಡೆಯಬೇಕು; ನಿರ್ವಾಹವಿಲ್ಲ. ದೇವರ ಕೋಣೆ, ಅಡಿಗೆ ಕೋಣೆ, ಇವೆರಡನ್ನು ಬಿಟ್ಟು ಉಳಿದ ದಿಕ್ಕುಗಳಲ್ಲಿ ಶೋಧನೆಮಾಡುವುದರಿಂದ ನಿಮಗೇನೂ ದೋಷವಿಲ್ಲ; ಅಷ್ಟನ್ನೇ ಮಾಡುತ್ತೇನೆ" ಎಂದು ಸಮಜಾಯಿಸಿ, ನೆರೆಕರೆಯಿಂದ ಇಬ್ಬರು ಗೃಹಸ್ಥರನ್ನು ಕರೆಯಿಸಿ ಶೋಧನೆಯ ಕ್ರಮವನ್ನು ನಡೆಯಿಸಿ, ಏನೂ ಸಿಕ್ಕಲಿಲ್ಲವೆಂದು ಹೊರಗೆ ಬಂದು, ಒಂದು 'ನದಾರದು' ಪಟ್ಟಿಯನ್ನು ಬರೆದು, ಅದಕ್ಕೆಲ್ಲರ ಸಹಿಗಳನ್ನು ಮಾಡಿಸಿ, ಸ್ಟೇಶನಿಗೆ ಹೋಗಿ ಫೌಜುದಾರನೊಡನೆ– "ಸ್ವಾಮಿ, ಬಹಳ ಜಾಗ್ರತೆಯಿಂದ ಶೋಧನೆಮಾಡಿ ಬಂದೆನು. ಶೋಧನೆಯಲ್ಲಿ ವಿಷಪದಾರ್ಥವ್ಯಾವುದೂ ಸಿಕ್ಕಲಿಲ್ಲ" ಎಂದು ಹೇಳಿ 'ನದಾರದು' ಪಟ್ಟಿಯನ್ನು ಅವನ ಕೈಯಲ್ಲಿ ಕೊಟ್ಟನು.

ಇಷ್ಟಾಗುವಾಗ ಬೊಗ್ಗು, ಜಾರಪ್ಪಾ ಇವರು ದೇವಕಿ, ಸೋಮಯ್ಯ ಇವರನ್ನು ಕರೆದು ತಂದು, ಫೌಜುದಾರನ ಮುಂದೆ ನಿಲ್ಲಿಸಿದರು. ಫೌಜುದಾರನು ಪ್ರಥಮತಃ ಸೋಮಯ್ಯನನ್ನು ವಿಚಾರಿಸಿದ್ದಲ್ಲಿ ಸುಂದರರಾಯನು ಮರಣಪಟ್ಟ ದಿವಸ ಬೆಳಿಗ್ಗೆ ದೇವಕಿಯು ಭೀಮರಾಯನಲ್ಲಿಗೆ ಬಂದಿದ್ದಳು. ಏಕೆಂದು ಗೊತ್ತಿಲ್ಲ. ಅವಳು ತಿರಿಗಿ ಮನೆಗೆ ಹೋಗುತ್ತಾ ಒಂದು ಮುಡಿ ಅಕ್ಕಿ ಅವಳಲ್ಲಿ ಕೊಂಡುಹೋಗಿಡಬೇಕಾಗಿ ಭೀಮರಾಯನು ಹೇಳಿದ ಪ್ರಕಾರ ತಾನು ಕೊಂಡು ಹೋಗಿಟ್ಟೆನು. ಬೇರೆ ಯಾವ ಸಂಗತಿಯೂ ತನಗೆ ಗೊತ್ತಿಲ್ಲವೆಂದು ವಾಗ್ಮೂಲಕೊಟ್ಟನು.

ಆ ಬಳಿಕ ಫೌಜುದಾರನು ದೇವಕಿಯನ್ನು ಕರೆದು, “ಏನೇ? ಡೊಂಬರಚೆನ್ನಿ! ಬದನೇಕಾಯಿ ಬಜ್ಜಿಗಳಿಂದೆಷ್ಟು ಜನರನ್ನು ಕೊಂದೆ? ಹಜಾರಲಕಡಿ! ಸತ್ಯವಿದ್ದದ್ದನ್ನು ಬೊಗಳುವಿಯೋ? ಮರ್ಯಾದೆ ಬೇಕೊ? ಬಾಯಿ ಬಿಡುವಿಯೋ, ಬಿಡಿಸಬೇಕೋ? ಯಾರೋ ಅಲ್ಲಿ? ಆ ಐದೆಳೆಯ ಛಡಿ ಇತ್ತ ತಾ, ಈ ಆಷಾಡಭೂತಿಯು ಬಾಯಿ ಬಿಡುತ್ತದೋ ಇಲ್ಲವೋ ನೋಡೋಣ” ಎಂದು ಕಣ್ಣು ಕೆಂಪಗೆಮಾಡಿ ಮೀಸೆಗಳನ್ನೆಳೆದುಕೊಂಡು ಮೇಜಿನ ಮೇಲೊಂದು ಢಬ್ಬೆಂದು ಗುದ್ದು ಕೊಟ್ಟುದೇ ಸರಿ; ಅವಳು–“ಇಷ್ಟೆಲ್ಲ ಏಕೆ ಸ್ವಾಮಿ? ಇದ್ದ ಸಂಗತಿಯನ್ನರಿಕೆಮಾಡುತ್ತೇನೆ. ಆ ದಿವಸ ಬೆಳಿಗ್ಗೆ ಭೀಮರಾಯನಲ್ಲಿಯ ತೊತ್ತು ಮೈರೆಯು ಬಂದು, ಕಾಯಿಪಲ್ಯಗಳು ಬೇಕಾದರೆ ಕೊಂಡುಹೋಗಬೇಕಾಗಿ ಅಂಬಾಬಾಯಿಯವರು ಹೇಳಿದ್ದಾರೆಂದು ತಿಳುಹಿಸಿದ ಮೇರೆಗೆ ನಾನು ಹೋದಾಗ ಭೀಮರಾಯನು ಸುಂದರರಾಯನಿಗೆ ವಿಷಹಾಕಬೇಕೆಂದು ನನಗೆ ಒತ್ತಾಯಮಾಡಿದುದರಿಂದ ನಾನು ಬದನೇಕಾಯಿಯ ಬಜ್ಜಿಯಲ್ಲಿ ಪಾಷಾಣವನ್ನು ಕೂಡಿಸಿ ನನ್ನ ಮಗ ಗೋಪಣ್ಣನ ಹತ್ತಿರ ಕೊಟ್ಟು ಭೀಮರಾಯನ ಬಳಿಗೆ ಕಳುಹಿಸಿದೆ. ಅವನವುಗಳನ್ನು ಭೀಮರಾಯನ ಕೈಯಲ್ಲೆ ಕೊಟ್ಟು ಬಂದೆನೆಂದು ತಿರಿಗಿ ಬಂದು ಹೇಳಿದನು. ಆ ಮೇಲಿನ ಸಂಗತಿಗಳನ್ನು ನಾನರಿಯೆನು. ನನ್ನ ಮೆಹನತ್ತಿನ ಪ್ರತಿಫಲವಾಗಿ ಭೀಮರಾಯನು ನನಗೆರಡು ಪವನುಗಳನ್ನು ಕೊಟ್ಟಿದ್ದಾನೆ. ನಾನು ಹಿಂದು ಮುಂದರಿಯದ ಬಡವೆ. ಇದ್ದ ಸಂಗತಿಗಳನ್ನರಿಕೆಮಾಡಿದ್ದೇನೆ. ಇನ್ನು ನನ್ನನ್ನು ಕೊಲ್ಲುವುದೂ, ರಕ್ಷಿಸುವುದೂ ತಮ್ಮ ಕೈಯಲ್ಲಿದೆ. ಅಪ್ಪಣೆ ಕೊಟ್ಟರೆ ಮನೆಗೆ ಹೋಗುತ್ತೇನೆ” ಎಂದು ಹೇಳಿ ಉದ್ದಕ್ಕಡ್ಡ ಬಿದ್ದಳು. “ನಡೆ!” ಎಂದು ಹೇಳೋಣವೇ “ಬದುಕೇ ಜೀವ” ಎಂದು ಹೇಳಿಕೊಳ್ಳುತ್ತಾ ಮನೆಗೆ ನಡೆದಳು. ಹಾಗೆ ಹೋಗುತ್ತಾ ಭೀಮರಾಯನಲ್ಲಿಗೆ ಹೋಗಿ ಸ್ಟೇಶನಿನಲ್ಲಿ ನಡೆದ ವಿದ್ಯಮಾನಗಳೆಲ್ಲವನ್ನೂ ಅಂಬಾಬಾಯಿಯ ಹತ್ತಿರ ಹೇಳಿಹೋದಳು.

ಆ ಮೇಲೆ ಭೀಮರಾಯನನ್ನು ಕರೆಯಿಸಿ ಕೇಳಿದ್ದಲ್ಲಿ, ದೇವಕಿ, ಸೋಮಯ್ಯ ಇವರು ಹೇಳಿದ ಸಂಗತಿಗಳನ್ನೆಲ್ಲವನ್ನೂ ಒಪ್ಪಿಕೊಂಡು, ಸುಂದರರಾಯನು ತನ್ನ ಮನೆತನದ ಮರ್ಯಾದೆಯನ್ನು ನಾಶಮಾಡುವ ಸಾಹಸಕೃತ್ಯದಲ್ಲಿ ಪ್ರವೃತ್ತನಾಗಿದ್ದುದರಿಂದ ಅವನಿರುವ ವರೆಗೆ ಕ್ಷೇಮವಿರಲಾರದೆಂತಲೂ, ಅವನ ಮೇಲೆ ಕಣ್ಣುಬಿದ್ದರೆ, ಹೃದಯಕ್ಕೆ ಶೂಲವನ್ನು ತಿವಿದಂತೆ ವೇದನೆಯುಂಟಾಗುತ್ತಿದ್ದುದರಿಂದಲೂ ಶತ್ರುಸಮಾನನಾದವನನ್ನು ಯಾರಿಗೂ ತಿಳಿಯದಂತೆ ಮರ್ಯಾದೆಯನ್ನು ಮಾತ್ರ ಉಳಿಸಿಕೊಳ್ಳಬೇಕೆಂಬ ಕುತೂಹಲದಿಂದ ವಿಷಪ್ರಯೋಗ ಮಾಡಿ ಸಂಹರಿಸಿದೆನು. ನನಗಿನ್ನು ತಾವೇ ಗತಿಯೆಂದಡ್ಡಬಿದ್ದನು. ಫೌಜುದಾರನು “ಒಳ್ಳೇದು, ಈಗ ಹೋಗಿರಿ; ಎರಡನೇ ಸಾರಿ ಕರೆದಾಗ ಬನ್ನಿರಿ” ಎಂದಪ್ಪಣೆ ಕೊಟ್ಟು ಕಳುಹಿಸಿದನು.

## ೧೨

ಭೀಮರಾಯನು ಮನೆಯ ಕಡೆಗೆ ಹೋಗುತ್ತಿರುವಾಗ ದಾರಿಯಲ್ಲಿ ಅಸಿಸ್ಟಂಟ ಮೆಜಿಸ್ಟ್ರೇಟ್ ಸ್ಕೊಟ್ ದೊರೆಯ ಕೋರ್ಟಿನಲ್ಲಿ ವ್ಯವಹರಿಸುವ ವಕೀಲ ಅತ್ತೂರ ಸೂರಪ್ಪಯ್ಯನು ಕಾಣಸಿಕ್ಕಿ–

"ಓಹೋ, ಸ್ವಾಮೀ, ಎಲ್ಲಿಗೆ ದಯಾಮಾಡಿಸಿದ್ದೀರಿ? 'ಬರೀ ಗುಲ್ಲು ನಿದ್ದೆಗೇಡು' ಎಂಬಂತೆ ತಮ್ಮ ಮೇಲೆ ಪೋಲೀಸಿನವರು ಒಂದು ಪುಕಾರು ಹುಟ್ಟಿಸಿ ಹಣ ಸುಲಿಯುವ ತಜವೀಜು ಮಾಡಿದ್ದಾರೇನೋ. ಆಗೋದು ಹೋಗೋದು ಒಂದು ಇಲ್ಲ."

"ಬರೀ ಪುಕಾರಲ್ಲ, ಸ್ವಾಮಿ. ಈ ಹೊತ್ತು ನಮ್ಮ ಮನೆಯಲ್ಲಿ ಶೋಧನೆಮಾಡಿದರು. ಸುಂದರರಾಯನ ಅನ್ನಕೋಶವನ್ನು ಮದ್ರಾಸಿಗೆ ವಿಷಪರೀಕ್ಷೆಗೋಸ್ಕರ ಕಳುಹಿಸಿಕೊಟ್ಟಿದ್ದಾರೆ. ಅಲ್ಲಿಂದೇನು ಬರುವುದೋ ನೋಡಬೇಕು."

"ಬರುವಂಥಾದ್ದೇನು? ಒಂದು ವೇಳೆ ಅದರಲ್ಲಿ ವಿಷವಿದೆ ಎಂದು ಬರೆದು ಬಂದ ಪಕ್ಷದಲ್ಲೂ, ಅದನ್ನು ತಾವೇ ಹಾಕಿದ್ದೆಂಬುದಕ್ಕೆ ಸಮಾಧಾನಕರವಾದ ರುಜುವಾತು ಬೇಡವೇ?"

"ರುಜುವಾತೇನು ಸ್ವಾಮಿ?" (ನಾಲ್ಕು ಕಡೆಗೂ ನೋಡಿ ಯಾರೂ ಇಲ್ಲದುದರಿಂದ) "ನಾನೇ ವಿಷಹಾಕಿದ್ದೆಂದು ಫೌಜುದಾರನ ಹತ್ತಿರ ಎಲ್ಲಾ ಸಂಗತಿಗಳನ್ನು ಒಪ್ಪಿದ್ದೇನೆ."

"ಅಯ್ಯೋ! ಕೊರಳಿಗೆ ಕತ್ತಿಯಾಯಿತಷ್ಟೆ!" (ಕಂಕುಳಲ್ಲಿ ಹಿಡಿದುಕೊಂಡಿದ್ದ, ಬೈಂಡು ಮಾಡಿದ ಗಜೇಟುಗಳ ಪುಸ್ತಕವನ್ನು ತೆಗೆದು ಕೆಲವು ಹಾಳೆಗಳನ್ನು ತಿರುಗಿಸಿ ಓದಿದ ಹಾಗೆ ನಟಿಸಿ, ಪುನಃ ಮುಚ್ಚಿ ಕಂಕುಳಲ್ಲಿಟ್ಟುಕೊಂಡು, ಎರಡು ನಿಮಿಷ ವರೆಗೆ ಕೋಸುಗಣ್ಣುಮಾಡಿ ಆಲೋಚಿಸಿದವನಂತೆ ಕಾಣಿಸಿಕೊಂಡು) "ದೊಡ್ಡದಲ್ಲ, ಪೋಲೀಸಿನವರ ಮುಂದೆ ಮಾಡಿದ ಒಪ್ಪಿಗೆ ಕಾಸಿನ ಕೆಲಸಕ್ಕೂ ಬಾರದು. ಆದರೆ ಬರೀ ಒಪ್ಪಿಗೆಯಲ್ಲದೆ ಬೇರೆ ಗುಟ್ಟುಗಳನ್ನೇನಾದರೂ ಬಹಿರಂಗಪಡಿಸಿದ್ದೀರಾ?"

"ಬಜ್ಜೆಗಳನ್ನು ದೇವಕಿ ಮಾಡಿಕೊಟ್ಟದ್ದೆಂದು ನಾನೂ, ಅವುಗಳಲ್ಲಿ ಪಾಷಾಣವನ್ನು ಬೆರಸಿದ್ದಾಗಿ ಅವಳೂ ಸಹಾ ಹೇಳಿದ್ದೇವೆ.".

"ಓಹೋ!" ಎಂದು ಇನ್ನೊಂದು ನಿಮಿಷ ಆಲೋಚಿಸಿದ ಹಾಗೆಮಾಡಿ ಗಜೇಟಿನ ಪುಸ್ತಕವನ್ನು ಕಂಕುಳಿಂದ ತೆಗೆದು ಫಕ್ಕನೆ ತೆರೆದು, ಕೈಯ ಬೆರಳನ್ನು ಅದರಲ್ಲಿ ಸೇರಿಸಿ ಬಲ ತೊಡೆಯ ಬಳಿ ಹಿಡಿದುಕೊಂಡು "ಚಿಂತಿಲ್ಲ, ಶೋಧನೆಯಲ್ಲಿ ತಮ್ಮ ಮನೆಯೊಳಗೇನು ಸಿಕ್ಕಿತು?"

"ಯಾವ ವಿಷಪದಾರ್ಥವೂ ಸಿಕ್ಕಲಿಲ್ಲ."

"ಚೆನ್ನಾಯಿತು, ತಾವು ಒಪ್ಪಿಗೆ ಕೊಟ್ಟದ್ದು ಮಾತ್ರ ಸ್ವಲ್ಪ ಅಚಾತುರ್ಯವಾಯಿತು. ಆದರೆ–"

"ಫೌಜುದಾರರೂ ಪೋಲೀಸಿನವರೂ, ಏನೂ ಹೆದರುವುದವಶ್ಯವಿಲ್ಲೆಂದೂ ತಲೆಯ ಹೂವು ಬಾಡಿಸಲಿಕ್ಕಿಲ್ಲವೆಂದೂ ಚೆನ್ನಾಗಿ ಧೈರ್ಯಕೊಟ್ಟಿದ್ದಾರೆ, ಸ್ವಾಮಿ."

"ಅಯ್ಯೋ, ಪರಮಚಂಡಾಲರು! ಪಂಚಮಹಾಪಾತಕಿಗಳು! ಹೆತ್ತ ತಾಯಿಯನ್ನರಿಯದವರು! ಅವರ ಮಾತುಗಳೆ?"

"ಸುಮ್ಮಗೇ ನಿಷ್ಕಾರಣವಾಗಲ್ಲ, ಸ್ವಾಮಿ, ಚೆನ್ನಾಗಿ ಕೈ ತಣ್ಣಗೆ ಮಾಡಿದ್ದೇನೆ."

"ಅಯ್ಯೋ! ಸ್ವಾಮಿ, ಕ್ಷಣಮಾತ್ರಕ್ಕೆ ನಂಬಬೇಡಿರಿ. ಆ ಫೌಜುದಾರನ ಗೊತ್ತು ತಮಗೆಲ್ಲಿನದು? ಕೊಟ್ಟ ಲಂಚವನ್ನು ತೆಗೆದುಕೊಂಡು ನಂಬಿಕೆ ಹುಟ್ಟಿಸಿ ಗುಟ್ಟೆಲ್ಲ ತಿಳಿದ ಮೇಲೆ ಏನಾದರೂ ಒಂದುಪಾಯಮಾಡಿ ಹಿಂದಕ್ಕೆ ಕೊಟ್ಟು ಆಮೇಲೆ ಯಾರೋ ಹೇಳಿದ ಗಾದೆಯಂತೆ, ನಾವೆಲ್ಲರೂ ಪ್ರತಿದಿನವೂ ನೋಡಿ ತಿಳಿದವರಲ್ಲವೇ?"

"ಸ್ವಾಮಿ, ನಾವು ಇಲ್ಲಿ ನಿಂತು ಮಾತನಾಡುವುದು ಸರಿಯಲ್ಲ. ಒಂದು ಗಳಿಗೆಯ ಮಾತಿಗೆ ದಯಮಾಡಿ ಮನೆಗೆ ಬರುತ್ತೀರಾ?"

"ಅಯ್ಯೋ, ಆ ಲಕ್ಷ್ಮಿ ಎಂಬವಳ ದೊಡ್ಡದೊಂದು ಮೊಕದ್ದಮೆಯು ಸ್ಕೊಟ್ ಸಾಹೇಬರ ಕೋರ್ಟಿನಲ್ಲಿ ನಡೆಯುತ್ತಿದೆ. ನನಗೆ ಸಮಯವಿಲ್ಲವಷ್ಟೆ. ಹಾಗಲ್ಲವಾದರೆ, ಈ ಪೋಲೀಸಿನವರ ತಕ್ಕಡಿ ಬಿಕ್ಕಡಿ ಕುಯುಕ್ತಿಗಳನ್ನೆಲ್ಲ ಕ್ಷಣಮಾತ್ರದಲ್ಲಿ ತಮಗೆ ಚಿಕ್ಕಾಸು ಖರ್ಚಿಲ್ಲದೆ ನಿಲ್ಲಿಸಿಬಿಡುತ್ತಿದ್ದೆ. ಏನುಮಾಡಲಿ!"

"ಸ್ವಾಮಿ, ಒಂದು ಗಳಿಗೆಯ ಮಾತಿಗೆ ಬರಲೇಬೇಕು. ತಮ್ಮನ್ನು ಸಂತೋಷಪಡಿಸಿ ಕಳುಹಿಸುವೆನು."

"ಕತ್ತಲೆಯಾಗುತ್ತಾ ಬಂತು. ಮನೆಗೆ ಹೋಗುವುದಕ್ಕೆ ಸ್ವಲ್ಪ ಉದ್ದ ದಾರಿಯೂ ಇದೆ."

"ಅದೇನು ದೊಡ್ಡ ಮಾತು? ನರಸಿಂಹ ಶಾಸ್ತ್ರಿಗಳ ನೆಲ್ಲೂರು ಎತ್ತುಗಳ ಸಾರೋಟಿದೆ. ಅದಕ್ಕೆ ವಿದ್ಯುಲ್ಲತೆಯ ಹಾಗಿನ ಬೆಳಕುಗಳಿವೆ, ಅದರಲ್ಲಿ ಹೋಗಬಹುದಷ್ಟೆ?"

"ಹಾಗಾಗಲಿ" ಎಂದು ಇಬ್ಬರೂ ಭೀಮರಾಯನಲ್ಲಿಗೆ ನಡೆದರು. ಮನೆಗೆ ಮುಟ್ಟಿ ತೊಗರಿಯ ತಾಳದ, ಕಾಫಿ ಸಹ ಫಲಾಹಾರ ಮಾಡಿದ ಮೇಲೆ ಸೂರಪ್ಪಯ್ಯನು,–

"ರಸಾಯನ ಪರೀಕ್ಷಕನ ಸರ್ಟಿಫಿಕೇಟು ಬಂದು ಮುಟ್ಟಿದ ಕೂಡಲೇ ಪೋಲೀಸಿನವರು ತಮ್ಮನ್ನು ಹಿಡಿದುಕೊಂಡು ಹೋಗುವರು. ಆಗ ತಾವು ಈ ಮೊದಲು ಹೇಳಿದ ಎಲ್ಲಾ ಸಂಗತಿಗಳನ್ನು ನಿರಾಕರಿಸಬೇಕು."

"ಒಮ್ಮೆ ಒಂದು ಸಂಗತಿಯನ್ನು ಹೇಳಿ ಇನ್ನೊಮ್ಮೆ ಮತ್ತೊಂದು ಸಂಗತಿಯನ್ನು ಹೇಳಿದರೇನಾದರೂ ಬಾಧಕ ಬಾರದೆ?"

"ತಾವು ನನಗೆ ಹೇಳಿ ಕೊಡುತ್ತೀರಾ? ಮದ್ರಾಸು, ಕಲ್ಕತ್ತಾ, ಬೊಂಬಯಿ, ಅಲ್ಲಹಾಬಾದ ಹೈಕೋರ್ಟುಗಳ ಸ್ಪಷ್ಟವಾದ ಫೈಸಲುಗಳಿವೆ. ಅವುಗಳನ್ನಲ್ಲವೇ ನಾನೀಗ ಮಾರ್ಗದಲ್ಲಿ ನಿಂತಾಗ ಪುಸ್ತಕ ತೆರೆದು ನೋಡಿದ್ದು?"

"ದೇವಕಿಯು ಎಲ್ಲವನ್ನು ಬೊಗಳಿಬಿಟ್ಟಿದ್ದಾಳಷ್ಟೆ. ಅದಕ್ಕೇನು ಗತಿ?"

"ಬಿಡಿ! ಬಿಡಿ! ಬಿಡಿ! ಬಿಡಿ! ಅದೆಲ್ಲಾ ಒಂದು ತೃಣ! ಹೇಳುತ್ತೇನೆ ಕೇಳಿರಿ."

ಅಂಬಾಬಾಯಿಯು ಕೇಳುವ ಹಾಗೆ ಗಟ್ಟಿಯಾಗಿ ಆಡಿದ ಈ ಪರಾಕ್ರಮದ ಮಾತುಗಳು ಅವಳ ಕಿವಿಗೆ ಬೀಳುತ್ತಲೇ ಅವಳು ಬಂದು, ಗಂಡನೊಡನೆ,

"ದೇವಕಿಯಿಂದ ನಾವು ಉಪಕಾರ ಪಡೆದವರು. ಅವಳು ನಮ್ಮನ್ನು ಹೊಂದಿರುವವಳು. ಮುಂದೂ ಅವಳಿಂದ ಬೇರೇನೂ ಉಪಕಾರವಾಗದೆಂದು ಹೇಳಕೂಡದು. ಶರಣಾರ್ಥಿಗಳಿಗೆ ನಾವು ಬಿಟ್ಟು ಹಾಕಬಾರದು. ಅವಳ ವಿಷಯದಲ್ಲಿ ನಾವೀಗಲೇ ಆಲೋಚಿಸಬೇಕು" ಎನಲು, ಸೂರಪ್ಪಯ್ಯನು, "ವಾಸ್ತವವೇ, ಪರಂತು ಎಲ್ಲರೂ ಮೊದಲಿನ ಹೇಳಿಕೆಗಳನ್ನು ನಿರಾಕರಿಸಿದರೆ, ಪೋಲೀಸಿನವರು ಬೇರೇನಾದರೂ ಕುಯುಕ್ತಿಗಳನ್ನು ನಡೆಯಿಸುವರು. ಅವರಿಗೆ ಮೊಕದ್ದಮೆ ಹೇಗಾದರೂ ತಲಾಸಾಗಬೇಕು. ಅದಕ್ಕೊಂದು ದಾರಿಯನ್ನು ನಾನು ತೋರಿಸಿಕೊಡುತ್ತೇನೆ. ತಾವೂ ದೇವಕಿಯೂ ಪ್ರವೇಶವಿಲ್ಲದೆ, ಗೋಪಣ್ಣನು ನಡೆದ ಕೆಲಸವನ್ನೆಲ್ಲ ತಾನೇ ಮಾಡಿದ್ದೆಂದು ಪೋಲೀಸಿನವರ ಮುಂದೆಯೂ ಮೆಜಿಸ್ಟ್ರೇಟರ ಮುಂದೆಯೂ ಹೇಳಲಿ. ಆ ಮೇಲೆ ಸೆಶ್ಯನ್ ಕೋರ್ಟಿನಲ್ಲಿ ಎಲ್ಲಾ 'ಲೇದು' ಹಾಕಿ, ತಾನೂ ಯಾವ ಸಂಗತಿಯನ್ನಾದರೂ ಒಪ್ಪಿಕೊಂಡದ್ದಿಲ್ಲವೆಂದು ಸಾಧಿಸಲಿ. ಪೋಲೀಸಿನವರ ಬನಾವಣೆ ಎಲ್ಲಾ ನೀರಿನಲ್ಲಿ ಮಾಡಿದ ಹೋಮದಂತಾಗುವುದು. ಆ ಮೇಲೆ ಸೋಮಯ್ಯನು ಅಕ್ಕಿ ಹೊತ್ತುಕೊಂಡು ಹೋದ ಒಂದು ಸಂಗತಿಯುಳಿಯುವದು. ಆದರೆ ಅದೇತರ ಕೆಲಸಕ್ಕೂ ಬಾರದು. ಏಕೆಂದರೆ, ಸೋಮಯ್ಯನು ದೇವಕಿಯಲ್ಲಿಗೆ ಅಕ್ಕಿಯ ಮೂಟೆಯನ್ನು ಹೊತ್ತರೆ, ಸುಂದರರಾಯನು ಸಾಯುವನೆಂದು ಕಾರಣ ಕಾರ್ಯಜ್ಞಾನವಿರುವವರ್‍ಯಾರೂ ವಾದಿಸಲಾರರು. ಸರಿಯೋ ನೋಡಿರಿ" ಎಂದನು. ಆಗ ಭೀಮರಾಯನು "ಸರಿ ಸ್ವಾಮಿ, ರಾಯರ ಬೀಜವಾದ ಮೇಲೆ ಕುಲ ಕೇಳುವುದಕ್ಕಿದೆಯೇ? ತಮ್ಮಂತಹ ಮಹಾನುಭಾವರು ಆಲೋಚನೆ ಹೇಳಿದ ಮೇಲೆ ಭಯವೇನು?" ಎಂದು ಮಂಚಕ್ಕೆ ತೂಗಹಾಕಿದ ತಾಂಬೂಲ ಕೋಶದಿಂದ ಐದು ಪವನುಗಳನ್ನು ತೆಗೆದು, "ವಕೀಲರೇ, ಮುಂದೂ ಆಗಾಗ್ಗೆ ಅಗತ್ಯವಿರುವ ಎಲ್ಲಾ ಉಪಾಯಗಳನ್ನು ಹೇಳಿಕೊಡುತ್ತಾ ಇರಬೇಕು. ತಮ್ಮನ್ನು ಸಂತೋಷಪಡಿಸುವೆನು. ತತ್ಕಾಲಕ್ಕೆ ಇಕ್ಕೊಳ್ಳಿ" ಎಂದವನ ಕೈಯಲ್ಲಿಟ್ಟು, ಸೋಮಯ್ಯನನ್ನು ಕರೆದು, ಸಾರೋಟು ತಯಾರು ಮಾಡಿಸಿ, ಬೀದಿಯ ಬಾಗಿಲು ವರೆಗೆ ಸಂಗಡಲೇ ಬಂದು, ನಮಸ್ಕರಿಸಿ, ಮನೆಗೆ ಕಳುಹಿಸಿಕೊಟ್ಟನು. ಸೂರಪ್ಪಯ್ಯನು ಸದ್ಯ ಕೆಲವು ದಿವಸಗಳಿಗೆ ಬಗೆಯಾಯಿತೆಂದು ಮನಸ್ಸಿನಲ್ಲಂದುಕೊಂಡು ಸಂತೋಷಪಟ್ಟು, ಮನೆಗೆ ಹೋದ ಮೇಲೆ, 'ನೋರ್ಟನ್ಸ್ ಲೋ ಆಫ್ ಎವಿಡೆನ್ಸ್' ಎಂದು ಹೆಸರು ಹಾಕಿದ 'ಯಾತ್ರಿಕನ ಸಂಚಾರ' ಎಂಬ ಹಳೇ ಪುಸ್ತಕಕ್ಕೊಂದು 'ಮೈನ್ಸ್ ಕಮೆಂಟರಿಸ್' ಎಂದು ಹೆಸರು ಹಾಕಿದ ಹಳೇ ಗಜೇಟಿನ ಕಟ್ಟಿಗೊಂದು ಇವೆರಡಕ್ಕೂ ಏಸುದಾಸನಲ್ಲಿಗೆ ಕೊಂಡುಹೋಗಿ ಬೈಂಡು ಕಟ್ಟಿಸಿ ತರಬೇಕಾಗಿ ಗುಮಾಸ್ತನಿಗಪ್ಪಣೆ ಮಾಡಿದನು.

ಇತ್ತಲಾಗಿ ಭೀಮರಾಯನು ಅದೇ ರಾತ್ರಿ ದೇವಕಿ, ಗೋಪಣ್ಣ ಇವರನ್ನು ಕರೆಯಿಸಿ, ಅಂಬಾಬಾಯಿಯು ಮುಂದಿದ್ದು, ಅವಶ್ಯವಿರುವ ಉಪದೇಶವನ್ನು ಕೊಟ್ಟು, ಗೋಪಣ್ಣನ ಕೈಯಲ್ಲಿ ಎರಡು ಪವನುಗಳನ್ನಿಟ್ಟು ಸಂತೈಸಿ, ಮನೆಗೆ ಕಳುಹಿಸಿದನು.

## ೧೩

ಎಂಟು ಹತ್ತು ದಿವಸಗಳು ಕಳೆದವು. ಮದ್ರಾಸಿನಿಂದ ಕೆಮಿಕಲ್ ಎಗ್ಝಾಮಿನರವರ ಅಭಿಪ್ರಾಯಪತ್ರವು ಬಂದು ಮುಟ್ಟಿತು. ಅನ್ನಕೋಶವನ್ನು ಪರಿಶೋಧಿಸಿ ನೋಡಲಾಗಿ, ಅದರಲ್ಲಿ ಪಾಷಾಣವು ಸಿಕ್ಕಿರುವುದಾಗಿ ಬರೆದಿರುವುದನ್ನು ಓದಿನೋಡುತ್ತಲೇ ಫೌಜುದಾರನು ಜಮೇದಾರರನ್ನು ಕರೆದು,

"ಭೀಮರಾಯ, ದೇವಕಿ ಇವರನ್ನು ಕೂಡಲೆ ಬಂದಿಯಾಗಿ ಹಿಡಿದು ತರಬೇಕು" ಎಂದಪ್ಪಣೆ ಕೊಡೋಣವೇ, ಅವನು ಬೇಕಾದ ಜವಾನರ ಸಮೇತ ಹೋಗಿ ಅವರನ್ನು ಹಿಡಿದುಕೊಂಡು ಬರುವಾಗ ದಾರಿಯಲ್ಲಿ, "ರಾಯರೇ, ನೀವೇನೂ ಹೆದರಬೇಡಿರಿ" ಎಂದು ಭೀಮರಾಯನ ಹತ್ತಿರ ಹೇಳಿದನು. ಅದಕ್ಕವನು, "ನನಗೇತರ ಹೆದರಿಕೆ? ಉಪ್ಪು ತಿಂದವ ನೀರು ಕುಡಿಯುವನು. ಇದೆಲ್ಲ ಗೋಪಣ್ಣನಲ್ಲವೇ ಮಾಡಿದ್ದು? ದೇವಕಿಯೂ ನಾನೂ ಯಾವ ಸಂಗತಿಯನ್ನಾದರೂ ಅರಿಯೆವು. ಇನ್ನು ದೇವರು ಯೋಚಿಸಿದ ಹಾಗಾಗುವುದು" ಎಂದು ಉತ್ತರ ಕೊಡಲು, ಜಮೇದಾರನು, ದೇವಕಿ ಏನು ಹೇಳುತ್ತಾಳೋ ನೋಡೋಣವೆಂದು, "ದೇವಕೀ, ಏನು? ಮಗನನ್ನು ಬಲಿಕೊಡುವುದಕ್ಕೆ ನೋಡುತ್ತೀಯಾ?" ಎಂದು ಕೇಳಿದನು. ಅವಳು: "ನಾನು ಬಲಿ ಕೊಡುವುದೇನು? ನೀವು ಅವನನ್ನೇ ವಿಚಾರಿಸಿ ನೋಡಿರಿ. ವಿದ್ಯಮಾನವೆಲ್ಲ ಗೊತ್ತಾಗುವುದು. ನಾನು ಆ ದಿವಸ ಫೌಜುದಾರನಿಗೆ ಹೆದರಿ ಏನೇನೆಲ್ಲ ಹೇಳಿಬಿಟ್ಟೆನು. ಇನ್ನು ದೇವರ ಚಿತ್ತ, ನನ್ನ ಪುಣ್ಯ"ವೆಂದಳು. ಜಮೇದಾರನು ಮೂಗಿನಲ್ಲಿ ಬೆರಳಿಟ್ಟು, ತನ್ನಲ್ಲಿ ತಾನೇ– 'ಇದೇನಪ್ಪಾ! 'ಬರುತ್ತಾ ಬರುತ್ತಾ ರಾಯರ ಕುದುರೆ ಕತ್ತೆಯಾಯಿತು' ಎಂಬ ಗಾದೆಯ ಹಾಗೆ ಮೊಕದ್ದಮೆಯು ದಿನಹೋಗುತ್ತಾ ಹೋಗುತ್ತಾ ಈ ಗತಿಗೆ ಬಂತೇ?' ಎಂದಾಲೋಚಿಸುತ್ತಾ, ಸಂಗಡವಿದ್ದ ಅಂತೋನ ಸೋಜನೊಡನೆ ಮೆಲ್ಲನೆ,

| | |
|---|---|
| "ಕಿತ್ತೆಂಗಾ? ಆವ್ಯೆಕ ಕಾಜಾರ ಜಾಲೆಂಮು, ಒ ಬೊಡ್ಕಿಚೊ ಪೂತ್ ಆನಿ ಈ ಬೊಡ್ಕಿಚಿ ದೂವ್ ಜಬ್ಬರಾಹಾತ್. ಆತಾಂ ಕಾಯಿಂ ಏಕ್ ಗೊಂತುನಾ ಮ್ಹಾಂಟಾತ್." | "ಏನಯ್ಯಾ? ತಾಯಿಗೆ ಮದುವೆಯಾಯಿತಷ್ಟೆ. ಈ ಬೋಳಿಯಮಗ ಮತ್ತು ಈ ಬೋಳಿಯಮಗಳು ಹುಷಾರ್ ಇದ್ದಾರೆ. ಈಗ ಏನೊಂದೂ ಗೊತ್ತಿಲ್ಲವೆಂದು ಹೇಳುತ್ತಾರೆ." |
| "ತುಕಾ ಕಿತ್ತೆಂ, ಮಾಕಾ ಕಿತ್ತೆಂ? ಆಮ್‌ಚೆಂ ಕಾಮ್ ಜಾಂವ್‌ಕ ನಾಕ್ಕಾ?" | "ನಿಮಗೇನು? ನನಗೇನು? ನಮ್ಮ ನಮ್ಮ ಕೆಲಸವಾಗಲಿಲ್ಲವೇ?" |
| "ಕಹಲಿ ಗಜಾಲ್ ಉಲ್ಯೆತಾಗಾ? ನಂಬ್ರಾಚೊ ಬೊಂಗ್ ಜಾತಾ ಮುಗಾ?" | "ನೀನೆಂತಹ ಮಾತನ್ನಾಡುತ್ತೀಯಾ? ಮೊಕದ್ದಮೆಯು ಕೆಟ್ಟುಹೋಗುತ್ತಿದೆಯಷ್ಟೆ." |

“ತೆಂ ಸಕುಚ್ ಆಮ್ಕಾಂ ಕಿತ್ಯಾ? ಪವೂಜ್‌ದಾರಾಹ, ತುಂ ಉಗೊಚ್ಚ್ ರಾವ್.”

“ಅದೆಲ್ಲ ನಮಗೇಕೆ? ಫೌಜುದಾರರಿದ್ದಾರೆ, ನೀವು ಸುಮ್ಮಗಿರ್ರಿ.”

ಎಂದು ತಮ್ಮೊಳಗೆ ಮಾತನಾಡುತ್ತಾ, ಭೀಮರಾಯ, ದೇವಕಿ, ಇವರನ್ನು ತಂದು ಫೌಜುದಾರನ ಮುಂದೆ ನಿಲ್ಲಿಸಲು, ಅವರು ಭೀಮರಾಯನನ್ನು ಕುರಿತು–

“ಏನಿರೈಯಾ, ಅನ್ನಕೋಶದಲ್ಲಿ ಪಾಷಾಣವಿದೆಯೆಂದು ಕೆಮಿಕಲ್ ಎಗ್ಜಾಮಿನರವರ ಸಾಕ್ಷ್ಯಪತ್ರ ಬಂದಿದೆ.”

“ನನಗೇನು ಸ್ವಾಮಿ ಅದರಿಂದ ಬಾಧಕ? ಪಾಷಾಣವನ್ನು ನಾನು ಹಾಕಿದ್ದೆಂದೇನಾದರೂ ಅದರಲ್ಲಿಲ್ಲವಷ್ಟೆ?”

“ಅದರಲ್ಲಿಲ್ಲದಿದ್ದರೇನಾಯಿತು? ನೀವೇ ಒಪ್ಪಲಿಲ್ಲವೇ? ಈಗ ನೀವೇನು ಹೇಳುತ್ತೀರಿ?”

“ಅದು ಹೇಗಿದ್ದರೂ ಎಲ್ಲಾ ಸಂಗತಿಗಳನ್ನು ಕುರಿತು ತಾವು ದಯಮಾಡಿ ಗೋಪಣ್ಣನನ್ನು ವಿಚಾರಿಸಿದರೆ, ಗೋಚರವಾಗುವುದು.”

“ಅದೇನು?”

“ಸುಂದರರಾಯನನ್ನು ವಿಷಹಾಕಿ ಕೊಂದಿದ್ದೇ ಗೋಪಣ್ಣನಲ್ಲವೇ?”

“ಹಾಗಾದರೆ ಈ ಬೋಸಡಿ ಹೇಳಿದ್ದೇನು? ಏನೆಲೆ, ಏ ಬೋಸಡಿ! ಆ ದಿವಸ ನೀನು ಬೊಗಳಿದ್ದೇನು? ಇನ್ನೊಮ್ಮೆ ಬೊಗಳು, ಹಾದರಗಿತ್ತಿ! ಗಳಿಗೆಗೆ ಒಂದೊಂದನ್ನು ಬೊಗಳಿ ತಪ್ಪಿಸಿಕೊಂಡು ಹೋದೇನೆಂದು ತಿಳಿದುಕೊಂಡಿದ್ದೀಯಾ? ತೊಗಲಿನ ಹುಡಿ ಹಾರುವುದು, ಬಲ್ಲೆಯಾ?”

“ನಾನೇನು ಹೇಳಲಿ ಸ್ವಾಮಿ? ಗೋಪಣ್ಣನನ್ನು ಕರೆಯಿಸಿ ಕೇಳಿದರೆ, ವಿದ್ಯಮಾನಗಳೆಲ್ಲ ಗೊತ್ತಾಗುವವು.”

“ನೀನು ಸುಂದರರಾಯನಿಗೆ ವಿಷಹಾಕಿ ಕೊಂದದ್ದು ಸರಿಯಷ್ಟೆ?”

“ಸುಂದರರಾಯರನ್ನಾರು ಕಂಡಿದ್ದಾರೆ ಸ್ವಾಮಿ? ಆ ಸಂಗತಿಯೇ ನನಗೆ ಗೊತ್ತಿಲ್ಲ.”

“ಭೀಮರಾಯನು ನಿನಗೆ ಎರಡು ಪವನು, ಒಂದು ಮುಡಿ ಅಕ್ಕಿ ಸಹ ಕೊಡಲಿಲ್ಲವೇ?”

“ಕೊಟ್ಟರೇನಾಯಿತು? ಆ ಸಂಬಂಧ ನಾನು ವಿಷಹಾಕಿದ್ದೆಂದಾಯಿತೇ?”

“ಏ ಬೋಳಿಮುಂಡೆ! ಗಾಜಿಬಿತ್ತ್ಲ ಸೂಳೆ! ನನಗೆ ನ್ಯಾಯಶಾಸ್ತ್ರ ಕಲಿಸುತ್ತೀಯಾ?”

“ನ್ಯಾಯಶಾಸ್ತ್ರವೇನು ಸ್ವಾಮಿ? ಜೀವದ ಸಂಕಟಕ್ಕೆ ತಿಳಿದದ್ದೇನಾದರೂ ಮಾತನಾಡುತ್ತೇನೆ; ತಮ್ಮ ಚಿತ್ತ, ನನ್ನ ಪುಣ್ಯ, ಮತ್ತೇನು ಹೇಳಲಿ!”

“ಒಳ್ಳೇದು, ನಡೆ!” ಎಂದು ಹೇಳಿ ಅವಳನ್ನು ಕಳುಹಿಸಿ, ಜಮೇದಾರನನ್ನು ಕಳುಹಿಸಿ, ಗೋಪಣ್ಣನನ್ನು ಬರಮಾಡಿಸಿ ವಿಚಾರಿಸಿದಲ್ಲಿ, ಅವನು ಬುಡ ಹಿಡಿದು ತುದಿಯ ವರೆಗೆ

ಎಲ್ಲಾ ಸಂಗತಿಗಳನ್ನು ವಿವರವಾಗಿ ಹೇಳಿ, ಸುಂದರರಾಯನನ್ನು ತಾನೇ ವಿಷಹಾಕಿ ಕೊಂದೆನೆಂದು ಸಮ್ಮತಿಸಿದನು.

"ದೇವಕಿಯು ಬದನೇಕಾಯಿಯ ಬಜ್ಜಿಯಲ್ಲಿ ವಿಷ ಹಾಕಲಿಲ್ಲವೇ?"

"ಇಲ್ಲ."

"ಅವಳು ಒಪ್ಪುತ್ತಾಳಷ್ಟೆ?"

"ಅವಳಿಗೇನೋ ಶನಿ ಹಿಡಿದಿದೆ."

"ವಿಷ ಹಾಕುವ ಅವಶ್ಯ ನಿನಗೇನಾಯಿತು?"

"ಸುಂದರರಾಯನ ಹೆಂಡತಿ ಹೇಳಿದ ಪ್ರಕಾರ ಹಾಕಿದ್ದು."

"ಅವಳು ಹಾಗೆ ಹೇಳುವುದಕ್ಕೆ ಕಾರಣವೇನು?"

"ನನಗೆಲ್ಲಿನ ಗೊತ್ತು ಸ್ವಾಮಿ?"

"ದೇವಕಿಗೆ ಒಂದು ಮುಡಿ ಅಕ್ಕಿ, ಎರಡು ಪವನು ಸಹ ಹೇಗೆ ಸಿಕ್ಕಿದ್ದು?"

"ಯಾರು ಬಲ್ಲ!"

"ಸುಂದರರಾಯನ ಹೆಂಡತಿ ಹಾಗೆ ಹೇಳಿದ್ದೆಂಬುದಕ್ಕೆ ದೃಷ್ಟಾಂತವೇನು?"

"ನಾನು ಹೇಳುವುದೇ ದೃಷ್ಟಾಂತ. ಅವಳು ಹೇಳದಿದ್ದರೆ, ನಾನೇಕೆ ವಿಷ ಹಾಕುತ್ತಿದ್ದೆನು?"

"ಏ ಬೋಳಿ ಮಗನೆ! ಇದನ್ನೆಲ್ಲ ಯಾರು ಹೇಳಿಕೊಟ್ಟದ್ದೊ?"

"ಹೇಳಿಕೊಟ್ಟದ್ದಲ್ಲ ಸ್ವಾಮಿ, ನಡೆದ ಸಂಗತಿಗಳನ್ನೇ ಅರಿಕೆ ಮಾಡಿದ್ದು."

"ನೀನೇ ವಿಷ ಹಾಕಿದ್ದು ನಿಶ್ಚಯ ತಾನೇ?"

"ನಿಶ್ಚಯವೇ ಸ್ವಾಮಿ."

"ಮೂರು ಮೂರು ಮಾತಿಗೂ ನಿಶ್ಚಯ ತಾನೇ?"

"ನಿಶ್ಚಯವೇ ಸ್ವಾಮಿ, ನಾನು ಯಾವ ಸ್ಥಳದಲ್ಲಾದರೂ ಪ್ರಮಾಣ ಮಾಡುವುದಕ್ಕೆ ಸಿದ್ಧನಿದ್ದೇನೆ."

"ನಿನಗೆ ಪ್ರಮಾಣ! ದನತಿಂಬುವವನಿಗೆ ಸಗಣಿಯಾಣೇ."

"ನಾನು ಬಡವ ಸ್ವಾಮಿ."

"ಸರಿ! ಸರಿ! ಭಡ್ವನೇ, ಸಂಶಯವೇನು? ಜಮೇದಾರರೇ, ಈ ಭೀಮರಾಯ ಗೋಪಣ್ಣ ಇವರಿಬ್ಬರನ್ನು ಲೋಕಪ್ಪಿನಲ್ಲಿಟ್ಟು, ಈ ಹೊತ್ತೇ ಅಪರಾಧ ಪತ್ರವನ್ನು ಬರೆದು, ಮೊಕದ್ದಮೆಯನ್ನು ಮೆಜಿಸ್ಟ್ರೇಟರ ಮುಂದೆ ಕೊಂಡುಹೋಗಿರಿ. ಇವರು ಬೆಂಕಿ ತಿಂದು ಗೆಂಡವನ್ನು ಹೊರಬಿಡುವರು. ಜಾಗ್ರತೆಯಾಗಿರಿ. ಒಬ್ಬರ ಹತ್ತಿರ ಇನ್ನೊಬ್ಬರನ್ನು ಮಾತನಾಡ ಬಿಡಬೇಡಿರಿ" ಎಂದಪ್ಪಣೆ ಕೊಡಲು, ಭೀಮರಾಯನು,

"ಸ್ವಾಮಿ, ಮಾತಬರಿ ಜಾಮೀನು ಕೊಡುತ್ತೇವೆ. ನನ್ನನ್ನು ಜಾಮೀನು ಮೇಲೆ ಬಿಡುವಂತೆ ಅಪ್ಪಣೆ ಮಾಡಬೇಕಷ್ಟೆ."

"ಇದು ಜಾಮೀನ್ ಮೇಲೆ ಬಿಡುವ ತಪ್ಪಲ್ಲ."

"ಸ್ವಾಮಿ, ಆರೋಪಿಸುವ ತಪ್ಪು ಒಂದು ವೇಳೆ ಜಾಮೀನ ಮೇಲೆ ಬಿಡುವಂಥದ್ದಲ್ಲ ವಾದರೂ, ರುಜುವಾತಿನ ಬಲಾಬಲತೆಯನ್ನು ನೋಡಿ, ಜಾಮೀನ ಮೇಲೆ ಬಿಡಕೂಡದಾದ ತಪ್ಪಿಗೂ ಬಿಡಬಹುದೆಂಬ ಕ್ರಮವಿದೆ ಎಂದು ಕೇಳಿದ್ದೇನೆ. ಈ ಮೊಕದ್ದಮೆಯಲ್ಲಂತೂ ನನ್ನ ಮೇಲೇನು ರುಜುವಾತಿದೆ ಎಂಬುದು ತಮಗೇನೇ ಗೊತ್ತಿರಬಹುದು. ಆದುದರಿಂದ ದಯಮಾಡಿ ನನ್ನ ಜಾಮೀನನ್ನು ಸ್ವೀಕರಿಸೋಣಾಗಬೇಕು."

"ಅದಾಗುವುದಿಲ್ಲ ಭೀಮರಾಯರೇ, ಸುಮ್ಮಗೆ ಛಲವೇಕೆ?"

"ನನ್ನ ಪೂರ್ವಾರ್ಜಿತ! ಮಾಡತಕ್ಕದ್ದೇನು!" ಎನ್ನುತ್ತಾ ಇಬ್ಬರೂ ಲೋಕಪ್ಪಿನೊಳಗೆ ಹೋದರು.

ಒಡನೆಯೇ ಜಮೇದಾರನು ಅಪರಾಧ ಪತ್ರವನ್ನು ಬರೆದು, ಬಂದಿವಾನರನ್ನು ಮೇಜಿಸ್ಟ್ರೇಟನ ಮುಂದೆ ಕೊಂಡುಹೋಗಿ ನಿಲ್ಲಿಸಿ, ಅಪರಾಧ ಪತ್ರವನ್ನು ಮೇಜಿನ ಮೇಲಿಟ್ಟನು. ಭೀಮರಾಯನು ಜಾಮೀನು ಕೊಡುವುದಾಗಿ ಹೇಳಿಕೊಂಡರೂ ಕೇಳದೆ, ಮೆಜಿಸ್ಟ್ರೇಟನು ಆ ಎರಡು ಮಂದಿ ಅಪರಾಧಿಗಳನ್ನು 'ರಿಮಾಂಡ್' ಎಂಬ ತಾತ್ಕಾಲಿಕ ಬಂಧನದಲ್ಲಿಡುವಂತೆ 'ಹುಕುಮ್' ಮಾಡಿದನು.

## ೧೪

ಪೋಲೀಸಿನವರ ವಿಚಾರಣೆಯಲ್ಲಿ ಕೊಲೆಯ ಮೊಕದ್ದಮೆಯು ಭೀಮರಾಯ ಗೋಪಣ್ಣ ಇವರ ಮೇಲೆ ಸ್ಥಾಪನೆಯಾಗಿ, ಅವರನ್ನು ಸೆರೆ ಹಿಡಿದು ತನಿಖಿಗೋಸ್ಕರ ಮೆಜಿಸ್ಟ್ರೇಟನಲ್ಲಿಗೆ ಕೊಂಡು ಹೋಗಿರುವುದಾಗಿ ಊರಲ್ಲೆಲ್ಲ ಜನಶ್ರುತಿಯು ಹರಡಿ, ತನಿಖಿಯ ಫಲಿತಾಂಶವನ್ನು ಅರಿಯುವುದಕ್ಕೋಸ್ಕರ ಭೀಮರಾಯನ ಸಂಬಂಧಿಕರೂ ಇಷ್ಟಮಿತ್ರರೂ ಸುಂದರರಾಯನ ಪಕ್ಷದವರೂ ಊರಿನ ಅನೇಕ ನಿವಾಸಿಗಳೂ ಮೆಜಿಸ್ಟ್ರೇಟನ ಕಚೇರಿಯಲ್ಲಿ ಬಂದು ತುಂಬಿದರು. ಭೀಮರಾಯನ ಮನೆಯಲ್ಲಿ ಶೋಧನೆಯಾದ ದಿವಸವೇ ನರಸಿಂಹ ಶಾಸ್ತ್ರಿಗೆ ತಂತಿಯ ದ್ವಾರಾ ವರ್ತಮಾನ ಮುಟ್ಟಿದರೂ, ಅಗತ್ಯವಾದ ಸ್ವಂತ ಕಾರ್ಯವನ್ನು ಬಿಟ್ಟು ಕೂಡಲೇ ಬರುವುದಕ್ಕೆ ಅನುಕೂಲವಾಗದೆ, ತನಿಖಿಯ ದಿವಸವೇ ಬೆಳಿಗ್ಗೆ ಚಡಾಚಡಿ ಪ್ರಯಾಣಮಾಡಿ ಕಮಲಪುರಕ್ಕೆ ಬಂದು ಮುಟ್ಟಿ, ಮೊಕದ್ದಮೆಯ ವಿದ್ಯಮಾನಗಳೆಲ್ಲವನ್ನು ಭೀಮರಾಯನಲ್ಲಿಗೆ ಹೋಗಿ ತಿಳಿದುಕೊಂಡು, ಕೂಡಲೇ ಅಲ್ಲಿಂದ ಹೋಗಿ ಹೈಕೋರ್ಟು ವಕೀಲ ಶೇಷಗಿರಿರಾಯನನ್ನು ಕಂಡು ಮೊಕದ್ದಮೆಯ ಅನುಭವವನ್ನು ಅವನಿಗೆ ಹೇಳಿಕೊಟ್ಟು, ಒಂದು ಸಾವಿರ ರೂಪಾಯಿ ಪ್ರತಿಫಲ ನಿಶ್ಚಯಿಸಿ, ಅದರಲ್ಲಿ ಏಳುನೂರೈವತ್ತು ರೂಪಾಯಿ ಮುಂಗಡವಾಗಿ ಕೊಟ್ಟು, ವಕೀಲ ಸೂರಪ್ಪಯ್ಯನನ್ನು ಕರೆಯಿಸಿ, ತನಿಖಿಯ ವೇಳೆಯಲ್ಲಿ ಅವಶ್ಯ ಕಾಣುವ ಅನುಭವವನ್ನು ಕೊಡಬೇಕಾಗಿ ಹೇಳಿ, ಅವನಿಗೆ ನೂರು ರೂಪಾಯಿ ಫೀಸು ಕೊಟ್ಟು ತನ್ನ ಸಾರೋಟಿನಲ್ಲೇ ಅವರಿಬ್ಬರನ್ನು ಕುಳ್ಳಿರಿಸಿಕೊಂಡು ಮೊಕದ್ದಮೆಯನ್ನು

ತನಿಖಿಗೆ ಕರೆಯುವುದಕ್ಕೆ ಸಮಯವಾಗುವಾಗಲೇ ಬಂದು ಮುಟ್ಟಿದರು. ಶೇಷಗಿರಿರಾಯನು ಸಾರೋಟಿನಿಂದ ಝಕ್ಕೆಂದು ಕೆಳಗಿಳಿದು, ಮೆಜಿಸ್ಟ್ರೇಟನ ಮುಂದೆ ಬರುತ್ತಲೆ ತನಿಖಿಯು ತೊಡಗಿತು. ಫಿರಿಯಾದ ಭಾಗದ ಸಾಕ್ಷಿಗಾರರಿಗೆಲ್ಲ ಪ್ರಥಮ ವಿಚಾರಣೆ, ಎದಿರು ವಿಚಾರಣೆ, ಪುನರ್ವಿಚಾರಣೆಗಳಾದುವು. ಬಂದೀವಾನರನ್ನು ವಿಚಾರಿಸಿದ್ದಲ್ಲಿ ಭೀಮರಾಯನು ಅಪರಾಧವನ್ನು ಪೂರ್ಣವಾಗಿ ನಿರಾಕರಿಸಿದನು. ಗೋಪಣ್ಣನು ಸುಂದರರಾಯನನ್ನು ಆತನ ಹೆಂಡತಿ ಸುಶೀಲೆಯ ಅಪೇಕ್ಷೆ ಪ್ರಕಾರ ತಾನು ವಿಷಹಾಕಿದ್ದೆಂದೂ ಆ ಕೃತ್ಯದಲ್ಲಿ ಭೀಮರಾಯನ ಸೇರಿಕೆಯಾಗಿಲ್ಲವೆಂದೂ ವಾಙ್ಮೂಲವನ್ನು ಬರೆಯಿಸಿದನು. ಆ ಮೇಲೆ ಶೇಷಗಿರಿರಾಯನು ಎದ್ದು ನಿಂತು, ಅಖಂಡ ಎರಡು ತಾಸುಗಳ ವರೆಗೆ ಬಹು ಬುದ್ಧಿ ಚಾತುರ್ಯದಿಂದಲೂ ವಾಕ್ಪಟುತ್ವದಿಂದಲೂ ಅಭಿನಯ ಸಂರಂಭದಿಂದಲೂ ಸ್ವಪಕ್ಷಸ್ಥಾಪನ ಪ್ರತಿಪಕ್ಷೋತ್ಪಾಟನಗಳನ್ನು ಮಾಡಿ ದೀರ್ಘಾಲಾಪವನ್ನು ನಡೆಯಿಸಿದನು. ಆ ಪ್ರಸಂಗದ ಕಾಲದಲ್ಲಿ ಸೂರಪ್ಪಯ್ಯನು ಅವನ 'ನೋರ್ಟನ್ಸ್ ಲೋ ಆಫ್ ಎವಿಡೆನ್ಸ್' 'ಮೈನ್ಸ್ ಕಮೆಂಟರಿಸ್' ಎಂಬೀ ಪುಸ್ತಕಗಳನ್ನು ಕ್ಷಣೇ ಕ್ಷಣೇ ತೆರೆದುನೋಡಿ, ಆಗಾಗ್ಗೆ ಶೇಷಗಿರಿರಾಯನ ಕಿವಿಯಲ್ಲಿ ಪಿಸಪಿಸನೆ ಕುಸುಗುಟ್ಟುತ್ತಾ, ಇಂಗ್ಲಿಷ್ ತಿಳಿಯದವರು, ಇದರಲ್ಲೇನೋ ಮಹಾ ಚಮತ್ಕಾರವಿದೆಯೆಂದೂ ಇಂತಹ ವಕೀಲರು ದೊರೆಯುವುದು ಕಕ್ಷಿಗಳ ಪೂರ್ವಪುಣ್ಯದ ಫಲವೆಂದೂ ಎಣಿಸುವ ಹಾಗೆ ಸುತ್ತಲೂ ಗುಂಪು ಕೂಡಿದವರ ಕಡೆಗೂ ಕೈದಿಗಳ ಕಡೆಗೂ ಆಗಾಗ್ಗೆ ನಗೆಮೊಗದೊಡನೆ ನೋಡಿ ತಲೆದೂಗುತ್ತಾ ವಿಪರೀತವಾದ ಶ್ರಮಪಟ್ಟನು. ಶೇಷಗಿರಿರಾಯನ ಪ್ರಸಂಗದ ಮುಖ್ಯ ಸಾರಾಂಶವೇನೆಂದರೆ: ಭೀಮರಾಯನು ನಿರಪರಾಧಿ, ಗೋಪಣ್ಣನ ಮೇಲೆ ಅವನ ಸ್ವಂತ ಒಪ್ಪಿಗೆಯಲ್ಲದೆ ಬೇರೇನೂ ರುಜುವಾತಿಲ್ಲ ಎಂಬುದಾಗಿತ್ತು. ಆ ಪ್ರಸಂಗ ತೀರಿದ ಮೇಲೆ ಮೆಜಸ್ಟ್ರೇಟನು ಆಲೋಚನೆಯ ಕೋಣೆಗೆ ಹೋಗಿ ಒಂದು ತಾಸಿನ ನಂತರ ತಿರಿಗಿ ಬಂದು, "ಈ ಮೊಕದ್ದಮೆಯ ಸಂಗತಿಗಳನ್ನೆಲ್ಲ ಚೆನ್ನಾಗಿ ಆಲೋಚಿಸಿ ನೋಡಿದ್ದಲ್ಲಿ ಇಬ್ಬರು ಕೈದಿಗಳ ಮೇಲೆಯೂ ಅಪರಾಧ ಸ್ಥಾಪನೆಗೆ ಸಾಕಷ್ಟು ರುಜುವಾತಿಲ್ಲದಿದ್ದರೂ, ಸುಂದರರಾಯನನ್ನು ಭೀಮರಾಯನೇ ಕೊಂದಿರಬೇಕೆಂತ ಊಹಿಸುವುದಕ್ಕೆ ಕೆಲವು ಕಾರಣಗಳು ಕಂಡು ಬರುವುದರಿಂದಲೂ, ಎರಡನೇ ಕೈದಿಯು ಅಪರಾಧವನ್ನು ಒಪ್ಪಿಕೊಳ್ಳುವುದರಿಂದಲೂ ಊರಿನಲ್ಲಿಯ ಕಿಂವದಂತಿಯು ಶಾಸ್ತ್ರೀಯವಾದ ರುಜುವಾತಲ್ಲವಾದರೂ, ಮೊಕದ್ದಮೆಯು ಇಲ್ಲೇ ಬಿಟ್ಟುಹೋದರೆ, ನಮ್ಮ ಸ್ಥಾನಕ್ಕಪಾಯ ತರಿಸುವಷ್ಟು ವಿಶೇಷ ಸ್ವಭಾವದ್ದಾಗಿರು ವುದರಿಂದಲೂ ಈ ಎರಡು ಮಂದಿ ಕೈದಿಯರನ್ನು 'ಕಮ್ಮಿಟ್' ಮಾಡಲು ನಿಶ್ಚಯಿಸಿದ್ದೇವೆ" ಎಂದು ಹೇಳಿದನು. ಶೇಷಗಿರಿರಾಯನು ಇದೆಂತಹ ತೀರ್ಮಾನವೊ ತನಗೆ ಚೆನ್ನಾಗಿ ತಿಳಿಯಲಿಲ್ಲವೆಂದು ಹೇಳಲು, ರಿಕಾರ್ಡುಗಳ ನಕಲುಗಳನ್ನು ತೆಗೆದುಕೊಂಡು ತಿಳಿಯಬಹುದೆಂದು ಮೆಜಿಸ್ಟ್ರೇಟನು ಉತ್ತರ ಕೊಟ್ಟನು. ಸೂರಪ್ಪಯ್ಯನು ತನ್ನ 'ಮೈನ್ಸ್ ಕಮೆಂಟರಿ'ಯನ್ನು ಎರಡು ಕೈಗಳಿಂದಲೂ ತಲೆಯಷ್ಟು ಎತ್ತರಕ್ಕೆತ್ತಿ– "ಇದು ಎಂಥಾ ಮೂರು ಕಾಸಿನ ತೀರ್ಪು? ಕಲಕತ್ತಾ ಹೈಕೋರ್ಟಿನ ಫುಲ್‌ಬೆಂಚ್‌ನಲ್ಲಿ–" ಎಂದೊದರುವಷ್ಟರೊಳಗೆ ಮೆಜಿಸ್ಟ್ರೇಟನು, "ಸಾಕು

ಸುಮ್ಮಗಿರಿ” ಎಂದು ಆತ ಹೇಳಿದ ಮಾತನ್ನು ಕುರಿತು ತನ್ನ ಹೆಡ್‌ಕ್ಲಾರ್ಕ್ ಮತ್ತು ಒಬ್ಬ ಶಿಪಾಯಿಯ ವಾಙ್ಮೂಲವನ್ನು ಕೂಡಲೇ ತೆಗೆದುಕೊಂಡು ಆತನನ್ನು ಸಹ ವಿಚಾರಿಸಿ, “ಸೂರಪ್ಪಯ್ಯನವರೇ, ನೀವು ಕೋರ್ಟಿಗೆ ಬೇ ಅದಬ್ ಮಾಡಿದ ಅಪರಾಧಕ್ಕೆ ನಿಮಗೆ ನೂರು ರೂಪಾಯಿ ಜುರುಮಾನೆ. ಅದನ್ನು ಕೂಡಲೇ ಕೊಡದಿದ್ದರೆ ಮೂರು ದಿವಸಗಳ ಜೈಲು ಬಂಧನೆಯ ಶಿಕ್ಷೆ” ಎಂದು ಶಿಕ್ಷೆ ವಿಧಿಸಲು, ನರಸಿಂಹ ಶಾಸ್ತ್ರಿಯು ಕೊಟ್ಟ ನೂರು ರೂಪಾಯಿಯನ್ನು ಜುರುಮಾನೆಯ ಸಂದಾಯಕ್ಕೆ ಕೊಟ್ಟು ಹೊಟ್ಟೆಯೊರೆಸಿಕೊಳ್ಳುತ್ತಾ ಮನೆಗೆ ಹೋದನು. ಭೀಮರಾಯನನ್ನು ಜಾಮೀನು ತೆಗೆದುಕೊಂಡು ಬಿಡಬೇಕೆಂದು ಶೇಷಗಿರಿರಾಯನು ಎಷ್ಟು ಹೇಳಿಕೊಂಡರೂ, ಮೆಜಿಸ್ಟ್ರೇಟನು ಕೇಳದೆ ರಿಮಾಂಡಿಗೆ ಕಳುಹಿಸಿದನು. ಆ ಬಳಿಕ ವಕೀಲರೂ ಕೂಡಿದ ಜನರೆಲ್ಲರೂ ಹೊರಟುಹೋದನು.

ಅದರ ನಾಲ್ಕನೆಯ ದಿವಸವೇ ಸೆಶ್ಯನ್ ಪ್ರಾರಂಭಿಸುವುದಕ್ಕಿದ್ದುದರಿಂದ ಮರುದಿವಸವೇ ಮೊಕದ್ದಮೆಯ ರಿಕಾರ್ಡೆಲ್ಲ ಸೆಶ್ಯನ್ ಕೋರ್ಟಿಗೆ ಕಳುಹಿಸುವಣಾಯಿತು. ಕೈದಿಯರನ್ನು ಜೈಲಿಗೆ ಕೊಂಡು ಹೋಗುವಣಾಯಿತು. ನರಸಿಂಹ ಶಾಸ್ತ್ರಿಯು ಸೆಶ್ಯನ್ ತನಿಖಿಗೋಸ್ಕರ ಶೇಷಗಿರಿ ರಾಯನನ್ನೇ ಮುಂಚಿನಷ್ಟೇ ಪ್ರತಿಫಲ ನಿಶ್ಚಯಿಸಿ, ಈ ಸಾರಿ ಸೂರಪ್ಪಯ್ಯನ ಸಹಾಯವು ಅಗತ್ಯವಿಲ್ಲವೆಂದಾಲೋಚಿಸಿ ಬೇಕಾದ ಅನುಭವವನ್ನು ತಾನೇ ಕೊಟ್ಟನು.

ಸೆಶ್ಯನಿನಲ್ಲಿ ಪ್ರಥಮದಲ್ಲಿ ಇದೇ ಮೊಕದ್ದಮೆಯನ್ನು ತನಿಖೆಗೆ ಹಿಡಿದರು. ಹೊಗೆಸೊಪ್ಪಿನ ಸಾಹುಕಾರ ಶಿವಂಣಯ್ಯ, ಕುದುರೆ ದಲಾಲ್ ಹಸನಬ್ಬ ಇವರಿಬ್ಬರನ್ನು ಎಸ್ಸೆಸ್ಸರಾಗಿ ನೇಮಿಸಿದರು. ಅಪರಾಧ ಪತ್ರವನ್ನು ಓದಿ ಹೇಳೋಣವೇ ಕೈದಿಯರಿಬ್ಬರೂ ತಾವು ಯಾವ ಸಂಗತಿಯನ್ನಾದರೂ ಅರಿಯೆವೆಂದು ಹೇಳಿದರು. ಸಾಕ್ಷಿಗಾರರು ಮೆಜಿಸ್ಟ್ರೇಟನ ಮುಂದೆ ಕೊಟ್ಟ ವಾಙ್ಮೂಲಗಳಿಗೆ ಸರಿಯಾಗಿಯೇ ಸಾಕ್ಷಿ ಕೊಟ್ಟರು. ಉಭಯ ಪಕ್ಷದ ವಕೀಲರೂ ಪ್ರಸಂಗಿಸಿದರು. ನ್ಯಾಯಾಧಿಪತಿಯು ಮೊಕದ್ದಮೆಯ ರುಜುವಾತಿಗೆ ಬಲಾಬಲಿಕೆಗಳನ್ನು ಎಸ್ಸೆಸ್ಸರರಿಗೆ ವಿವರಿಸಿ ಹೇಳಿ, ಅವರಲ್ಲೊಬ್ಬೊಬ್ಬನ ಅಭಿಪ್ರಾಯವೇನೆಂದು ಕೇಳಿದನು. ಆಗ,

ಶಿವಂಣಯ್ಯ (ಎದ್ದು ನಿಂತು): “ನಮ್ಮ ಅಭಿಪ್ರಾಯವೆಂಥಾದ್ದು? ದೊರೆಗಳ ಮರ್ಜಿ.”

ನ್ಯಾಯಾಧಿಪತಿ: “ನಿಮ್ಮಗಳ ಅಭಿಪ್ರಾಯವನ್ನು ತಿಳಿದ ಮೇಲೆ ನನ್ನ ಮರ್ಜಿ. ರುಜುವಾತಿನ ಸಂಗತಿಗಳನ್ನಾಲೋಚಿಸಿ ನೀವು ಕಂಡುಕೊಂಡದ್ದೇನು? ಕೊಲೆ ಎಂದು ಕಂಡುಕೊಂಡಿದ್ದೀರಾ?”

ಶಿ: “ಯಾರ ಕೊಲೆ?”

ನ್ಯಾ: (ನಗುತ್ತಾ) “ಸುಂದರರಾಯನ ಕೊಲೆ.”

ಶಿ: “ಅದನ್ನು ನಾನು ಸ್ವತಃ ಕಾಣಲಿಲ್ಲ. ಅ ದಿವಸ ಅದು ಭೀಮರಾಯನಲ್ಲಿಗೆ ಬಂದಿತ್ತಂತೆ. ಭೀಮರಾಯನೊಬ್ಬನೇ ಕಂಡನಂತೆ.”

ನ್ಯಾಯಾಧಿಪತಿಯು ಈ ಮಾತುಗಳ ಗೊತ್ತುಗುರಿಯನ್ನು ಕಾಣದೆ ಮುಖ ಮುಖ ನೋಡಿ ತಲೆಯೊರಸಿಕೊಂಡು, ಕಡೆಗೆ ಸರಕಾರದ ಕಡೆಯ ವಕೀಲನ ಹತ್ತಿರ,

“ಆತ ಏನು ಹೇಳುತ್ತಾನೆ?”

(ಸರಕಾರದ ಕಡೆಯ ವಕೀಲನು ವಿವರಿಸಿ ಹೇಳಲು ನ್ಯಾಯಾಧಿಪತಿಯು ‘ಖೋ’ ಎಂದು ನಕ್ಕು, ಕೊಲೆಯೆಂದರೇನೆಂದು ಎಸ್ಸೆಸ್ಸರಿಗೆ ವಿವರಿಸಿ ಹೇಳಬೇಕಾಗಿ ಅಪ್ಪಣೆ ಕೊಟ್ಟನು. ವಕೀಲನು ವಿವರಿಸಿ ಹೇಳಿದನು. ಆ ಬಳಿಕ,

ನ್ಯಾ: “ಈಗೇನು ನಿಮಗಿರುವ ಅಭಿಪ್ರಾಯ? ಸಾಕಷ್ಟು ರುಜುವಾತಿದೆಯೋ?”

ಶಿ: “ರುಜುವಾತು ಸಾಲದು ಸ್ವಾಮಿ, ಶಾನೇ ಅನುಮಾನವಿದೆ.”

ಹ: “ನನಗೂ ಹಾಗೆಯೇ.”

ನ್ಯಾಯಾಧಿಪತಿಯು ತಾನು ಎಸ್ಸೆಸ್ಸರೊಡನೆ ಏಕೀಭವಿಸುವುದರಿಂದ ಅನುಮಾನದ ಫಲವನ್ನು ಕೈದಿಯರಿಗೆ ಕೊಟ್ಟು ಅವರನ್ನು ಬಿಟ್ಟುಬಿಟ್ಟಿದ್ದೇನೆಂದು ತೀರ್ಪು ಹೇಳಿದನು.

ಕೂಡಲೇ ಭೀಮರಾಯ, ನರಸಿಂಹ ಶಾಸ್ತ್ರಿ, ವಕೀಲ ಶೇಷಗಿರಿರಾಯ ಸಹ ಸಾರೋಟು ಹತ್ತಿ ಥರ್‍ರೆಂದು ಭೀಮರಾಯನ ಮನೆಗೆ ಬಂದರು. ಅವರನ್ನು ಹಿಂಬಾಲಿಸಿ ಗೋಪಣ್ಣನು ನಗಾಡುತ್ತ ಹಾರ್‍ಯಾಡುತ್ತಾ ಬಂದು ಮುಟ್ಟಿದನು. ಅಂಬಾಬಾಯಿಯು ಅಮಿತ ಸಂತೋಷದಿಂದ ಕಡಲೆ, ತೊಗರಿ, ಹುರುಳಿಯ ತಾಳದಗಳನ್ನೂ, ಕಾಫಿ, ಚಾ, ಕೊಕ್ಕೊ ಮುಂತಾದ ಪಾನಕಗಳನ್ನೂ ಒಂದು ಮಣ ಮಿಠಾಯಿಯನ್ನೂ, ಅರ್ಧ ಮಣ ಬದನೇಕಾಯಿ ಬಜ್ಜೆಗಳನ್ನೂ ತರಿಸಿ, ಭೀಮರಾಯನ ಇಷ್ಟಮಿತ್ರರನ್ನೆಲ್ಲ ಬರಮಾಡಿಸಿ ಅಟ್ಟಹಾಸದ ಒಂದು ಫಲಾಹಾರವನ್ನು ಒಂದು ತಾಸಿನೊಳಗೆ ಸಿದ್ಧಪಡಿಸಿ, ಭೀಮರಾಯನು ಎಲ್ಲರಿಗೂ ಅವರವರ ತಾರತಮ್ಯಾನುಸಾರವಾಗಿ ಉಪಚರಿಸಿ, ಈ ಹೊತ್ತು ರಾತ್ರಿ ಕರ್ಣ ದುಶ್ಯಾಸನರ ವಧೆಯ ಪ್ರಸಂಗವನ್ನು ಹೇಳಬೇಕೆಂದು ನಿಶ್ಚಯಿಸಿದ್ದೇನೆ, ಎಲ್ಲರೂ ದಯಮಾಡಿಸಬೇಕೆಂದು ಪ್ರಾರ್ಥಿಸಿದನು. ಎಲ್ಲರೂ ಹಾಗಾಗಲೆಂದು ಹೇಳಿದರು. ಫಲಾಹಾರವು ತೀರಿದ ಬಳಿಕ ಭೀಮರಾಯನು ಶೇಷಗಿರಿರಾಯನಿಗೆ ಭರ್ಜರಿ ಬನಾರಸಿ ಶಾಲ ಜೋಡಿಯನ್ನು ಉಡುಗೊರೆಮಾಡಿ, ನೆಲ್ಲೂರ ಎತ್ತುಗಳ ಸಾರೋಟಿನಲ್ಲಿ ಮನೆಗೆ ಕಳುಹಿಸಿಕೊಟ್ಟನು. ನರಸಿಂಹ ಶಾಸ್ತ್ರಿಯು ಬೆಡಗೂರಿನಿಂದ ಬಂದ ಮೇಲೆ ತನ್ನ ಮನೆಗೆ ಹೋಗದಿದ್ದುದರಿಂದ ಭೀಮರಾಯನ ಹತ್ತಿರ ಕೇಳಿ ಮನೆಗೆ ಹೋದನು.

## ೧೫

ಮರುದಿನ ಬೆಳಿಗ್ಗೆ ಭೀಮರಾಯನು ಕಾಫಿ ಕುಡಿದು, ಓಲಗದಲ್ಲಿ ಕುಳಿತಿರುವಾಗ ವಕೀಲ ಸೂರಪ್ಪಯ್ಯನು ಬಂದು ಕೂಡಿದನು. ವಾಡಿಕೆಯ ಕ್ಷೇಮ ಸಮಾಚಾರದ ಮಾತುಗಳಾದ ಬಳಿಕ ಸೂರಪ್ಪಯ್ಯನು ಭೀಮರಾಯನೊಡನೆ,

“ಹೇಗೆ, ಸ್ವಾಮಿ? ನಾನು ಕೊಟ್ಟ ಆಲೋಚನೆ? ನಾನು ಸ್ಕೊಟ್ ಸಾಹೇಬರ ಕೋರ್ಟಿನಲ್ಲಿ ಲೆಕ್ಕವಿಲ್ಲದ ಮೊಕದ್ದಮೆಗಳಲ್ಲಿ ವ್ಯವಹರಿಸಿ ಈ ಪೋಲೀಸಿನವರ ಕುಯುಕ್ತಿಗಳನ್ನೆಲ್ಲ ಚೆನ್ನಾಗಿ ಅರಿತಿರುವುದಲ್ಲದೆ, ‘ನೋರ್ಟನ್ಸ್ ಲೊ ಆಫ್ ಎವಿಡೆನ್ಸ್’ ಮತ್ತು ‘ಮೈನ್ಸ್

ಕಮೆಂಟರಿಸ್' ಈ ನ್ಯಾಯಶಾಸ್ತ್ರದ ಪುಸ್ತಕಗಳನ್ನು ಹಗಲಿರುಳು ಪಠನೆ ಮಾಡಿ, ಕ್ರಿಮಿನಲ್ ಮೊಕದ್ದಮೆಗಳಿಗೆ ಸಂಬಂಧಿಸಿದ ನ್ಯಾಯಶಾಸ್ತ್ರವೆಲ್ಲವೂ ನನಗೆ ಕರತಳಾಮಳಕವಾಗಿದೆ. ಸರ್ವರೂ ಈ ವಿದ್ಯಮಾನವನ್ನು ಬಲ್ಲವರಾದರೂ ತಮ್ಮಂತಹ ಮಹಾನುಭಾವರು ಮಾತ್ರ ಎಲ್ಲಾದರೂ ನನ್ನ ಸಹಾಯವನ್ನು ಪಡೆಯುವರಲ್ಲದೆ ಊರ ಜನರು ಹೆಚ್ಚಾಗಿ ನನ್ನನ್ನು ಕರೆಯುವುದಿಲ್ಲ. ನ್ಯಾಯಶಾಸ್ತ್ರವನ್ನು ತಿಳಿದೇನು ಲಾಭ? ಬುದ್ಧಿಕೌಶಲವಿದ್ದೇನು ಪ್ರಯೋಜನ? ಅದಂತಿರಲಿ,– ಇಡ್ಡಲಿ ಹೋಳಪ್ಪನು ನನಗೆ ಸಿಕ್ಕಿದ ನೂರು ರೂಪಾಯಿಗೆ ನಾಮ ಹಾಕಿದನಷ್ಟೆ! ಚಿಂತಿಲ್ಲ. ಅವನಿಗೆ ನಮ್ಮ ಧವಳರಾಯರಾದ ಸ್ಕೊಟ್ ಸಾಹೇಬರಲ್ಲಿ ಬಗೆ ಮಾಡದಿರೆನು. ರೂಪಾಯಿಯ ಮಾತಿಗಲ್ಲ, ರಾಯರೇ, ನೂರು ರೂಪಾಯಿ ಹೋದದ್ದು ಹೋಗಲಿ, ತಮ್ಮಂತಹರಿದ್ದರೆ, ಕ್ಷಣಮಾತ್ರದಲ್ಲಿ ನೂರಲ್ಲ, ಸಾವಿರ ದುಡಿಯುವುದೇನಗಾಧ? ನನ್ನ ಉಪದೇಶದ ಪ್ರಕಾರ ತಾವು ನಡೆದುಕೊಂಡು ತಮಗೆ ಜಯವಾಯಿತೆಂಬುದೇ ನನಗೆ ದೊಡ್ಡ ಸಂತೋಷವಲ್ಲದೆ ಮತ್ತೇನಲ್ಲ. ಹೀಗೊಂದು ಮಾತನ್ನು ಹೇಳಿಬಿಟ್ಟು ಹೋಗೋಣವೆಂದು ಬಂದೆ, ನನಗಪ್ಪಣೆಯೇ?" ಎಂದು ಹೇಳಿ ತೆರಳುವಾಗ ಭೀಮರಾಯನು "ಸ್ವಾಮೀ, ತಮ್ಮುಪಕಾರವನ್ನೆಂದಿಗೂ ಮರೆಯುವವನಲ್ಲ. ಆ ನೂರು ರೂಪಾಯಿಯ ಮಾತಂತಿರಲಿ, ಹತ್ತೈವತ್ತು ಹೆಚ್ಚಿಗೆ ಸಹ ಈಗಲೇ ಕೊಡುತ್ತಿದ್ದೆನು. ಆದರೆ ಮಾಡತಕ್ಕದ್ದೇನು? ಮೊಕದ್ದಮೆಯ ಸಂಬಂಧ ಹೇರಳ ಖರ್ಚು ಮುಟ್ಟಿ ತತ್ಕಾಲಕ್ಕೆ ಕಂಗಾಲಾಗಿದ್ದೇನೆ. ಸ್ವಲ್ಪ ದಿವಸಗಳ ಮೇಲೆ ನಾನು ಹೇಳಿ ಕಳುಹಿಸಿದಾಗ ದಯಮಾಡಿಸಬೇಕು" ಎಂದು ಹೇಳಲು, ಹಾಗಾಗಲೆಂದು ಚಾವಡಿಯನ್ನಿಳಿದು ಹೊರಟುಹೋದನು. ಹೋಗುತ್ತಾ ತನ್ನಲ್ಲಿ ತಾನೇ, 'ಹೊಳೆ ದಾಟಿದ ಮೇಲೆ ಅಂಬಿಗನ ಮಿಂಡ ಎಂಬುದು ಪ್ರತ್ಯಕ್ಷವಾಯಿತು. ಇವನಿಗುಪಾಯವೇ ಬೇರೆ ಇದೆ, ನೋಡೋಣ'ವೆಂದು ಏನೋ ಒಂದು ಸಂಕಲ್ಪವನ್ನು ಮಾಡಿಕೊಂಡು ಮನೆಯನ್ನು ಸೇರಿದನು.

ಅದೇ ದಿವಸ ಸಾಯಂಕಾಲದ ಸಮಯದಲ್ಲಿ ಪುನಃ ಭೀಮರಾಯನಲ್ಲಿಗೆ ಬಂದು ಅವನ ಕೈಹಿಡಿದು ಹಿತ್ತಲಿನ ಒಂದು ಮೂಲೆಗೆ ಕರೆದುಕೊಂಡು ಹೋಗಿ ಅಂತರಂಗವಾಗಿ, "ರಾಯರೆ, ಇಡ್ಡಲಿ ಹೋಳಪ್ಪನ ಟೊಂಕ ಮುರಿಯುವುದಕ್ಕೆ ಸಮಯ ಈಗಲೇ ಬಂದಿದೆ. ತಮ್ಮ ಮೊಕದ್ದಮೆಯಲ್ಲಿ ರುಜುವಾತನ್ನು ಸರಿಯಾಗಿ ತೆಗೆದುಕೊಳ್ಳದೆ ಅಪೂರ್ಣವಾದ ಸ್ಥಿತಿಯಲ್ಲಿ ಅದನ್ನು ಸೆಶ್ಶನ್ ಕೋರ್ಟಿಗೆ ಕಳುಹಿಸಿದ್ದಾಗಿಯೂ, ರಿಕಾರ್ಡ್ ಕರೆಯಿಸಿ ನೋಡಿ ಮೊಕದ್ದಮೆಯನ್ನು ಪುನಃ ತನಿಖಿ ಮಾಡಿ ಕಮ್ಮಿಟ್ ಮಾಡುವುದಕ್ಕೆ ಸಂಗತಿಗಳಿದ್ದರೆ, ಕೈಲಾಗುವಷ್ಟು ಬೇಗ ಆ ವಿಷಯದಲ್ಲಿ ಬರೆದು ಕಳುಹಿಸಬೇಕಾಗಿ ಸ್ಕೊಟ್ ಸಾಹೇಬರಿಗೆ ಡಿಸ್ಟ್ರಿಕ್ಟ್ ಮೆಜಿಸ್ಟ್ರೇಟ್ ಸಾಹೇಬರ 'ಮಾಮಿರಾಂಡ್' ಬಂದಿದೆ. ಇಡ್ಡಲಿ ಹೋಳಪ್ಪನಿಗೀಗ ದಾರಿ ತೋರಿಸುತ್ತೇನೆ" ಎಂದನು. ಭೀಮರಾಯನು, 'ಈ ಪೀಕಲಾಟವಿನ್ನೂ ತೀರಲಿಲ್ಲವಲ್ಲ!' ಎಂದು ದಿಗಿಲಿನಿಂದ "ಅವನ ಮಾತು ಹೇಗೂ ಇರಲಿ, ನನಗೇನಾದರೂ ಅಪಾಯ ಬರುವುದೇ?" ಎಂದು ಕೇಳಲಾಗಿ, "ತಮಗೆ ನಾನಿದ್ದೇನಷ್ಟೆ. ಸುಮ್ಮಗೆ ನಾಲ್ಕು ಕೈಯ ಅಂಗಿಯವರಿಗೆ ಸಾವಿರಗಟ್ಲೆಯ ಹಣಕೊಟ್ಟು ವ್ಯಯಮಾಡಬೇಡಿರಿ. ತಮ್ಮ ಕೆಲಸವನ್ನು

ಸುಲಭದಲ್ಲಿ ನಾನೇ ತೀರಿಸುವೆನು, ತಾವೇನೂ ಭಯಪಡಬೇಕಾದದ್ದಿಲ್ಲ. ಚಿದಂಬರರಾಯನು ಬೆಳಿಗ್ಗೆ ನಾನಿದ್ದಲ್ಲಿಗೆ ಬಂದು ಮೊಕದ್ದಮೆಯನ್ನು ಪುನಃ ಸ್ಕೊಟ್ ಸಾಹೇಬರಲ್ಲಿ ವಿಚಾರಣೆ ಮಾಡಿಸುವಹಾಗಿನ ದಾರಿ ಏನಾದರೂ ಇದೆಯೇ? ಎಂದು ಕೇಳುತ್ತಿದ್ದನು. ಆಲೋಚಿಸಿ ಹೇಳುವೆನೆಂದುತ್ತರಕೊಟ್ಟು, ಆತನನ್ನು ಕಳುಹಿಸಿಬಿಟ್ಟೆನು, ತಮ್ಮ ಮಾತಂತು ಬಿಡಿರಿ." ಎನ್ನಲು, ಭೀಮರಾಯನು ಇನ್ನಷ್ಟು ಗಾಬರಿಪಟ್ಟು, ಸೂರಪ್ಪಯ್ಯನನ್ನು ಮನೆಯೊಳಗೆ ಕರೆದುಕೊಂಡು ಹೋಗಿ, "ಇದರಲ್ಲಿ ತಾವು ಹೇಗಾದರೂ ನನ್ನನ್ನು ರಕ್ಷಿಸಬೇಕು" ಎಂದು ಅಂಗಲಾಚಿಕೊಂಡು ಕೇಳಿ, ಇಪ್ಪತ್ತೈದು ಪವನುಗಳನ್ನು ಅವನ ಕೈಯಲ್ಲಿಡಲು, "ಬಿಡಿ! ಬಿಡಿ! ಅದರಲ್ಲಗಾಧವೇನೂ ಇಲ್ಲ. ಲೇಶಾಂಶವಾದರೂ ಭಯಪಡಬೇಕಾದದ್ದಿಲ್ಲ. ನಾಳೆ ಲಕ್ಷ್ಮಿಯ ನಂಬರು ತನಿಖಿಗಿಟ್ಟಿದ್ದಾರೆ. ರಿಕಾರ್ಡನ್ನು ಓದಬೇಕು. ಈಗಪ್ಪಣೆ ಕೊಡಿರಿ. ನಾನು ಹೇಳಿದ್ದನ್ನು ಮಾತ್ರ ಬಹು ಅಂತರಂಗವಾಗಿಟ್ಟುಕೊಳ್ಳಿರಿ. ಬಹಿರಂಗಪಡಿಸಿದರೆ ವಿಪತ್ತಿದೆ" ಎಂದು ಖಂಡಿತವಾಗಿ ಎಚ್ಚರಿಕೆಯ ಮಾತನ್ನು ಹೇಳಿ ಹೊರಟುಹೋದನು. ಹೋಗುತ್ತಾ 'ಇದೀಗ ವಕೀಲನ ಯುಕ್ತಿ! 'ಅಗಸನ ಕತ್ತೆಗೆ ಸೊಗಸಿನ ಏಟು' ಸದ್ಯಕ್ಕೆ ರಾಮಜಯಂತಿಯ ಖರ್ಚಿಗೆ ಬಗೆಯಾಯಿತು' ಎಂದು ತನ್ನಲ್ಲಿ ತಾನೇ ಅಂದುಕೊಂಡು ನಗುತ್ತಾ ಹೋದನು.

ಒಂದೆರಡು ಗಳಿಗೆಯ ಮೇಲೆ ದೇವಕಿಯು ಬಂದು, ಅಂಬಾಬಾಯಿಯೊಡನೆ, "ಅಮ್ಮಾ, ದೇವರ ದಯೆಯಿಂದ ಹೇಗೂ ಕೆಲಸವೆಲ್ಲ ನೆಟ್ಟಗಾಯಿತು; ಇನ್ನು ದೊಡ್ಡ ಮಾತಲ್ಲ. ನನಗೆ ಮಾತ್ರ ಈ ನಂಬರಿನ ಸಂಬಂಧ ಯಾವ ಕೆಲಸಕ್ಕೂ ಹೋಗುವುದಕ್ಕೆ ಕೈಲಾಗದೆ ಹಾರ್ವರ ಕೇರಿಯಲ್ಲಿ ಸುಬ್ಬಣ್ಣ ಭಟ್ಟರ ಮಗಳು ಪೆದ್ದಮ್ಮ ಎಂಬ ಎಳೇ ಪ್ರಾಯದ ವಿಧವೆಗೆ ಗ್ರಹಚಾರ ವಶದಿಂದ ಗರ್ಭ ಬಂದು ನಾಲ್ಕೈದು ತಿಂಗಳಾಗಲು ಅದಕ್ಕೇನಾದರೂ ಉಪಾಯ ಮಾಡಿಸುವುದಕ್ಕೋಸ್ಕರ ನಾನಿದ್ದಲ್ಲಿಗೆ ಒಂದರ ಮೇಲೊಂದು ಜನ ಬಂದಿದ್ದರೂ ನಮ್ಮ ನಂಬರವೇ ತೀರದೆ, 'ಇದ್ದ ಮಕ್ಕಳಿಗೆ ಗಂಜಿ ಇಲ್ಲ, ಇನ್ನೊಂದು ಕೊಡೊ ಸದಾಶಿವಾ' ಎಂಬ ಹಾಗೆ, ಒಂದರಲ್ಲೇ ಕಷ್ಟಪಡುತ್ತಿರುವಾಗ ಇನ್ನೊಂದಕ್ಕೆ ಕೈಯೊಡ್ಡುವುದಕ್ಕೆ ಮನಸ್ಸೊಗ್ಗದೆ ಈ ನಂಬರು ತೀರಲೆಂದು ಹೇಳಿ ಕಳುಹಿಸಿದ್ದೆ. ಈ ಹೊತ್ತು ಮಧ್ಯಾಹ್ನದ ಸಮಯದಲ್ಲಿ ಪುನಃ ಜನ ಬಂದು, ನಾನಲ್ಲಿಗೆ ಹೋಗಲೇಬೇಕೆಂದು ಮುಷ್ಕರ ಹಿಡಿಯಲು, ಆ ರಗಳೆಯನ್ನು ತೀರಿಸಿ ಬರೋಣವೆಂದು ಅಲ್ಲಿಗೆ ಹೋಗಿ, ಐದುನಿಮಿಷಗಳೊಳಗೆ ಕೆಲಸ ನೆಟ್ಟಗೆ ಮಾಡಿಕೊಟ್ಟು ಬಂದೆನು. ನನಗೆ ಸಿಕ್ಕಿದ ಪ್ರತಿಫಲವೇನೆಂದು ಕೇಳುತ್ತೀರಾ? 'ಅಲ್ಲಿಗಿಲ್ಲ, ಎಲ್ಲಿಗೋ ಒಂದು ತಾಳಿ' ಎಂಬ ಗಾದೆಯಂತೆ, ಇಕ್ಕೊಳ್ಳಿ, ಇದೊಂದು ಕತ್ರಿ ಹೂವು! ಒಂದು ಕಾಸಿನ ಚಿನ್ನಾಭರಣವಾದರೂ ಮೈಮೇಲಿಲ್ಲದವಳಾದ ನನಗೆ ಇದು ಏತರ ಸಂಭ್ರಮಕ್ಕೆ? ಇದಕ್ಕೆ ನಾಲ್ಕೈದು ರುಪಾಯಿ ಕ್ರಯವಿರಬಹುದೇನೊ. ಊರಲ್ಲಿ ಎಲ್ಲರೂ ನಿಮ್ಮಂತೇ ಕೊಡುಗೈಯುಳ್ಳವರೆಂದು ತಿಳಿಯುತ್ತೀರಾ? ರಾಯರೆಲ್ಲಿ?" ಎಂದು ಕೇಳಲು, ಅಂಬಾಬಾಯಿಯು ಗಂಡನ ಬಳಿಗೆ ಹೋಗಿ, "ಕೇಳಿದಿರೇನು? ದೇವಕಿಯು ಚಕ್ಕಂದ ಮಾತನಾಡಿ, ಏನಾದರೂ ಎಬ್ಬಿಸಿಹಾಕಲು ಬಂದಿದ್ದಾಳೆ. ನಂಬರು ತೀರಿದ ಮೇಲೆ ಕೇಳಿ ಕೇಳಿದವರಿಗೆ ನಾವು ಹಣ

ಕೊಡುತ್ತಾ ಬಂದರೆ, ಸಾಗರದಲ್ಲಿರುವ ದ್ರವ್ಯ ತಾನೇ ಸಾಕಾಗದೆ ಹೋಗುವುದು. ತಮ್ಮನ್ನು ಕೇಳುತ್ತಿದ್ದಾಳೆ. ತಾವು ಕೆಲವು ಸವಿಮಾತುಗಳಿಂದವಳನ್ನು ಮರುಳುಗೊಳಿಸಿ ಕಳುಹಿಸಿಬಿಡಬೇಕಷ್ಟೆ" ಎಂದಳು. ಭೀಮರಾಯನು ಎದ್ದು ಹೋಗಿ, "ಓಹೋ! ದೇವಕಿ! ಕ್ಷೇಮವೇ? ನಿನ್ನನ್ನು ನಾನು ಎಂದಾದರೂ ಮರೆಯುವ ಮಾತಿದೆಯೇ? ನಿನಗೆ ನಾನು ಕೊಟ್ಟ ಮಾತನ್ನು ಚೆನ್ನಾಗಿ ಜ್ಞಾಪಕದಲ್ಲಿಟ್ಟುಕೊಂಡಿದ್ದೇನೆ– ಈಗಲೇ ಆ ವಿಷಯದಲ್ಲಿ ಪ್ರವರ್ತಿಸಿದರೆ, ಊರಲ್ಲಿ ದೊಡ್ಡ ಪುಕಾರುಂಟಾಗುವುದಲ್ಲವೇ? ಒಂದೆರಡು ತಿಂಗಳಿನ ನಂತರ ನಿನ್ನ ಕೆಲಸವೆಲ್ಲವನ್ನೂ ಠೀಕ್ ಮಾಡಿಕೊಡುತ್ತೇನೆ. ಬೇರೆ ವಿಶೇಷವೇನಿಲ್ಲದಿದ್ದರೆ ಈಗ ಹೋಗು. ನಿತ್ಯನಿಯಮಗಳಿಗೆ ಸಮಯವಾಯಿತು" ಎನಲು, "ಹಾಗಾಗಲಿ, ಸ್ವಾಮೀ" ಎಂದು ಹೇಳಿ ಅವಳು ಹೊರಟುಹೋದಳು. ಭೀಮರಾಯನು ಅಂಬಾಬಾಯಿಯ ಹತ್ತಿರ "ಪ್ರಿಯಳೇ, ಹೇಗೆ ಉಪಾಯ?" ಎಂದು ಕೇಳಲು, "ಚಲೋದಾಯಿತು, ಮುಂದೂ ನಾವು ಹೀಗೆಯೇ ನಡಕೊಳ್ಳಬೇಕು" ಎಂದಳು.

## ೧೬

ಆ ತರುವಾಯ ದಿನಂಪ್ರತಿಯೂ ಭೀಮರಾಯನ ಬಂಧುಬಾಂಧವರೂ ನೆಂಟರಿಷ್ಟರೂ ಗುರುತು ಪರಿಚಯದವರೂ ಅವನಿಂದುಪಕಾರ ಹೊಂದಿದ ಗಿರಾಕಿಗಳೂ ಅವನಲ್ಲಿಗೆ ಬರುತ್ತಾ ಹೋಗುತ್ತಾ, ಸುಖದುಃಖಗಳನ್ನು ಮಾತನಾಡುತ್ತಾ, ಮೊಕದ್ದಮೆಯಲ್ಲಿ ಜಯಹೊಂದಿದ್ದಕ್ಕಾಗಿ ಅವನನ್ನು "ಸತ್ಯವೇ ಜಯ! ಸತ್ಯವೇ ಜಯ"ವೆಂದು ಹೊಗಳುತ್ತಾ, ಊಟ ಉಪಚಾರ ಫಲಾಹಾರಗಳೂ ಯಕ್ಷಗಾನ ಪ್ರಸಂಗಗಳೂ ನಡೆಯುತ್ತಾ ಆ ವಾರವು ಕಳೆದುಹೋಗಿ, ಸೋಮವಾರ ದಿವಸ ಶ್ರೀ ಮಹಾಲಿಂಗೇಶ್ವರ ದೇವಸ್ಥಾನದಲ್ಲಿ ಮಹಾರುದ್ರ, ವೇದಪಾರಾಯಣ, ಸಹಸ್ರಭೋಜನ, ರಾತ್ರಿಮಹೋತ್ಸವ ಮುಂತಾದ ಸಂಭ್ರಮವು ತೊಡಗಿತು. ದೇವಸ್ಥಾನದೊಳಗೆ ಬ್ರಾಹ್ಮಣರು ಒಂದೊಂದು ಸಾಲಿನಲ್ಲಿ ಹತ್ತು ಮಂದಿಯಾಗಿ ಹತ್ತು ಸಾಲಿನಲ್ಲಿ ಕುಳಿತು, ಎಲ್ಲವರ ಧ್ವನಿಗಳೂ ಏಕಕಂಠವಾಗಿ ಕೇಳಿಸುವ ಹಾಗೆ ಸ್ವರಯುಕ್ತವಾಗಿ ರುದ್ರ ಚಮಕವನ್ನು ಹೇಳುತ್ತಾ, ಗರ್ಭಗೃಹದೊಳಗೆ ಐದಾರು ಮಂದಿ ಬ್ರಾಹ್ಮಣರು ಸಂಕೋಲೆಗಳಿಂದ ತೂಗಿಸಲ್ಪಟ್ಟ ಧಾರಾಪಾತ್ರದಿಂದಲೂ ಮಹಿಷ ಶೃಂಗಗಳಿಂದಲೂ ಅಭಿಷೇಕ ಮಾಡುತ್ತಾ, ಒಬ್ಬನು ಗಂಟೆಯ ಅಂಚಿಗೆ ಅದರ ನಾಲಿಗೆಯನ್ನು ಮೆಲ್ಲನೆ ಉಜ್ಜಿ ಓಂ ಓಂ ಎಂದು ಕೇಳಿಸುವಂತೆ ಓಂಕಾರವನ್ನು ಹೊರಡಿಸುತ್ತಾ, ಹುಡುಗರು ಗಂಟೆ ಜಾಗಟೆಗಳನ್ನು ಬಾರಿಸುತ್ತಾ, ಹೊರ ಅಂಬಲದಲ್ಲಿ ರಾಮ ಶೇರುಗಾರನು ಗಿಡಿಬಿಡಿ, ಸಮ್ಮೇಳ, ಭೇರಿ, ಉಡುಕು, ಚಂದ್ರವಾದ್ಯ, ಚಕ್ರತಾಳ, ಶ್ರುತಿ, ಕೊಂಬು, ಕಹಳೆ ಇವೇ ಮುಂತಾದ ಸಾಹಿತ್ಯ ಸಹಕಾರಗಳೊಡನೆ ಶಂಕರಾಭರಣರಾಗ ತಾಳ ತ್ರಿವಿಡೆಯಲ್ಲಿ ಮನೋರಂಜಕವಾದ ಹಾಡುಗಳನ್ನು ನುಡಿಸುತ್ತಾ, ಭೀಮರಾಯನು ಈ ಮಹೋತ್ಸವ

ಕ್ಕೋಸ್ಕರವೆಂದು ಹೊಸತಾಗಿ ಮಾಡಿಸಿದ 'ಜಯಭೇರಿ' ಎಂಬ ಹೆಸರಿಟ್ಟ ನಗಾರಿಯನ್ನು ಸೋಮಯ್ಯನು ಅಂಬಲದ ಹೊರಗೆ ರಾಜಮಾರ್ಗದ ಬದಿಯಲ್ಲಿ ನಾಲ್ಕು ಚಕ್ರಗಳ ಒಂದು ಬಂಡಿಯಲ್ಲಿ ಏರಿಸಿ, ಕೋಲುಕೊಳ್ಳಿಗಳಿಂದ ಬಡೆದು ಬಾರಿಸುತ್ತಾ, ಒಳಗೆ ಅರ್ಚಕರೂ ಹುಡುಗರೂ ಹತ್ತು ನಿಮಿಷಗಳಿಗೊಮ್ಮೆ "ಪಾರ್ವತೀಪತೇ ಹರಹರ ಮಹಾದೇವ" ಎಂದು ನಾಮಸ್ಮರಣೆಯನ್ನು ಘೋಷಿಸುತ್ತಾ, ಅಷ್ಟಿಷ್ಟೆಂದು ಹೇಳಕೂಡದಷ್ಟು ವೈಭವದಿಂದಲೂ, ಅಟ್ಟಹಾಸದಿಂದಲೂ ಮಹಾರುದ್ರಾಭಿಷೇಕವು ನಡೆಯುತ್ತಿರುವಾಗ, ಗರ್ಭಗೃಹದಲ್ಲಿ ಗಂಭೀರವಾದ ಸಿಂಹನಾದವು ತುಂಬಿಕೊಂಡಿತು. ಇತ್ತಲಾಗೆ ಚಂದ್ರಶಾಲೆಯಲ್ಲಿ ಬ್ರಾಹ್ಮಣರು ಋಗ್ಯಜುಸ್ಸಾಮ ವೇದಗಳನ್ನು ಸುಸ್ವರಯುಕ್ತವಾಗಿ ಉನ್ನತ ಧ್ವನಿಯಿಂದ ಪಾರಾಯಣ ಮಾಡಿದರು. ಸೂರ್ಯನು ಯಾಮ್ಯೋತ್ತರ ವೃತ್ತವನ್ನು ಪ್ರವೇಶಿಸಲಿಕ್ಕಿರುವಾಗ ಅಭಿಷೇಕವು ಸಂಪೂರ್ಣವಾಗಿ, ನೈವೇದ್ಯ, ಮಂಗಳಾರತಿ, ಮಂತ್ರಪುಷ್ಪ, ಪ್ರದಕ್ಷಿಣೆ ಇವೇ ಮುಂತಾದ ಷೋಡಶೋಪಚಾರಗಳು ಸಾಂಗವಾಗಿ ನಡೆದವು. ಆ ಬಳಿಕ ಭೋಜನಕ್ಕೆ ಎಲೆಗಳನ್ನಿಟ್ಟು, ಪಕ್ವಾನ್ನಗಳು, ಬಗೆಬಗೆಯ ಮೇಲೋಗರಗಳು, ಪಂಚಭಕ್ಷ್ಯ ಪರಮಾನ್ನಗಳು, ಮಿಠಾಯಿ ಲಡ್ಡುಗಳು, ಬದನೇಕಾಯಿಯ ಬಜ್ಜೆಗಳು ಇವೇ ಮೊದಲಾದ ಸಕಲ ಭೋಜನ ಪದಾರ್ಥಗಳನ್ನು ಬಡಿಸಿ, ಭೀಮರಾಯನು ಪೀತಾಂಬರಧಾರಿಯಾಗಿ, ಸೊಂಟದಲ್ಲಿ ಅಪರಂಜಿ ಬಣ್ಣದ ಚಿನ್ನದ ಜೋಡಿ ನೇವಳವನ್ನು ಧರಿಸಿ, ಎಡಗೈಯಲ್ಲಿ ತುಪ್ಪದ ಪಾತ್ರ, ಬಲಗೈಯಲ್ಲಿ ಚಾಂದಿಬೆಳ್ಳಿಯ ಚಮಚವನ್ನು ಹಿಡಿದುಕೊಂಡು, ಒಂದೊಂದೆಲೆಯ ಮೇಲೆ ಎರಡೆರಡು ಚಮಚ ತುಪ್ಪವನ್ನು ಸುರಿಸುತ್ತಾ, ಸೊಂಟದಲ್ಲಿ ಸಡಿಲಾಗಿ ಕೆಳಗಿಳಿಯುತ್ತಿದ್ದ ನೇವಳವನ್ನು ಆಗಾಗ್ಗೆ ಮೇಲಕ್ಕೆಳೆದುಕೊಳ್ಳುತ್ತಾ, ಎಲ್ಲಾ ಎಲೆಗಳ ಮೇಲೂ ತುಪ್ಪವನ್ನು ಬಡಿಸಿ ಆದ ತರುವಾಯ ಹಸ್ತೋದಕವನ್ನು ಕೊಟ್ಟು, "ಪಾರ್ವತೀಪತೇ ಹರಹರ ಮಹಾದೇವ" ಎಂದು ನಾಮಸ್ಮರಣೆ ಮಾಡಲು, ಎಲ್ಲರೂ ಊಟಮಾಡಲಾರಂಭಿಸಿದರು. ಅಲ್ಲಿ ಕೂಡಿದ ಜನರಲ್ಲಿ ಕೆಲವರು 'ಕುಲ ಕಂಟಕ'ರಾದ ಎಫ್.ಎ., ಬಿ.ಎ.ಗಳು ಇದ್ದರು. ಅವರಲ್ಲಿ ಒಬ್ಬನು ಇನ್ನೊಬ್ಬನೊಡನೆ, "Grand dinner" "ದೊಡ್ಡ ಊಟ" ಅಲ್ಲವೇ?

"Very! Very grand!" "ಬಹು, ಬಹು ದೊಡ್ಡದು!"

"ಇದು ಯಾವ ಲೆಕ್ಕಕ್ಕೆಂದು ಬಲ್ಲೆಯಷ್ಟೇ?"

"ಜನಜನಿತ ತಿಳಿದಿದೆ."

"Take care please. Look, there he comes." "ಜತನ! ಇಗೋ ಬರುತ್ತಾನೆ." ಅನ್ನುವಾಗ ಭೀಮರಾಯನು ಆ ಸಾಲಿಗೆ ಬಂದು, ಒಬ್ಬ ಭಟ್ಟನ ಎಲೆಯ ಮೇಲೆ ಬದನೇಕಾಯಿಯ ಬಜ್ಜೆಗಳಿಲ್ಲದ್ದನ್ನು ಕಂಡುಕೊಂಡು, "ಶ್ಯಾಮಾ, ಏನೆಲೊ? ಈ ಎಲೆಯಲ್ಲಿ ಬಜ್ಜೆಗಳಿಲ್ಲ. ನೀವೆಲ್ಲರೂ ಪಡಪೋಸಿ ಮಾಡುತ್ತೀರಾ?" ಎಂದು ಗದ್ದಲಮಾಡಲು, ಶ್ಯಾಮನು ನಾಲ್ಕು ಬಜ್ಜೆಗಳನ್ನು ಕೂಡಲೇ ತಂದು ಬಡಿಸಿ, "ಬಹು ಜನರು ಕೂಡಿರುವಲ್ಲಿ ಏನಾದರೂ ಸ್ವಲ್ಪ ಹೆಚ್ಚು ಕಡಿಮೆ ಬರುವುದು ಸಹಜವೇ, ಕ್ಷಮಿಸಬೇಕು" ಎಂದನು. ಆಗ

ಭೀಮರಾಯನು, “ಇಗೋ, ಈ ನೇವಳವನ್ನು ರವಷ್ಟು ಮೇಲಕ್ಕೆತ್ತಿ ಸರಿಪಡಿಸು, ನನ್ನ ಕೈಗಳಿಗೆ ತುಪ್ಪ ಅಂಟಿದೆ. ಅವುಗಳಿಂದ ಮುಟ್ಟಿದರೆ, ಪೀತಾಂಬರವು ಮಾಸುವುದು” ಎಂದು ಹೇಳಿ ಶ್ಯಾಮನಿಂದ ನೇವಳವನ್ನು ಸರಿಮಾಡಿಸಿಕೊಂಡು, ಬೇರೆ ಸಾಲುಗಳನ್ನು ನೋಡಲು ಹೋದ ಮೇಲೆ, ಇನ್ನೊಬ್ಬ ಬಿ.ಎ.ಯು ಆ ಭಟ್ಟನ ಕಡೆಗೆ ಕಣ್ಣಾಡಿಸಿ, ಮತ್ತೊಬ್ಬ ಬಿ.ಎ.ಯ ಸಂಗಡ,

“His days are numbered, I'm afraid.” “ಅವನ ಕಾಲ ಬಂದಿದೇನೋ.”

“How? He is not Sundar Rau?” “ಹೇಗೆ? ಆತನು ಸುಂದರರಾಯನಲ್ಲವಷ್ಟೆ?”

ಸುಂದರರಾಯನೆಂಬ ಶಬ್ದವು ಕಿವಿಗೆ ಬಿದ್ದ ಒಡನೇ ಭೀಮರಾಯನು, ‘ಇದೇನು ಹೊಸ ಪೀಕಲಾಟ? ‘ರಾಮೇಶ್ವರ ಹೋದರೂ ಶನೈಶ್ವರ ಬಿಡಾ’ ಎಂದ ಹಾಗೆ, ಇನ್ನೂ ಸುಂದರರಾಯನ ಸುದ್ದಿ! ನೋಡೋಣ’ವೆಂದು ಮನಸ್ಸಿನಲ್ಲೇ ಅಂದುಕೊಂಡು, ಅವರು ಮಾತನಾಡುತ್ತಿರುವಲ್ಲಿಗೆ ಬಂದು ಒಬ್ಬನೊಡನೆ, “ಏನಿರೈಯಾ? ಎಂತಹ ಪ್ರಸ್ತಾಪ?” ಎಂದು ಕೇಳಿದನು. ಅದಕ್ಕವನು ಉತ್ತರವೇನೂ ಕೊಡದೆ, ಒಂದು ಬಜ್ಜೆಯನ್ನು ಎಲೆಯಿಂದ ತೆಗೆದು ಕೈಯಲ್ಲಿ ಹಿಡಿದು, ಮಗುಚಿ ಮಗುಚಿ ನೋಡಿ, “ಈ ಬಜ್ಜೆಗಳು ಇಲ್ಲಿ ಮಾಡಲ್ಪಟ್ಟವುಗಳೇನೋ” ಎಂದು ಹೇಳಿ ಮತ್ತೊಬ್ಬನಿಗೆ ತೋರಿಸಿದನು. ಭೀಮರಾಯನು ಇನ್ನು ಇವನೊಂದಿಗೆ ಮಾತನಾಡುವುದು ಸಲ್ಲದೆಂದು ತಿಳಿದುಕೊಂಡು, ಅಲ್ಲಿಂದ ಮರಳಿ ಹೋಗುವಷ್ಟರಲ್ಲಿ, “ಪಾರ್ವತೀಪತೇ ಹರಹರ ಮಹಾದೇವ” ಎಂಬ ಸ್ಮರಣೆಯ ನಿನಾದವು ಹುಟ್ಟಿದ್ದಲ್ಲದೆ, “ಚಿತ್ರಾನ್ನ!” “ಬಜ್ಜೆ!” “ಲಡ್ಡು!” “ಪರಮಾನ್ನ!” “ಹುರುಳೀ ತಾಳದ!” ಎಂದು ಹೀಗೆಲ್ಲ ಬಡಿಸುತ್ತಿರುವವರು ಕೂಗತೊಡಗಿದರು. ಭೀಮರಾಯನು ಆ ಸಾಲುಗಳಿಗೆ ಹೋಗಿ, ಬೇಕಾದವರಿಗೆಲ್ಲ ಉಪಚಾರ ಮಾಡುತ್ತಾ, ತಿನ್ನುವುದಕ್ಕೆ ಒತ್ತಾಯಮಾಡುತ್ತಾ ಇದ್ದು, ಸ್ವಲ್ಪ ಸಮಯದ ಮೇಲೆ ಭೋಜನವು ಮುಗಿಯಿತು.

ಆ ತರುವಾಯ ರಾತ್ರಿ ಎಂಟು ಗಂಟೆಯಾಗುತ್ತಲೇ ಹಿಲಾಲ್ ಬಳಾಲ್ ತಟ್ಟೀಬೆಳಕುಗಳೂ, ಹಗಲುಬತ್ತಿ, ಚಂದ್ರಜ್ಯೋತಿ, ಬಿರುಸು, ಮಹತಾಪು, ಜೇನುಂಡೆ, ಆಕಾಶಬಾಣ, ಚಕ್ರಬಾಣ, ವಾಯುವಿಮಾನ ಇವೇ ಮುಂತಾದ ಬಾಣಬಿರುಸುಗಳೂ, ಮುಂಭಾಗದಲ್ಲಿ ರಾಜಾಮಣಿ ಭಾಮಾಮಣಿ ಇವರ ಮೇಳ, ಮಧ್ಯದಲ್ಲಿ ಲೂಪಿ ಮೀನಾಕ್ಷಿ ಇವರ ಮೇಳ, ದೇವರ ವಾಹನಕ್ಕೆ ಸಮೀಪಿಸಿ ಎದಿರಿನಲ್ಲೇ ಸಂಜೀವಿ ಕಸ್ತೂರಿ ಇವರ ಮೇಳ, ಹೀಗೆ ನರ್ತನ ಸ್ತ್ರೀಯರ ಮೂರು ಮೇಳಗಳೂ, ಚೀನಿವಾದ್ಯ, ರಾಮ ಶೇರುಗಾರ, ಕುಪ್ಪು ಶೇರುಗಾರ ಇವರ ಬಜಂತ್ರಿ ಮೇಳಗಳೂ ಇವೇ ಮುಂತಾದ ಸಕಲ ಸಂಭ್ರಮಗಳಿಂದ ಯುಕ್ತವಾದ ಉತ್ಸವವು ಹೊರಟು, ಎಲ್ಲಾ ಕೇರಿಗಳಲ್ಲಿಯೂ ಮೆರವಣಿಗೆಯಾಗಿ, ಸುಮಾರು ಮಧ್ಯರಾತ್ರಿಯ ಸಮಯದಲ್ಲಿ ತಿರಿಗಿ ದೇವಸ್ಥಾನಕ್ಕೆ ಬಂದು, ದೇವರು ಗರ್ಭಗೃಹವನ್ನು ಪ್ರವೇಶಿಸಲು, ಮಂಗಳಾರತಿ ಅಷ್ಟಾವಧಾನ ಸೇವೆಗಳೆಲ್ಲ ನಡೆದವು. ಆ ಬಳಿಕ ಭೀಮರಾಯನು

ಪತ್ನೀಸಮೇತನಾಗಿ ದೇವರ ಮುಂದುಗಡೆಯಲ್ಲಿ ನಿಂತು, ವಜ್ರ, ಮಾಣಿಕ್ಯ, ಮರಕತ, ಪದ್ಮರಾಗ ಮುಂತಾದ ರತ್ನದುಂಗುರಗಳನ್ನು ಧರಿಸಿದ ಕೈಗಳನ್ನು ಝುಗ್ಗೆಂದು ಮೇಲಕ್ಕೆತ್ತಿ ಜೋಡಿಸಿ, "ಸ್ವಾಮಿನ್! ನಿನ್ನ ಅಮಿತವಾದ ದಯೆಯಿಂದಲೂ ನಮ್ಮ ಸತ್ಯದಿಂದಲೂ ಹೇಗೂ ಗಂಡದಿಂದ ಪಾರಾದೆವು; ಮುಂದೂ ನಿನ್ನ ದಯೆಯೂ, ನಮ್ಮ ಸತ್ಯವೂ ಎಲ್ಲಾ ಕಷ್ಟಗಳಿಂದ ನಮ್ಮನ್ನು ತಪ್ಪಿಸಿ, ನಮಗುತ್ತರೋತ್ತರವನ್ನು ಮಾಡಲಿ!" ಎಂದು ಪ್ರಾರ್ಥಿಸಿ, ಪಂಚಕಜ್ಜಾಯ ಪನಿವಾರಗಳನ್ನು ಕೂಡಿದವರಿಗೆ ಹಂಚಿಸಿ, ಪತ್ನಿಪರಿವಾರ ಸಮೇತ ಮನೆಗೆ ತೆರಳಿದನು.

## ೧೭

ಕೆಲವು ದಿವಸಗಳು ಕಳೆದವು. ನರಸಿಂಹ ಶಾಸ್ತ್ರಿಯು ಪಕ್ಷವಾತದ ರೋಗದಿಂದ ಮಲಗಿದ್ದಲ್ಲೇ ಆದನು. ಯಾವ ವೈದ್ಯನಿಂದ ಮಾಡಿಸಿದ ಚಿಕಿತ್ಸೆಯೂ ಪ್ರಯೋಜನಕಾರಿಯಾಗದೆ ಇನ್ನು ತನ್ನ ದಿನವು ಸಮೀಪಿಸಿ ಬಂತೆಂದು ತಿಳಿದುಕೊಂಡು, ತನ್ನ ಸ್ಥಿರಚರ ಸೊತ್ತುಗಳ ಮುಂದಣ ವಿನಿಯೋಗವನ್ನು ಕುರಿತು ಮರಣಶಾಸನವನ್ನು ಬರೆಯಿಸಿ ರಿಜಿಸ್ತ್ರಿ ಮಾಡಿಸಿ ಕೆಲವು ದಿನಗಳಲ್ಲೇ ಕಾಲಾಧೀನನಾದನು. ಆ ತರುವಾಯ ಭೀಮರಾಯನು ಅಂಬಾಬಾಯಿಯ ಸಂಗಡ ಆಲೋಚಿಸಿ, ಅವಳ ಸಮ್ಮತಿಯನ್ನು ಪಡೆದು, ಸ್ವಂತ ವ್ಯಾಪಾರವನ್ನೇ ನಡಿಸಲಾರಂಭಿಸಿದನು. ದೇವರ ಪೂಜೆ, ಸಂತರ್ಪಣೆ, ಯಕ್ಷಗಾನ ಪ್ರಸಂಗವೇ ಮುಂತಾದ ಸತ್ಕರ್ಮಗಳನ್ನು ಮೊದಲಿಗಿಂತಲೂ ಇನ್ನಷ್ಟು ಶ್ರದ್ಧೆಯಿಂದಲೂ ಭಕ್ತಿಯಿಂದಲೂ ನಡೆಯಿಸುತ್ತಾ ಬಂದನು. ನಾಲ್ಕೈದು ವರುಷಗಳು ಕಳೆದವು. ಅವನ ಕೀರ್ತಿಯು ಎಲ್ಲಾ ಕಡೆಗಳಲ್ಲಿಯೂ ಸ್ವಜಾತಿ ಗುರುಮಠದವರೆಗೂ ಮೆರೆಯಿತು.

ಈ ಸಮಯದಲ್ಲಿ ಕಮಲಪುರದಲ್ಲಿ ಯೌವನಸ್ಥರೆಲ್ಲರೂ ಇಂಗ್ರೇಜಿ ಎಂಬ ಮ್ಲೇಂಛ ಭಾಷೆಯನ್ನು ಕಲಿತು ವರ್ಣಾಶ್ರಮ ಧರ್ಮ ಕರ್ಮಗಳನ್ನು ಕೈಗೊಳ್ಳದೆ ಕುಲಭ್ರಷ್ಟರಾಗಿ ವಿಲಾಯತಿಗೆ ಹೋಗುವುದು ಮುಂತಾದ ಅಧರ್ಮ ಕಾರ್ಯಗಳಲ್ಲಿ ಪ್ರವೃತ್ತರಾಗಿ, ವಿಧವಾ ವಿವಾಹ, ಯುವತಿ ವಿವಾಹ ಮುಂತಾದ ಅಘೋರ ಕರ್ಮಗಳನ್ನು ಮಾಡಲು ತೊಡಗಿ, ಗುರುದೇವರಲ್ಲಿ ಲೇಶಾಂಶವಾದರೂ ಭಯಭಕ್ತಿಯಿಲ್ಲದೆ, ಗುರುಮಠಕ್ಕೆ ಕೊಡಬೇಕಾದ ವರುಷಾಸನ ವಂತಿಗೆ ವರಾಡಗಳನ್ನು ಕೊಡದೆ, ಅಪಹರಿಸಿ ತಿಂದು, ಕರೆದು ಕೇಳಿದರೆ, ಇಂಗ್ರೇಜಿ ಶಬ್ದಗಳನ್ನು ಮಧ್ಯಮಧ್ಯದಲ್ಲಿ ಸೇರಿಸಿ, ಅರ್ಥವಿಲ್ಲದ ಹೊಲಸು ಮಾತುಗಳನ್ನಾಡಿ ನಿರ್ಭೀತರಾಗಿ ನಡೆದುಕೊಂಡು, ಗುರುಸಂಸ್ಥಾನಕ್ಕೂ ಜಾತಿಗೂ ಗಂಡಾಂತರ ತರಿಸುವ ದ್ರೋಹಾಲೋಚನೆಯನ್ನು ಮಾಡಿ, ದೊಡ್ಡ ತಾರುಮಾರನ್ನು ಹುಟ್ಟಿಸಿದುದರಿಂದ ಜಾತಿಯವರ ಸಭೆಗೆ ಯೋಗ್ಯವಾದ ಒಬ್ಬ ಧರ್ಮವಿಚಾರಕನನ್ನು ನೇಮಿಸದಿದ್ದರೆ, ಮುಂದೆ ಸಂಸ್ಥಾನದ ಸ್ಥಿರತೆಗೂ ಶಿಷ್ಯವರ್ಗದ ಪರಿಣಾಮಕ್ಕೂ ಬಾಧಕ ಬಾರದಿರದೆಂದು ಕಂಡುಕೊಂಡು ಶ್ರೀ

ಗುರುಗಳು ಈ ವಿದ್ಯಮಾನವನ್ನು ಕುರಿತು ಮನಸ್ಸಿನಲ್ಲೇ ಆಲೋಚಿಸುತ್ತಾ ಚಾತುರ್ಮಾಸ ತೀರಿದೊಡನೆ ಕಮಲಪುರಕ್ಕೆ ಸವಾರಿ ತೆರಳಿ ಬಂದರು. ಸವಾರಿಯು ನಗರಕ್ಕೆ ಒಂದೆರಡು ಮೈಲು ಸಮೀಪದಲ್ಲಿ ಬಂದುಮುಟ್ಟಿದ ವರ್ತಮಾನವನ್ನು ತಿಳಿದಕೂಡಲೇ ಭೀಮರಾಯನು ಕೆಲವು ಮಂದಿ ಸ್ನೇಹಿತರೊಡನೆ ಮುಂದುವರಿಸಿ ಹೋಗಿ, ಶ್ರೀ ಗುರುಗಳಿಗೆ ಪಾದಾಕ್ರಾಂತನಾಗಿ, ಎದ್ದೇಳೆಂದು ಅಪ್ಪಣೆ ಸಿಕ್ಕಿದ ಮೇಲೆ ನಿಂತು ಕೈಜೋಡಿಸಿ, “ಚರಣಾರವಿಂದವನ್ನು ಕಂಡು ಧನ್ಯನಾದೆನು, ಸಕಲ ಜನ್ಮಗಳ ಪಾಪವೂ ಪರಿಹಾರವಾಯಿತು ಕಿಂಕರನಾದ ನನ್ನಿಂದೇನಾಗ ಬೇಕೆಂದಪ್ಪಣೆಯಾಗುವುದೋ ಅದನ್ನು ಶ್ರೀಪಾದ ಕಟಾಕ್ಷದ ದಯದಿಂದ ಪೂರಯಿಸುವುದಕ್ಕೆ ತ್ರಿಕರಣಶುದ್ಧವಾಗಿ ಪ್ರಯತ್ನಿಸುವೆನು,” ಎನಲು ಶ್ರೀಗುರುಗಳು ಅವನನ್ನಾಶೀರ್ವದಿಸಿ, ಬೆಳ್ಳಿಯ ಹರಿವಾಣದಲ್ಲಿ ಫಲ ಮಂತ್ರಾಕ್ಷತೆಯನ್ನು ಕೊಟ್ಟು ಪಾಲಕಿಯನ್ನು ಮುಂದುವರಿಸಿ, ನಗರಕ್ಕೆ ತಲಪಿ ಮಠವನ್ನು ಪ್ರವೇಶಿಸಿ, ಕೃಷ್ಣಾಜಿನದ ಮೇಲೆ ವಿರಾಜಮಾನರಾಗಿ ಆಸೀನರಾಗಲು ಭೀಮರಾಯನು ಪಾದಪೂಜೆ ಮುಂತಾದ ವಿನಿಯೋಗಗಳನ್ನು ತಾನೇ ಸಾಂಗವಾಗಿ ಯಥಾಶಕ್ತಿಯಿಂದ ನಡೆಯಿಸಿದನು. ಶ್ರೀ ಗುರುಗಳು ಅವನ ಭಕ್ತಿಗೆ ಮೆಚ್ಚಿ ಪ್ರಸನ್ನರಾಗಿ ಅಲ್ಲಿಯ ಸಭೆಗೆ ಯೋಗ್ಯನಾದ ಧರ್ಮವಿಚಾರಕನು ಇವನಲ್ಲದೆ ಬೇರೆ ಯಾರೂ ದೊರಕುವುದು ದುರ್ಲಭವೆಂದಾಲೋಚಿಸಿ, ಆ ದಿವಸ ರಾತ್ರಿ ಪೂಜೆ ಮುಂತಾದ ನಿಯಮಗಳು ತೀರಿದ ತರುವಾಯ ಶಿಷ್ಯವರ್ಗದವರಲ್ಲಿ ಮುಖ್ಯರಾದವರೊಡನೆ ಮಾರಣೆ ದಿವಸ ಒಂದು ಸಭೆ ನೆರೆಯಿಸಬೇಕೆಂದು ಅಪ್ಪಣೆಕೊಡಲು ಅವರು ತಥಾಸ್ತು ಎಂದು ಕೂಡಿದವರಿಗೆಲ್ಲ ತತ್‌ಕ್ಷಣವೇ ತಿಳುಹಿಸಿದರು. ಮಾರಣೆ ದಿನ ಭೀಮರಾಯನು ಮಹಾ ವೈಭವಗಳೊಡನೆ ಭಿಕ್ಷೆಯನ್ನು ಮಾಡಿಸಿ, ಶ್ರೀ ಗುರುಗಳಿಗೆ ಒಂದು ಸಾವಿರ ಕಂಠೀರಾಯ ವರಹಗಳಿಂದ ಕನಕಾಭೀಷೇಕವನ್ನು ಮಾಡಿ ಅಂಬಾಬಾಯಿಗೆ ಸಂತಾನ ಗೋಪಾಲ ಮಂತ್ರೋಪದೇಶವನ್ನು ಕೊಡಿಸಿದನು. ಭಿಕ್ಷೆಯು ತೀರಿದ ನಂತರ ಗೃಹಸ್ಥರು ಸಭೆಕೂಡಿದರು. ಶ್ರೀ ಗುರುಗಳು “ಶಿಷ್ಯವರ್ಗದಲ್ಲಿ ಈಗ ನಡೆಯುವ ದುರಾಚಾರಗಳನ್ನು ನಿಲ್ಲಿಸುವುದಕ್ಕೂ, ಗುರುಮಠಕ್ಕೆ ಬರತಕ್ಕ ವರುಷಾಸನ ವಂತಿಗೆವರಾಡಗಳನ್ನು ಸರಿಯಾಗಿ ವಸೂಲು ಮಾಡುವುದಕ್ಕೂ, ಜಾತಿಯ ಸಂಬಂಧವಾದ ಆಚಾರ ವಿಚಾರಗಳನ್ನು ನೋಡುವುದಕ್ಕೂ, ಸಂಸ್ಥಾನವು ಮುಂದೆ ಸ್ಥಿರವಾಗಿ ನಡೆಯುವ ಹಾಗೆ ಶಿಷ್ಯಾಶ್ರಮವನ್ನು ಕೊಡುವುದಕ್ಕೆ ಬೇಕಾದ ದ್ರವ್ಯಸಂಗ್ರಹದ ಚಟ್ಟದಿಟ್ಟಗಳನ್ನು ನೋಡಿಕೊಳ್ಳುವುದಕ್ಕೂ, ದುಷ್ಕರ್ಮಿಗಳ ಭಾಗಕ್ಕೆ ಸೇರದೆ ಎಲ್ಲಾ ವಿಷಯಗಳನ್ನು ಆಗಾಗ್ಗೆ ಸಂಸ್ಥಾನದ ತಿಳುವಳಿಕೆಗೆ ತಂದು ಜಾತಿಯ ಮರ್ಯಾದೆಯನ್ನು ರಕ್ಷಿಸುವುದಕ್ಕೂ ಯೋಗ್ಯನಾದ ಒಬ್ಬ ಧರ್ಮವಿಚಾರಕನನ್ನು ನೇಮಿಸಬೇಕೇಂದಾಲೋಚಿಸಿದ್ದೇನೆ. ಸಭೆಯವರು ಈ ವಿಷಯಗಳನ್ನು ಚೆನ್ನಾಗಿ ಆಲೋಚಿಸಿ, ತಮ್ಮ ಅಭಿಪ್ರಾಯವನ್ನು ಈಗಲೇ ನಮಗೆ ತಿಳುಹಿಸುವುದು” ಎಂದಪ್ಪಣೆಕೊಡಲು, ಗೃಹಸ್ಥರು ಆ ವಿಷಯಗಳನ್ನೆಲ್ಲ ಚೆನ್ನಾಗಿ ಚರ್ಚಿಸಿ, “ಸ್ವಾಮೀ, ಭೀಮರಾಯನಷ್ಟು ಯೋಗ್ಯನಾದ ಮನುಷ್ಯನು ತತ್ಕಾಲ ನಮಗೆ ಯಾರೂ ಕಾಣಿಸುವುದಿಲ್ಲ. ಅವನನ್ನೇ ನೇಮಿಸುವುದು ಯುಕ್ತವೆಂದು ನಾವುಗಳು

ಅಭಿಪ್ರಾಯಪಟ್ಟಿದ್ದೇವೆ. ಇನ್ನು ಶ್ರೀ ಪಾದಂಗಳವರ ಅಪ್ಪಣೆಯನ್ನು ಶಿರಸಾವಹಿಸಿಕೊಳ್ಳುವೆವು” ಎಂದರಿಕೆ ಮಾಡಲು, “ನಮ್ಮ ಅಭಿಪ್ರಾಯವೂ ಅದೇ” ಎಂದು ಪಾರುಪತ್ಯಗಾರನನ್ನು ಕರೆದು, ಭೀಮರಾಯನಿಗೆ ಧರ್ಮವಿಚಾರಕ ಸ್ಥಾನವನ್ನು ಕೊಟ್ಟಿರುವುದಾಗಿ ಈಗಲೇ ನಿರೂಪವನ್ನು ಬರೆಯಬೇಕೆಂದಾಜ್ಞಾಪಿಸಿದ ಪ್ರಕಾರ ಆತನು ತತ್‌ಕ್ಷಣದಲ್ಲೇ ಬರೆದು ಸಹಿಮಾಡಿಸಿದನು. ಆ ತರುವಾಯ ಭೀಮರಾಯನು ರಾತ್ರಿಯ ಪೂಜೆಗೆ ಬೇಕಾದ ಸಕಲ ಸಾಹಿತ್ಯಗಳನ್ನು ಒದಗಿಸಿ ಅಟ್ಟಹಾಸದಿಂದ ಪೂಜೆಯನ್ನು ಮಾಡಿಸಿದನು. ಬ್ರಾಹ್ಮಣರಿಗೆ ದಕ್ಷಿಣೆ ಮುಂತಾದ್ದನ್ನು ಕೊಟ್ಟು ತೃಪ್ತಿಪಡಿಸಿದನು. ಅವರೆಲ್ಲರೂ ಅವನನ್ನು ಕೊಂಡಾಡಿದರು. ಪೂಜಾವಸಾನದಲ್ಲಿ ಶ್ರೀ ಗುರುಗಳು ಭೀಮರಾಯನನ್ನು ಕರೆದು– “ಭೀಮರಾಯನೇ, ನಿನ್ನ ಸೇವೆಗಳಿಗೂ ಭಕ್ತಿಗೂ ಮೆಚ್ಚಿ ನಾವು ಪ್ರಸನ್ನರಾದೆವು. ನಿನ್ನಲ್ಲಿ ಬೇಗನೇ ಪುತ್ರೋತ್ಸವವಾಗುವುದು” ಎಂದು ಆಶೀರ್ವಾದವನ್ನು ಅನುಗ್ರಹಿಸಿ ಫಲಮಂತ್ರಾಕ್ಷತೆಯನ್ನು ಕೊಟ್ಟನಂತರ ಭೀಮರಾಯನು ಕೂಡಿದವರಿಗೆಲ್ಲ ಪಚಡಿ ಪನಿವಾರ ಪಾನಕ ಮುಂತಾದ ಪ್ರಸಾದ ದ್ರವ್ಯಗಳನ್ನು ಹಂಚಿ, ಶ್ರೀ ಗುರುಗಳ ಅಪ್ಪಣೆಯನ್ನು ಪಡೆದು ಪತ್ನಿಪರಿವಾರ ಸಹಿತ ಮರಳಿ ಮನೆಗೆ ಬಂದು ಪ್ರಸಂಗ ಮೊದಲಾದ ನಿತ್ಯನಿಯಮಗಳನ್ನು ಕೈಕೊಂಡನು.

## ೧೮

ಶ್ರೀ ಗುರುಗಳು ಕಮಲಪುರದಲ್ಲಿದ್ದಷ್ಟು ದಿವಸಗಳಲ್ಲಿ ದಿವಸಂಪ್ರತಿಯಲ್ಲೂ ಭೀಮರಾಯನು ತ್ರಿಕಾಲದಲ್ಲೂ ಮಠಕ್ಕೆ ಹೋಗಿ, ಪ್ರಸಾದವನ್ನು ಪಡೆದು ಬರುವುದು, ಭಿಕ್ಷೆ ಪೂಜೆ ಮುಂತಾದ್ದರ ಮೇಲ್ವಿಚಾರವನ್ನು ತೆಗೆದುಕೊಳ್ಳುವುದು, ವಂತಿಗೆ ವರಾಡಗಳ ಪಟ್ಟಿಗಳನ್ನು ಮಾಡಿಸಿ ವಸೂಲಿಯ ಕ್ರಮವನ್ನು ನೋಡುವುದು ಇವೇ ಮುಂತಾದ ಕೆಲಸಗಳನ್ನು ನಡಿಯಿಸುತ್ತಾ ಇರುವಲ್ಲಿ, ತನ್ನ ಸ್ವಂತ ವ್ಯಾಪಾರದ ಉದ್ಯೋಗಕ್ಕೂ ಧರ್ಮವಿಚಾರಕ ಸ್ಥಾನಕ್ಕೊಪ್ಪಿದ ಬರಹಾನ್ನ ಕೆಲಸಕ್ಕೂ ಸಮಯ ಸಾಕಾಗುವುದಿಲ್ಲವೆಂಬುದರಿಂದ ತನಗೆ ಸಹಾಯಿಯಾಗಿ ಒಬ್ಬ ಗುಮಾಸ್ತನನ್ನು ನೇಮಿಸಬೇಕೆಂದು ಶ್ರೀ ಗುರುಗಳವರ ಪಾದದಲ್ಲಿ ಅರಿಕೆ ಮಾಡಿಕೊಳ್ಳಲು, ಯೋಗ್ಯನೆಂದು ತೋರುವವನೊಬ್ಬನ ಹೆಸರನ್ನು ಕಾಣಿಸಿ, ಬಿನ್ನಹ ಪತ್ರವನ್ನು ಬರೆದುಕೊಂಡರೆ, ಸಭೆಯಲ್ಲಿ ತೀರ್ಮಾನವಾಗುವುದೆಂದು ಅಪ್ಪಣೆಯಾದ ಪ್ರಕಾರ ಭೀಮರಾಯನು ಕೂಡಲೇ ಬಿನ್ನಹ ಪತ್ರವನ್ನು ಬರೆದುಕೊಡಲು, ಅದೇ ದಿವಸ ಸಭೆ ನೆರೆದು, ಗೃಹಸ್ಥರೆಲ್ಲರೂ ಆ ಬಿನ್ನಹ ಪತ್ರದಲ್ಲಿ ಬರೆದಿರುವ ವಿಷಯವನ್ನಾಲೋಚಿಸಿ, ಅದರಲ್ಲಿ ಹೆಸರು ಕಾಣಿಸಿದ್ದ ದೇವರಾಯನನ್ನು ನೇಮಿಸಬಹುದೆಂದು ಎಲ್ಲರೂ ಅಭಿಪ್ರಾಯಪಟ್ಟು, ಹಾಗೆಯೇ ಅರಿಕೆ ಮಾಡಲು, ತತ್‌ಕ್ಷಣವೇ ನಿರೂಪವಾಯಿತು. ಭೀಮರಾಯನು ವಂತಿಗೆ ವರಾಡಗಳನ್ನು ಕೈಲಾದಷ್ಟು ಅವಸರದಿಂದ ವಸೂಲಿಮಾಡಿ, ಕೊಡದಿದ್ದವರ ವಂತಿಗೆಯನ್ನು ಮುಂದೆ ಅವರಿಂದ ವಸೂಲು ಮಾಡಬಹುದೆಂದಾಲೋಚಿಸಿ, ತತ್ಕಾಲಕ್ಕೆ ತನ್ನ ಕೈಯಿಂದ ಸಂದಾಯ

ಹಾಕಿ, ಆ ಸಂವತ್ಸರದಲ್ಲಿ ಒಂದು ಕಾಸಾದರೂ ಬಾಕಿ ಇಲ್ಲವೆಂದು ಕಾಣುವಂತೆ ಎಲ್ಲಾ ಲೆಕ್ಕವನ್ನು ಝಾಡೆಯಾಗಿ ಮಾಡಿ ಗುರು ಭಂಡಾರಕ್ಕೆ ತಂದೊಪ್ಪಿಸಿದನು. ಶ್ರೀ ಗುರುಗಳು ಅವನ ಸಾಮರ್ಥ್ಯಕ್ಕೆ ಮೆಚ್ಚಿ ಹೊಗಳಿದರು. ಆಮೇಲೆ ಶ್ರೀ ಗುರುಗಳು ಕೆಲವು ದಿವಸದಲ್ಲಿ ಪಾಂಡುರಂಗಪುರ, ಬೆಡಗೂರು ಅತ್ತ ಕಡೆಗೆ ಸವಾರಿ ತೆರಳಿಹೋದರು. ಹೋಗುತ್ತಾ ಭೀಮರಾಯನು ನೇತ್ರಾಪುರದ ವರೆಗೆ ಪಾಲಕಿಯ ಸಂಗಡಲೇ ನಡೆದು ಹೋಗಿ, ದಾರಿಯಲ್ಲಿ ಬೇಕಾದ ಸೌಕರ್ಯಗಳನ್ನೊದಗಿಸಿಕೊಟ್ಟು, ಫಲಮಂತ್ರಾಕ್ಷತೆ ಪಡೆದು ಮರಳಿ ಮನೆಗೆ ಬಂದನು.

ಒಂದೆರಡು ತಿಂಗಳು ಕಳೆದ ಮೇಲೆ ಅಂಬಾಬಾಯಿಯು ತನಗೆ ಮೈಯಲ್ಲಿ ಆಲಸ್ಯ ಉಂಟಾಗುತ್ತೆಂದು ಅಲ್ಲಲ್ಲಿ ಮಲಗಿಕೊಳ್ಳುತ್ತಾ, ಏಳುತ್ತಾ, ಆಹಾರ ಪಾನಗಳಲ್ಲಿ ಅಭಿರುಚಿ ಇಲ್ಲವೆಂದು ಸ್ವಲ್ಪ ದಿವಸಗಳ ವರೆಗೆ ಹುರುಳಿಯ ತಾಳದವನ್ನೇ ತಿನ್ನುತ್ತಾ, ಭೀಮರಾಯನನ್ನು ಕಂಡಕೂಡಲೇ ಅಲ್ಲ, ಅವನ ಹೆಸರು ಕಿವಿಯಲ್ಲಿ ಬೀಳುತ್ತಲೇ ಓಕರಿಸಿ ಆಯಾಸಪಡುತ್ತಾ, ಕೆಲವು ದಿವಸ ಬರೀ ಅಕ್ಕಿಯನ್ನೇ ತಿನ್ನುತ್ತಾ, ಅಸ್ವಸ್ಥದಿಂದ ಬಚ್ಚಿಹೋಗಲು, ಭೀಮರಾಯನು ಬೇರೆ ಹೆಂಗಸರನ್ನು ಕರೆಯಿಸಿ, ಅವಳ ವಿಷಯವನ್ನು ಮಾತನಾಡಿದ್ದಲ್ಲಿ ಅವೆಲ್ಲ ಗರ್ಭದ ಚಿನ್ಹೆಗಳೆಂದು ಗೊತ್ತಾದುದರಿಂದ ಅವಳ ಆರೈಕೆ ನೋಡುವುದಕ್ಕೆ ಬೇರೆ ಹೆಂಗಸರನ್ನು ನೇಮಿಸಿ, ಪ್ರತಿ ದಿವಸವೂ ಅವಳ ದೇಹಸ್ಥಿತಿಯನ್ನು ಕುರಿತು ದೂರದಿಂದಲೇ ವಿಚಾರಿಸಿ ತಿಳಿದುಕೊಂಡು, ಕೈಲಾಗುವಷ್ಟು ಜಾಗ್ರತೆಯಿಂದ ಅವಳ ಯೋಗಕ್ಷೇಮವನ್ನು ನೋಡಿಕೊಂಡು ತಾನು ಪುತ್ರಾಯವನ್ನಾಶಿಸಿದನು. ಕೆಲವು ದಿವಸಗಳ ನಂತರ ಅಂಬಾಬಾಯಿಯ ಒಣ ಓಕರಿಕೆಯು ಪರಿಣಮಿಸಲು, ಭೀಮರಾಯನು ಅವಳಿಗೆ ತಕ್ಕ ಸಮಯದಲ್ಲಿ ಚಂದ್ರ ತಾರಾಬಲವನ್ನು ನೋಡಿ, ಸೀಮಂತ, ಬಯಕೆ ಕೂಳು ಮುಂತಾದ ಶಾಸ್ತ್ರಾಚಾರ ಲೋಕಾಚಾರಗಳನ್ನು ಲೋಪವಿಲ್ಲದೆ ಮಾಡಿಸಿದನು. ಮತ್ತು ಪುತ್ರೋತ್ಸವದ ಸಂತೋಷವನ್ನು ಈಗಿನಿಂದಲೇ ನಾನಾ ಪ್ರಕಾರದಲ್ಲಿ ಕಾಣಿಸತೊಡಗಿದನು. ಅಂಬಾಬಾಯಿಯ ಉದರದಲ್ಲಿ ಗರ್ಭವು ದಿನ ಹೋಗುತ್ತಾ ಹೋಗುತ್ತಾ ಬೆಳೆದು ಬಂದು, ಒಂದೊಂದು ಸಮಯದಲ್ಲಿ ಗರ್ಭವು ಹೊಟ್ಟೆಯೊಳಗೆ ಚಲಿಸುತ್ತಿದೆಂಬಂತೆ ಕಂಡು, ಭಯದಿಂದ ಪತಿಯೊಡನೆ ಹೇಳಲು, ಅವನು "ಪ್ರಿಯಳೆ, ಶ್ರೀ ಗುರುಗಳ ಪಾದಕಟಾಕ್ಷದಿಂದ ಇನ್ನು ಸ್ವಲ್ಪ ದಿವಸಗಳಲ್ಲಿ ಸೂರ್ಯತುಲ್ಯನಾದ ಪುತ್ರನು ಹುಟ್ಟುವನು. ಗರ್ಭವು ಒಂದು ತರದಲ್ಲಿ ಸುಖಕರವಾದರೂ, ಅದನ್ನು ಹೊರುವವಳಿಗೆ ಶಾನೆ ಆಯಾಸವನ್ನುಂಟುಮಾಡುತ್ತೆ. ಸ್ವಲ್ಪ ದಿವಸಗಳ ವರೆಗೆ ತಾಳಿಕೊಂಡಿರು" ಎಂದು ಸಂತೈಸುವನು. ಸಂಬಂಧಿಕರೂ ಇಷ್ಟಮಿತ್ರರೂ ಅಂಬಾಬಾಯಿಗೆ ಆದರಾತಿಶಯದೊಡನೆ ಬಯಕೆ, ಊಟ ಉಪಚಾರಗಳನ್ನು ಮಾಡಿದರು. ಒಂಭತ್ತು ತಿಂಗಳು ಕಳೆದವು. ದಿನ ಹೋದ ಹಾಗೆ ಮೈಯಲ್ಲಿ ಆಲಸ್ಯವೂ, ಹೇಳಕೂಡದ ಬೇಸರಿಕೆಯೂ ಮಿಗಿಲಾಗುತ್ತಾ ಬಂದವು. ಅಂಬಾಬಾಯಿಯು ಅನೇಕ ಸಾರಿ ತನ್ನಲ್ಲಿ ತಾನೇ– "ಅಯ್ಯೋ! ಈ ಗರ್ಭವೆಂಬುದು ನೋಡುವವರಿಗೆ ಸೊಗಸು, ಹೊರುವವರಿಗೆ ಪ್ರಾಣಸಂಕಟ!"ವೆಂದು ಮಾತನಾಡುವಳು.

ಗಂಡನು ಸಾಯಂಕಾಲಕ್ಕೆ ಮನೆಗೆ ಬಂದಾಗ ಅವನ ಹತ್ತಿರವೂ ಹಾಗೆಯೇ ಹೇಳುವಳು. ಅವನು ಸಂತೋಷಭರಿತನಾಗಿ ಮೆಲ್ಲನೆ ಬೆನ್ನು ತಟ್ಟಿ ಇನಿದಾದ ಮಾತುಗಳಿಂದ ಅವಳನ್ನು ಸಂತೈಸುವನು. ಪುತ್ರೋತ್ಸವದ ಸಂತೋಷವೇ ಯಾವಾಗಲೂ ಮನಸ್ಸಿನಲ್ಲಿದ್ದುದರಿಂದ ಭೀಮರಾಯನು ದಿವಸಂಪ್ರತಿಯಲ್ಲೂ ಪುತ್ರೋತ್ಸವ ಪ್ರಕರಣವಿದ್ದ ಪ್ರಸಂಗವನ್ನೇ ಹಾಡುವನು. ಒಂದಾನೊಂದು ದಿವಸ ಪುತ್ರಕಾಮೇಷ್ಟಿಯ ಪ್ರಸಂಗವನ್ನು ಹಾಡುವಾಗ ಅಂಬಾಬಾಯಿಯು ಸಮೀಪದಲ್ಲಿದ್ದದ್ದನ್ನು ಲಕ್ಷಿಸದೆ, ತಪ್ಪಿ–

ಎಂತು ತಾಳ್ದಪರೋ
ಲೋಕದಿ ಗರ್ಭ–
ವೆಂತು ತಾಳ್ದಪರೋ॥
ಎಂತು ತಾಳ್ದಪರೋ ಈ
ಕಾಂತೆಯರ್ಲೋಕದಿ–
ಕಂತು ಪಿತನೆ ತಾ ಬಲ್ಲಾ॥

ಎಂಬೀ ಪದವನ್ನು ಹಾಡಿ ವಿಕಸಿತಾಲಂಕಾರದೊಡನೆ ಅರ್ಥವನ್ನು ನುಡಿಯಲು, ಅಂಬಾಬಾಯಿಯು ಬೆದರಿ,–"ಅಯ್ಯೋ!" ಎಂದು ಕೂಗಿ, "ನನ್ನನ್ನು ಬೇಗನೇ ಒಳಗೆ ಕೊಂಡುಹೋಗಿರೋ!" ಎಂದು ಕರೆದು ಹೇಳಿದಳು. ಭೀಮರಾಯನು ಬೆದರಿ ಪ್ರಸಂಗವನ್ನು ನಿಲ್ಲಿಸಿದನು. ಹೆಂಗಸರು ಅಂಬಾಬಾಯಿಯನ್ನು ಕೈಕೈ ಹಿಡಿದು ಒಳಗೆ ಕೊಂಡುಹೋಗಿ ಹಾಸಿಗೆಯಲ್ಲಿ ಮಲಗಿಸಿ, "ಏನವ್ವಾ? ಏನಾಗುತ್ತೆ? ಮಂಜಪ್ಪುವಿಗೆ ಹೇಳಿಕಳುಹಿಸುವುದೇ? ಬೆದರಬೇಡ; ನಾವೆಲ್ಲರೂ ಇದ್ದೇವಷ್ಟೆ? ಯಾವುದೊಂದೂ ಉಪದ್ರವಿಲ್ಲದೆ ಒಂದು ಜೀವಕ್ಕೆರಡು ಮಾಡಿಕೊಡುವೆವು" ಎಂದು ಹೇಳಿ, ಮೈ ಮುಟ್ಟಿ ತಟ್ಟಿ ನೋಡಿ, ಒಬ್ಬಳು ಹೊರಜಗಲಿಗೆ ಬಂದು, ಭೀಮರಾಯನೊಡನೆ "ರಾಯರೇ, ಬೇಗನೇ ಜನಬಿಟ್ಟು, ಮಂಜಪ್ಪುವನ್ನು ಬರಮಾಡಿಸಬೇಕಷ್ಟೆ" ಎನಲು, ಅವನು ಕೂಡಲೇ ಮೈರೆಯನ್ನು ಕಳುಹಿಸಿ ಮಂಜಪ್ಪುವನ್ನು ಕರೆಯಿಸಿದನು. ಆಕೆಯು ಬಂದ ಮೇಲೆ ಅಂಬಾಬಾಯಿಗೆ ಪ್ರಸೂತಕಾಲವೆಂದು ಗೊತ್ತಾಗಿ, "ಗವುಜಿ ಏಕೆ? ಸಮ್ಮಗಿರಿ!" ಎಂದು ಬೇರೆ ಹೆಂಗಸರಿಗೆ ಬುದ್ಧಿ ಹೇಳಿ, ಅಂಬಾಬಾಯಿಯೊಡನೆ, "ಅಮ್ಮಾ, ಹೆದರಬೇಡಿರಿ, ಹೆರುವ ಕಾಲದಲ್ಲಿ ಹೆದರಬಾರದು" ಎಂದು ಹೇಳಿ, ಒಂದು ತೆಂಗಿನಕಾಯಿಯನ್ನು ತರಿಸಿ, ಅದನ್ನು ಹೊಟ್ಟೆಗೆ ನಿವಾಳಿಸಿ ತೆಗೆದಿಟ್ಟು, ಬೇರೆ ಚಿಕಿತ್ಸೆಗಳನ್ನು ಸಹ ಮಾಡಿದುದರಿಂದ ಅದೇ ರಾತ್ರಿ ಕ್ಷೇಮದಿಂದ ಜನನವಾಯಿತು. ಒಡನೆ ಬಟ್ಟಲನ್ನು ಬಡೆದು, ಶಿಶುವಿಗೂ ತಾಯಿಗೂ ಬೇಕಾದ ಶುಶ್ರೂಷೆಗಳನ್ನು ಮಾಡಿದರು. ಭೀಮರಾಯನು ಆ ಕೋಣೆಯ ಬಳಿಯಲ್ಲಿ ನಿಂತು, ಮಗುವೆಂಥಾದ್ದೆಂದು ಮಂಜಪ್ಪುವಿನ ಹತ್ತಿರ ಕೇಳಲು, ಆಕೆಯು ಗಂಡೆಂದು ಹೇಳಿದ್ದೇ ಸರಿ, ಅಮಿತಾನಂದದಿಂದ ಪರವಶನಾಗಿ, "ಹೇ ಸ್ವಾಮಿನ್!" ಎಂದು ಶ್ರೀ ಗುರುಗಳನ್ನು ವಂದಿಸಿ, ಪುನಃ ಚಾವಡಿಗೆ ಬಂದು ಶ್ಯಾಮನನ್ನು ಕರೆದು, ಒಂದು ಮಣ ಚೀನಿಸಕ್ಕರೆಯನ್ನು ಈಗಲೇ ಹಂಚಿಬಿಡೆಂದು ಹೇಳಿದನು.

ಶ್ಯಾಮನು ಒಂದು ದೊಡ್ಡ ಕವಳಿಗೆಯಲ್ಲಿ ಸಕ್ಕರೆ ತಂದು ಕೂಡಿದವರೆಲ್ಲರಿಗೂ ಹಂಚಿದನು. ಒಂದು ಗಳಿಗೆಯ ತರುವಾಯ ಮಂಜಪ್ಪುವು ಮೀಯಿಸುವುದಕ್ಕೆ ಮಗುವನ್ನು ಹೊರಗೆ ತಂದಾಗ ಭೀಮರಾಯನು ಕುತೂಹಲದಿಂದ ಓಡಿಹೋಗಿ ನೋಡಲಾಗಿ, ಕೂಸು ಗಂಡಲ್ಲ, ಹೆಣ್ಣೆಂದು ಸ್ಪಷ್ಟವಾಗಲು, "ಇದೇನು ಅದ್ಭುತ! ಶ್ರೀ ಗುರುವಾಕ್ಯವು ಸಟೆಯಾಯಿತೇ!" ಎಂದು ಕ್ಷೌರ ಬೆಳೆದ ತಲೆಯನ್ನುಜ್ಜಿಕೊಳ್ಳುತ್ತಾ ಗುಣುಗುಟ್ಟುವಾಗ ಹೆರುವ ಕಾಲದಲ್ಲಿ ಹೆದರಿದ್ದರಿಂದ ಹೆಣ್ಣು ಹೆತ್ತದ್ದೆಂದು ಒಳಗಿನಿಂದ ಯಾರೋ ಒಬ್ಬಾಕೆಯು ಮಾತನಾಡಿದ್ದನ್ನು ಕೇಳಿ, "ಹಾಗಾದರೆ ಆ ಬೋಸಡಿ ಮಂಜಪ್ಪು ಗಂಡೆಂದು ಬೊಗಳಿದ್ದೇಕೆ?" ಎಂದು ಸಿಟ್ಟಿನಿಂದ ಗರ್ಜಿಸಿದನು. ಅದಕ್ಕುತ್ತರವಾಗಿ ಒಳಗಿನಿಂದ ಆ ಸ್ತ್ರೀಯು – "ಗಂಡು ಹೆತ್ತರೆ ಹೆಣ್ಣು, ಹೆಣ್ಣು ಹೆತ್ತರೆ ಗಂಡೆಂದು ಸೂಲಗಿತ್ತಿಯರು ಹೇಳಬೇಕೆಂದು ಹಿರಿಯರ ಕಟ್ಟಳೆ ಇದೆ; ಅದಕ್ಕನುಸರಿಸಿ ಹಾಗೆ ಹೇಳಿದಳೇನೊ" ಎನಲು "ಕಟ್ಟಳೆಯೋ, ಸುಡುಗಾಡೋ, ಇದನ್ನು ನಾನು ಯಾವ ಪ್ರಸಂಗದಲ್ಲೂ ಕೇಳಿದ್ದಿಲ್ಲ. ವ್ಯರ್ಥವಾಗಿ ಶ್ರೀ ಗುರುಗಳ ಮಾತಿನ ಮೇಲೆ ಸಂಶಯಪಟ್ಟೆನು. ನಾನು ಆ ಪದವನ್ನು ಹಾಡಿದ ದೆಸೆಯಿಂದಲೇ ಈ ವಿಷಮ ಉಂಟಾಯಿತು, ಯಾರನ್ನಾದರೂ ದೂರಲು ಕಾರಣವಿಲ್ಲ" ಎಂದು ಹೇಳಿ ಸುಮ್ಮಗಾದನು. ಅಂಬಾಬಾಯಿಯು ಮರುಗುತ್ತಾ, "ಗಂಡಾದರೇನು? ಹೆಣ್ಣಾದರೇನು? ಮಗುವು ದೀರ್ಘಾಯುವಾಗಿದ್ದರೆ ಸಾಕು. ದೇವರ ದಯೆಯಿಂದ ನಮಗೇನೂ ಗತಿಗೇಡಿಲ್ಲವಷ್ಟೆ? ಸಂತಾನ ಗೋಪಾಲನ ಕಟಾಕ್ಷದಿಂದ ನಾನು ಬಂಜೆ ಎಂಬ ಕೊರತೆಯೊಂದು ಹೋಯಿತಷ್ಟೆ? ಸಾಕು!" ಅಂದಳು.

## ೧೯

ಇತ್ತಲಾಗಿ ಸುಶೀಲೆಯು ಪತಿವಿಯೋಗ ದುಃಖದಿಂದಲೂ ಮಗನಾದ ಭಾಸ್ಕರನ ವಿದ್ಯಾಭ್ಯಾಸ ಸುಶಿಕ್ಷೆಗೆ ಮಾರ್ಗ ಕಾಣದೆಯೂ ಚಿಂತಾರ್ಣವದಲ್ಲಿ ಮುಳುಗಿರುವಾಗ ಒಂದಾನೊಂದು ದಿವಸ– "ಏ ದೇವರೇ, ಈ ದೇಹಕ್ಕೆ ಮರಣವಾದರೂ ಬರುವುದಿಲ್ಲವಷ್ಟೇ! ಅನ್ನದ ಕಾಳು ನಾಲ್ಕು ಈ ಮನೆಯಲ್ಲಿ ಸಿಕ್ಕಿದರೂ, ಬಡಪ್ರಾಣಿಯಾದ ಭಾಸ್ಕರನಿಗೆ ಒಂದು ಪಟ್ಟೇ ಕಂಬಿಯ ವೇಷ್ಟಿ, ಅಥವಾ ಒಂದಂಗಿ, ಇಲ್ಲವೆ ಒಂದು ಯಲವಸ್ತ್ರವಾದರೂ ಒಂದು ದಿವಸ ಮೈಮೇಲೆ ಹಾಕಿ ಕಣ್ಣು ತುಂಬಾ ನೋಡಬಹುದೆಂದರೂ, ವಿದ್ಯಾಭ್ಯಾಸಕ್ಕೋಸ್ಕರ ಶಾಲೆಗೆ ಕಳುಹಿಸಬಹುದೆಂದರೂ ನನ್ನ ಹಣೆಯಲ್ಲಿಲ್ಲವಷ್ಟೆ! ಈ ನನ್ನ ದುಃಖವನ್ನು ಹಗೆಗಳು ನೋಡಿ ಸಂತೋಷಿಸುವಾಗ ನಾನು ಹೇಗೆ ಸೈರಿಸಿಕೊಳ್ಳಲಿ! ಭಾಸ್ಕರಾ, ಮುದ್ದುವೇ, ಮುಂದೇನಪ್ಪಾ ನಿನ್ನ ಗತಿ!? ನನ್ನ ಮಾತಂತೂ ಬಿಡು" ಎಂದು ಹೇಳಿ ಹುಡಗನನ್ನಪ್ಪಿಕೊಂಡು ಗೋಳಾಟದೊಡನೆ ಮಾಡಿದ ಅಶ್ರುಪಾತವನ್ನು ಕಂಡು, ಅವನು "ತಾಯೇ, ಗೋಳಾಟದಿಂದ ಕಷ್ಟಪರಿಹಾರವಾಗದು. ನೀನು ನನ್ನನ್ನು ಒಂಬತ್ತು ತಿಂಗಳು ಹೊಟ್ಟೆಯಲ್ಲಿ ಹೊತ್ತುಕೊಂಡು ಆ ಮೇಲೆ ಈ ವರೆಗೆ ನನಗೋಸ್ಕರ ಪಡೆದ ಕಷ್ಟಗಳ ಪ್ರತಿಫಲವನ್ನು ನಿನಗೆ ಕೊಟ್ಟು ನನ್ನಿಂದ

ಪೂರಯಿಸುವದು ಅಸಾಧ್ಯವಾದರೂ, ಈ ನನ್ನ ಶರೀರವು ಬದುಕಿರುವ ವರೆಗೆ ಸ್ವಲ್ಪಮಟ್ಟಿಗಾದರೂ ಪ್ರಯತ್ನಿಸದಿದ್ದರೆ, ನಾನು ನಿನ್ನ ಉದರದಲ್ಲಿ ಜನನವನ್ನು ಧರಿಸಲೇ ಇಲ್ಲವೆಂದು ತಿಳಿದುಕೋ–ವೃಥಾ ದುಃಖಿಸಬೇಡ. ಮನೆಯಲ್ಲಿ ಹೇಗೂ ನನಗೆ ತಕ್ಕಮಟ್ಟಿಗೆ ಕನ್ನಡ ಬರಹ, ಸ್ವಲ್ಪ ಗಣಿತ ಮುಂತಾದ್ದನ್ನು ಹೇಳಿಕೊಟ್ಟಿದ್ದಿದೆ. ಅದರಿಂದ ತಾನೇ ಪ್ರಯೋಜನವೇನೂ ಸಿಕ್ಕದಾದರೂ, ಇಂತಹ ದೊಡ್ಡ ನಗರದಲ್ಲಿ ದಾನಿಯೂ ಔದಾರ್ಯಶೀಲನೂ ಒಬ್ಬನಾದರೂ ಇರಲಾರನೇ? ಅವನ ಮೊರೆಹೊಕ್ಕಾದರೂ ಕಾಲಕ್ಷೇಪದ ಮಾರ್ಗವನ್ನು ಕಂಡುಕೊಳ್ಳಬಹುದು. ಶತ್ರುಗಳು ನಮ್ಮ ಕೇಡನ್ನು ಬಗೆದರೂ ಚಿಂತೆಯಿಲ್ಲ, ದೇವರು ಅವರನ್ನು ಕ್ಷಮಿಸಲಿ. ನಾವು ಅವರ ಹಿತವನ್ನೇ ಬಯಸಬೇಕು" ಎಂದು ಅವನ ಪ್ರಾಯಕ್ಕೆ ಮಿಕ್ಕಿದ ಅಸಾಧಾರಣ ಬುದ್ಧಿಯ ಮಾತುಗಳಿಂದ ತಾಯಿಯನ್ನು ಸಂತೈಸಿದನು. ಆಗಲವಳು "ಇಷ್ಟು ಬುದ್ಧಿಪರಾಕ್ರಮ ನಿನಗೆ ಹೇಗೆ ಬಂತಪ್ಪಾ!" ಎಂದು ಪುನಃ ಅವನನ್ನಪ್ಪಿ ಹಿಡಿದುಕೊಂಡು– "ಮುದ್ದುವೇ, ನಿನ್ನ ಮಾತುಗಳನ್ನು ಕೇಳುವಾಗ ನನ್ನ ಕರುಳು ಕತ್ತರಿಸಿದಂತಾಗುತ್ತಷ್ಟೇ. ನೀನಿದ್ದಿ ಮೂರು ಬೆರಳುಗಳಷ್ಟಕ್ಕೆ. ನಿನ್ನಿಂದ್ಯಾವ ಕೆಲಸವಾದೀತು? ಏನಾಲೋಚನೆ ಮಾಡಿದ್ದೀಯಪ್ಪಾ? ಬಾಯಿಬಿಟ್ಟು ಹೇಳು" ಎಂದು ಕೇಳಲು, ಅವನು "ಈಗ ಹೇಳಲಾರೆನು, ಕಾಲಕ್ರಮದಲ್ಲಿ ತನ್ನಂತೇ ತಿಳಿಯುವುದು. ಬರೀ ಮಾತುಗಳಿಂದ ಪ್ರಯೋಜನವಿಲ್ಲ. ಇಂದಿನಿಂದ ಮುಂದೆ ದುಃಖಪಡಬೇಡ. ನಿನ್ನ ಗೋಳಾಟವನ್ನು ನೋಡಿದರೆ ನನಗೆ ಮನಸ್ಸೆಲ್ಲ ಅಲ್ಲೋಲ ಕಲ್ಲೋಲವಾಗಿ ಯಾವ ಆಲೋಚನೆಯೂ ಸೂಚಿಸುವುದಿಲ್ಲ. ಗಂಜಿಯಾಗಿದೆಯೆ?" ಎಂದು ಕೇಳಿದನು. ಆಕೆಯು ಮಗನ ಮಾತುಗಳಿಗಾಶ್ಚರ್ಯಪಟ್ಟು, ಇದರಲ್ಲೇನೋ ವಿಶೇಷವಿದೆ ಎಂದು ತಿಳಿದುಕೊಂಡು, ಏನಾಲೋಚನೆಯೋ ನೋಡೋಣವೆಂದು–"ಗಂಜಿ ಸಿದ್ಧವಿದೆ, ಬಡಿಸಲೇ?" ಎನಲು, ಅವನು ಬಂದು ಊಟಮಾಡಿ–"ತಾಯೇ, ನಾನು ಉಡುವ ಪಂಚೆ, ಮೈಯ ಮೇಲೆ ಹಾಕುವ ಪರಕಾಳೆಯ ತುಂಡು ಸಹ ಇತ್ತಕೊಡು" ಎಂದು ಕೇಳಿ ತೆಗೆದುಕೊಂಡು ಆ ಪಂಚೆಯು ಒಂದು ಕಡೆಯಲ್ಲಿ ಸ್ವಲ್ಪ ಹರಿದುಹೋಗಿದ್ದುದರಿಂದ ಆ ಭಾಗವನ್ನು ನೆರಿಗಳಲ್ಲಡಗಿಸಿ ಉಟ್ಟುಕೊಂಡು, ಪರಕಾಳೆಯ ತುಂಡನ್ನು ಮೈಯ ಮೇಲೆ ಹಾಕಿಕೊಂಡು, "ಬೇಗನೆ ಬರುತ್ತೇನೆ" ಎಂದು ತಾಯಿಯ ಹತ್ತಿರ ಹೇಳಿ ಹೊರಟು, ನೆಟ್ಟಗೇ ಹೈಕೋರ್ಟು ವಕೀಲ ಅಮೃತರಾಯನಲ್ಲಿಗೆ ಹೋಗಿ, ಅವನ ಸಮಯವನ್ನು ಕಾದು ನಿಂತುಕೊಂಡು, ಸಮಯ ಸಿಕ್ಕಿದಾಗ, "ಸ್ವಾಮಿ!" ಎಂದು ನಮಸ್ಕರಿಸಿದನು.

ಅಮೃತರಾಯನೆಂದರೆ ಚಿಕ್ಕಂದಿನಲ್ಲೇ ಅವನ ತಾಯಿ ತಂದೆಗಳು ಮೃತರಾಗಿ ಅನಂತರ ಬಹಳ ದಾರಿದ್ರ್ಯವನ್ನನುಭವಿಸಿ ಕೆಲವು ಕಾಲ ಪರಿಯಂತರ ಅನಾಥ ಶಾಲೆಯಲ್ಲಿದ್ದು ದಯಾಶೀಲರನ್ನಾಶ್ರಯಿಸಿ ವಿದ್ಯೆಯನ್ನು ಸಂಪಾದಿಸಿ, ಕ್ರಮೇಣ ಊರ್ಜಿತವಾದ ಸ್ಥಿತಿಗೆ ಬಂದವನಾಗಿದ್ದುದರಿಂದ ಪರರ ಸುಖದುಃಖಗಳೆಂದರೇನೆಂಬುದನ್ನು ಚೆನ್ನಾಗಿ ತಿಳಿದವನಾಗಿಯೂ, ತನ್ನ ಉದ್ಯೋಗ ಧರ್ಮದಲ್ಲಿ ಬಹು ಪ್ರವೀಣನಾದುದರಿಂದ ಸರ್ವರಿಂದಲೂ ಮಾನ ಮರ್ಯಾದೆಯನ್ನು ಪಡೆದು, ಒಬ್ಬಗೆ ಬೇಕು, ಇನ್ನೊಬ್ಬಗೆ ಬೇಡವೆಂದಲ್ಲ, ಸರ್ವರಿಗೂ

ಬೇಕಾದವನಾಗಿಯೂ ಇದ್ದ ಒಬ್ಬ ಮಹಾನುಭಾವನು. ಅವನು ಭಾಸ್ಕರನನ್ನು ನೋಡಿ– "ನೀನ್ಯಾರೆಲೋ? ಏಕೆ ಬಂದೆ?" ಎಂದು ಕೇಳಲು ಅವನು "ಸ್ವಾಮಿ, ನಾನೊಬ್ಬ ಅನಾಥ ಹುಡುಗ. ತಂಬೂರಿ ಬಾಳಾಜಿರಾಯನ ಮೊಮ್ಮಗ. ನನ್ನ ಸ್ಥಿತಿಗತಿ ತಮಗೆ ಮುಂಚೆಯೇ ಶ್ರುತವಾಗಿರಬಹುದಷ್ಟೆ? ತಂದೆಯು ಮೃತವಾದಂದಿನಿಂದ ನನ್ನ ಬಡ ತಾಯಿಯು ದುಃಖದಲ್ಲಿ ಮುಳುಗಿ ಸಾಯಲಿಕ್ಕಿದ್ದಾಳೆ. ನಾನು ಅವಳ ಉದರದಲ್ಲಿ ಜನಿಸಿ ಏನು ಫಲ? ತಮ್ಮಂತಹರ ಸೇವಾವೃತ್ತಿಯಿಂದೇನಾದರೂ–" ಎಂದಿಷ್ಟು ಮಾತನಾಡುವದರಲ್ಲಿ ಗದ್ಗದ ಕಂಠವಾಗಿ ಮುಂದಕ್ಕೆ ಮಾತನಾಡಕೂಡದೆ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದನು. ಅಮೃತರಾಯನು ಹುಡುಗನ ಬುದ್ಧಿಗೆ ಮೆಚ್ಚಿ ಕನಿಕರದಿಂದ,

"ನನ್ನಿಂದೇನಾಗಬೇಕೆಂದು ಹೇಳು."

"ಸ್ವಾಮಿ, ಸೋಮಾರಿಯಾಗಿ ಊರೆಲ್ಲ ಸುತ್ತಿಕೊಂಡು ಯಾಚಕ ವೃತ್ತಿಯಿಂದ ಕಾಲಕ್ಷೇಪ ಮಾಡಬೇಕೆಂದು ನನಗೆ ಮನಸ್ಸಿಲ್ಲ. ನನ್ನ ಯೋಗ್ಯತೆಗೂ ಶಕ್ತಿಗೂ ತಕ್ಕದ್ದೆಂದು ತಮಗೆ ಕಾಣುವ ಒಂದು ಕೆಲಸವನ್ನು ನನಗೆ ದಯಪಾಲಿಸಿದರೆ, ತಮ್ಮ ಸೇವೆಯಲ್ಲೇ ನನಗೆ ತೃಪ್ತಿಯಾಗುವುದು."

ಅಮೃತರಾಯನು ಈ ಹುಡುಗನಿಗೆ ಒಳ್ಳೇ ಬುದ್ಧಿ ಇದೆ, ಪರಂತು ಕಾರ್ಯದಲ್ಲಿ ಇವನ ಬುದ್ಧಿಯನ್ನು ಪರೀಕ್ಷಿಸಿ ನೋಡೋಣವೆಂದು ತನ್ನೊಳಗೆ ತಾನೇ ಆಲೋಚಿಸಿ, "ನೀನು ನಮ್ಮಲ್ಲಿ ಪೂಜೆಯ ಭಟ್ಟನ ಪಡಿಚಾರಕನಾಗಿ ನಿಲ್ಲುತ್ತೀಯಾ? ಊಟದ ಖರ್ಚುಹೋಗಿ ತಿಂಗಳಿಗೆ ಅರ್ಧ ರೂಪಾಯಿ ಸಿಕ್ಕುವುದು. ಹೇಗೆ ನಿನ್ನ ಅಭಿಮತ?"

"ತಮ್ಮ ಚಿತ್ತ. ನನ್ನ ಯೋಗ್ಯತೆಯನ್ನು ಕಂಡು ಅಪ್ಪಣೆ ಕೊಟ್ಟಂತೆಯೇ ಆಗಲಿ."

ಅಮೃತರಾಯನು ಹುಡುಗನ ದೀನಭಾವದ ಮಾತುಗಳಿಗೂ ಅವನ ಬುದ್ಧಿಗೂ ಮೆಚ್ಚಿ, ವಿನಯದಾತೃತ್ವದೊಡನೆ ಅವನ ವಿದ್ಯಮಾನಗಳನ್ನೆಲ್ಲ ಕೇಳಿ ತಿಳಿದು, "ಹಾಗಾದರೆ ನಾಳೆಯಿಂದ ಕೆಲಸಕ್ಕೆ ಬಾ, ಈಗ ಹೋಗು" ಎನಲು, ಮನೆಗೆ ಬಂದು, ನಡೆದ ವೃತ್ತಾಂತವನ್ನು ತಾಯಿಗೆ ಅರಿಕೆಮಾಡಿ, "ತಾಯೇ, ಬಹು ಅಲ್ಪವಾದ ಚಾಕರಿಗೆ ನಿಂತೆನೆಂದು ಚಿಂತಿಸಬೇಡ, ದೇವರ ದಯದಿಂದ ಅಮೃತರಾಯರ ಅನುಗ್ರಹವನ್ನು ಬೇಗನೇ ಸಂಪಾದಿಸಿ ಮುಂದೆ ಯಾವುದಾದರೂ ಒಂದು ಉತ್ತಮ ಸ್ಥಿತಿಗೆ ಬಂದು ಮುಟ್ಟುವುದಕ್ಕಾಗುವುದೋ ಇಲ್ಲವೋ ನೋಡುವೆನು" ಎಂದನು. ಸುಶೀಲೆಯು ಅದಕ್ಕಿದಿರಾಗಿ ಮಾತನಾಡದೆ ಸುಮ್ಮಗಾದಳು. ಭಾಸ್ಕರನು ಮರುದಿನ ಮುಂಜಾನೆ ಎದ್ದು ಅಮೃತರಾಯನಲ್ಲಿಗೆ ಬಂದು, ಕೆಲಸಕ್ಕುಪಕ್ರಮಿಸಿ, ಬಹು ಜಾಗರೂಕತೆಯಿಂದ ತನ್ನ ಕರ್ತವ್ಯಗಳನ್ನು ಮಾಡುತ್ತಾ, ಎಲ್ಲರ ಕಡೆಗೂ ಭಕ್ತಿಯಿಂದ ನಡೆದುಕೊಳ್ಳುತ್ತಾ, ಸಮಯ ಸಿಕ್ಕಿದಾಗ ಹೋಗಿ ತಾಯಿಯ ಸಂಗಡ ಮಾತನಾಡಿ ಬರುತ್ತಾ ಹತ್ತು ಹದಿನೈದು ದಿವಸಗಳು ಕಳೆದವು.

ಶ್ರೀ ಗೋಪಾಲಕೃಷ್ಣ ದೇವಸ್ಥಾನದ ರಥೋತ್ಸವವು ಪ್ರಾರಂಭವಾಯಿತು. ಆದರೆ ಭಾಸ್ಕರನು ಬೇರೆ ಸೋಮಾರಿ ಹುಡುಗರಂತೆ ಉತ್ಸವ ಸ್ಥಳಕ್ಕೆ ಹೋಗಿ ಅತ್ತಿತ್ತ ಅಲೆಯುತ್ತಾ

ಕಾಲವನ್ನು ಕಳೆಯಲು ಮನಸ್ಸಿಲ್ಲದೆ, ತನ್ನ ಕೆಲಸದಲ್ಲೇ ಆಲಸ್ಯವಿಲ್ಲದೆ ನಿರತನಾಗಿದ್ದು, ಬಂದರೆ ಅಮೃತರಾಯನಲ್ಲಿಗೆ, ಹೋದರೆ ತಾಯಿಯಲ್ಲಿಗೆ, ಹೀಗೆ ಎರಡು ಕಡೆಗಳಿಗಲ್ಲದೆ, ಕೆಲಸವಿಲ್ಲದೆ ಬೇರೆ ಯಾವಲ್ಲಿಗೂ ಹೋಗುತ್ತಿದ್ದಿಲ್ಲ. ರಥೋತ್ಸವದ ದಿವಸ ಅಮೃತರಾಯನು ತನ್ನ ಸೇವಕರಿಗೆಲ್ಲ ಸಂತೆಯ ವೆಚ್ಚಕ್ಕೆ ಕೊಡುವಾಗ ಭಾಸ್ಕರನನ್ನು ಸಹ ಕರೆದು, ಸಂತೆಯ ವೆಚ್ಚಕ್ಕೆಂದು ಒಂದರ್ಧ ರೂಪಾಯಿ ಕೊಟ್ಟನು. ರಥೋತ್ಸವಕ್ಕೆ ಅಮೃತರಾಯನೂ ಬೇರೆಯವರೂ ಹೋದರು. ಭಾಸ್ಕರನು ನೆಟ್ಟಗೆ ಪಾದ್ರಿಗಳ ಬುಕ್‌ಶಾಪಿಗೆ ಹೋಗಿ, ಒಂದು "ಇಂಗ್ಲಿಷ್ ಮೊದಲನೇ ಪುಸ್ತಕ", ಒಂದು ಸಿಲೇಟಿನ ಹಲಿಗೆ, ಅದರ ಮೇಲೆ ಬರೆಯುವುದಕ್ಕೆ ನಾಲ್ಕು ಬಳಪ ಕಡ್ಡಿಗಳನ್ನು ಸಹ ಕ್ರಯಕ್ಕೆ ಕೊಂಡುಕೊಂಡು ಮನೆಗೆ ಬಂದು, ಒಂದು ಕಡೆಯಲ್ಲಿ ಕುಳಿತುಕೊಂಡು, ಆ ಪುಸ್ತಕದಲ್ಲಿದ್ದ ಅಕ್ಷರಗಳನ್ನು ಹಲಗೆಯ ಮೇಲೆ ಬರೆಯುತ್ತಾ ಇದ್ದನು. ಸಾಯಂಕಾಲದವರೆಗೆ ಹಾಗೆ ಬರೆಯುತ್ತಾ ಇದ್ದು ಆ ಮೇಲೆ ತಾನು ಮಾಡಬೇಕಾದ ಕೆಲಸಕ್ಕೆ ಹೋದನು. ಅಮೃತರಾಯನು ಮನೆಗೆ ಬಂದಾಗ ಭಾಸ್ಕರನು ಅರ್ಧ ರೂಪಾಯಿ ಹೇಗೆ ವೆಚ್ಚಮಾಡಿದನೋ ನೋಡೋಣವೆಂದು ಅವನನ್ನು ಕರೆದು, "ಅರ್ಧ ರೂಪಾಯಿ ಹೇಗೆ ವೆಚ್ಚ ಮಾಡಿದೆ?" ಎಂದು ಕೇಳಲು, "ಸ್ವಾಮಿ, ಒಂದು ಇಂಗ್ಲೀಷ್ ಮೊದಲನೇ ಪುಸ್ತಕ, ಒಂದು ಸಿಲೇಟಿನ ಹಲಗೆ, ಬಳಪ ಕಡ್ಡಿಗಳನ್ನು ಸಹ ಕೊಂಡುಕೊಂಡೆನು. ಪುಸ್ತಕದಲ್ಲಿದ್ದಂತೆಯೇ ಹಲಿಗೆಯ ಮೇಲೆ ಬರೆಯುವುದಕ್ಕೆ ಪ್ರಯತ್ನಮಾಡುತ್ತಿದ್ದೇನೆ. ಇನ್ನು ಐದು ದುಡ್ಡುಗಳುಳಿದಿವೆ. ಮುಂದೇನಾದರೂ ಕೆಲಸಕ್ಕೆ ಬೇಕಾದೀತೆಂದು ಇಟ್ಟಿದ್ದೇನೆ" ಎಂದಾಗ ಅಮೃತರಾಯನು ಅತಿ ಸಂತೋಷಪಟ್ಟು, ಈ ಹುಡುಗನಿಗೆ ಪೂಜೆಯ ಭಟ್ಟನ ಪಡಿಚಾರಕವಲ್ಲ, ವಿದ್ಯೆಯನ್ನು ಕಲಿಸಿದರೆ, ಸಾರ್ಥಕವಾಗುವುದೆಂದು ಮನಸ್ಸಿನಲ್ಲೇ ಅಂದುಕೊಂಡು, "ಭಾಸ್ಕರಾ, ನೀನು ನಾಳೆ ಮೊದಲುಗೊಂಡು ಪಡಿಚಾರಕನ ಕೆಲಸ ಮಾಡಲವಶ್ಯವಿಲ್ಲ; ಶಾಲೆಗೆ ಹೋಗಬೇಕು, ಬಲ್ಲಿಯಾ?" ಎಂದಾಜ್ಞಾಪಿಸಿ, ಅವನಿಗೆ ಉಟ್ಟುಕೊಳ್ಳುವುದಕ್ಕೆ ಒಂದು ವೇಷ್ಟಿಯ ಜೋಡಿ, ತೊಡಿಗೆಗೆ ಎರಡು ಚಿಕ್ಕ ಅಂಗಿಗಳು, ಒಂದು ಸಣ್ಣ ಯಲವಸ್ತ್ರ, ತಲೆಗೊಂದು ಮಣಿಗಳ ಟೊಪ್ಪಿ ಸಹ ತೆಗೆಯಿಸಿಕೊಟ್ಟನು. ಭಾಸ್ಕರನು ಈ ಆಜ್ಞೆಯನ್ನು ಶಿರಸಾ ವಹಿಸಿ ಮನೆಗೆ ಹೋಗಿ, ಅಮೃತಾರಾಯನು ಕೊಟ್ಟ ಉಡಿಗೆಯನ್ನು ತಾಯಿಗೆ ತೋರಿಸಿ, "ತಾಯೇ, ನಾನು ನಾಳಿನಿಂದ ಶಾಲೆಗೆ ಹೋಗಬೇಕಂತೆ. ಪಡಿಚಾರಕನ ಕೆಲಸ ಮಾಡಲವಶ್ಯವಿಲ್ಲವೆಂದು ಅಮೃತರಾಯರು ಹೇಳಿದ್ದಾರೆ" ಎಂದು ಹೇಳಲು, ಆಕೆಯು ಬಹು ಸಂತೋಷಪಟ್ಟು, "ಕಂದಾ, ಶಾಲೆಯಲ್ಲಿ ಬಹು ಬುದ್ಧಿಯಿಂದ ಕಲಿತುಕೊಂಡು ನಿನ್ನನ್ನು ಶಾಲೆಗೆ ಕಳುಹಿಸಿದ್ದು ಸಾರ್ಥಕವಾಯಿತೆಂದೆನ್ನಿಸು" ಎಂದು ಹೇಳಿ ಹುಡುಗನನ್ನು ಯಜಮಾನನ ಮನೆಗೆ ಕಳುಹಿಸಿಕೊಟ್ಟಳು.

# ೨೦

ಭಾಸ್ಕರನು ಅಮೃತರಾಯನ ಅಪ್ಪಣೆ ಪ್ರಕಾರ ಪ್ರತಿ ದಿವಸವೂ ಶಾಲೆಗೆ ಹೋಗಿ ತನ್ನ ಪಾಠಗಳನ್ನು ಬಹಳ ಮನಸ್ಸುಕೊಟ್ಟು ಕಲಿಯುತ್ತಾ, ಮನೆಗೆ ಬಂದಾಗ ಸಮಯವನ್ನು ವೃಥಾ ಕಳೆಯದೆ ಹಿಂದಿನ ಮತ್ತು ಮರುದಿನದ ಪಾಠಗಳನ್ನು ಓದಿ ಹೃದ್ಗತ ಮಾಡಿಕೊಂಡು ತನ್ನ ಕ್ಲಾಸಿನಲ್ಲಿದ್ದ ಹುಡುಗರನ್ನೆಲ್ಲ ಕಲಿಯುವಿಕೆಯಲ್ಲಿ ಹಿಂದೆ ಹಾಕಿ ಪ್ರತಿಯೊಂದು ಪರೀಕ್ಷೆಯಲ್ಲೂ ಜಯಿಸಿ, ಅಸಾಧಾರಣವಾದ ಬುದ್ಧಿಕೌಶಲವನ್ನೂ, ಇನ್ನೂ ಹೆಚ್ಚು ಕಲಿಯಬೇಕೆಂಬ ತವಕವನ್ನೂ ತೋರಿಸಿದುದರಿಂದ ಮಧ್ಯದಲ್ಲೊಂದೊಂದು ಕ್ಲಾಸುಬಿಟ್ಟು ಮುಂದಿನ ಕ್ಲಾಸಿಗೆ ಉನ್ನತಿಯನ್ನು ಹೊಂದುತ್ತಾ, ಮೂರು ನಾಲ್ಕು ವರುಷಗಳೊಳಗೆ, ಅಂದರೆ ಅವನಿಗೆ ಹದಿನೈದು ವರುಷಪ್ರಾಯ ತುಂಬುವಾಗ ಸಕಲ ಕಲಾಶಾಲೆಯ ಮೆಟ್ರಿಕ್ಯುಲೇಶನ್ ಎಂಬ ಪರೀಕ್ಷೆಯಲ್ಲಿ ಒಂದನೇ ತರಗತಿಯಲ್ಲಿ ಅಗ್ರಣಿಯಾಗಿ ತೇರ್ಗಡೆಪಟ್ಟನು. ಅಮೃತರಾಯನು ಬಹು ಸಂತೋಷಪಟ್ಟು ಇನ್ನು ಫಸ್ಟ್ ಆರ್ಟ್ಸ್ ಎಂಬ ಪರೀಕ್ಷೆಯ ಪಾಠಗಳನ್ನು ಕಲಿಯುವುದಕ್ಕೆ ಹುಡುಗನಿಗೆ ಬೇಕಾದ ದ್ರವ್ಯಸಹಾಯವನ್ನು ಮಾಡಿ, ಜುಬಿಲೀ ಕೊಲೆಜ್ ಎಂಬ ಶಾಲೆಯಲ್ಲಿ ದಾಖಲುಮಾಡಿಸಿದನು. ಭಾಸ್ಕರನು ಅಲ್ಲಿಯೂ ಮೊದಲಿನಂತೆಯೇ ಹಗಲಿರುಳಲ್ಲೂ ಮನಸ್ಸು ಕೊಟ್ಟು ಕಲಿತು, ಈ ಸಾರಿಯೂ ಪ್ರಥಮ ತರಗತಿಯಲ್ಲಿ ಅಗ್ರಣಿಯಾಗಿ ತೇರ್ಗಡೆಪಟ್ಟು, ಪ್ರೈಜಸ್ ಎಂಬ ಬಹುಮಾನಗಳನ್ನು ಹೊಂದಿದನು. ಆ ಮೇಲೆ ಗಟ್ಟಿಗರಾದ ಹುಡುಗರನ್ನು ಆರಿಸಿ ತೆಗೆಯುವ ಯೋಗ್ಯತಮೋತ್ಕರ್ಷಕ ಪರೀಕ್ಷೆಯಲ್ಲಿ ಜಯಿಸಿ, ಸ್ಕೊಲರ್‌ಶಿಪ್ ಎಂಬ ವೃತ್ತಿಯನ್ನು ಸಂಪಾದಿಸಿ, ಮದ್ರಾಸಿನ ಸಂಸ್ಥಾನ ಶಾಲೆ ಎಂಬ ಶಾಲೆಯಲ್ಲಿ ಬಿ.ಎ. ಎಂಬ ಪರೀಕ್ಷೆಗೋಸ್ಕರ ಕಲಿಯಲು ಪ್ರಾರಂಭಿಸಿದನು. ಭಾಸ್ಕರನು ಮೆಟ್ರಿಕ್ಯುಲೇಶನ್ ಮತ್ತು ಫಸ್ಟ ಆರ್ಟ್ಸ್ ಪರೀಕ್ಷೆಗಳನ್ನು ಜಯಿಸುವಾಗ ಅವನ ನೆರೆಯಲ್ಲಿದ್ದ ಅವನ ಸಹಾಧ್ಯಾಯಿಯಾದ ಸಂಜೀವರಾಯನೆಂಬ ಒಬ್ಬ ಹುಡುಗನು ಸಹ ಆ ಪರೀಕ್ಷೆಗಳನ್ನು ಜಯಿಸಿದ್ದನು. ಅವರಿಬ್ಬರೂ ಆ ಪರೀಕ್ಷೆಗಳಿಗೋಸ್ಕರ ಕಲಿಯಬೇಕಾದ ವಿಷಯಗಳಲ್ಲಿ ಸಂಸ್ಕೃತ ಭಾಷೆಯು ಅವರ ಚುನಾಯಿಕೆಯ ವಿಷಯವಾಗಿದ್ದುದರಿಂದ ಅದನ್ನು ಅವರು ಒಟ್ಟಿನಲ್ಲೇ ಕಲಿಯುತ್ತಾ ಇದ್ದು ಪರಸ್ಪರ ಪ್ರೀತಿಯಿಂದಲೂ ಸ್ನೇಹದಿಂದಲೂ ಇದ್ದರು. ಈಗ ಮದ್ರಾಸಿಗೆ ಹೋಗುವಾಗಲೂ ಇಬ್ಬರೂ ಸಂಗಡಲೇ ಹೋಗಿ ಒಂದೇ ಮನೆಯಲ್ಲಿ ಅಣ್ಣತಮ್ಮಂದಿರಂತೆ ಇದ್ದುಕೊಂಡು, ಕೆಲವು ತಿಂಗಳು ಪರ್ಯಂತರ ಕಲಿತು, ವರುಷಾವಧಿಯ ಅಡಿಕೇ ದಿವಸಗಳು ಪ್ರಾರಂಭಿಸುತ್ತಲೇ ಭಾಸ್ಕರನು ತನ್ನ ಸಂರಕ್ಷಕನಾದ ಅಮೃತರಾಯನನ್ನೂ ತಾಯಿಯನ್ನೂ ಕಂಡು ಹೋಗೋಣವೆಂದಾಲೋಚಿಸಿ, ಸಂಜೀವರಾಯನ ಸಮೇತ ಕಮಲಪುರಕ್ಕೆ ತಿರಿಗಿ ಬಂದನು. ಸಂಜೀವರಾಯನನ್ನು ಆತನ ಮನೆವರೆಗೆ ಮುಟ್ಟಿಸಿ ತಾನು ತನ್ನ ಮನೆಗೆ ಬಂದು ತಾಯಿಯನ್ನು ಕಂಡು ನಮಸ್ಕರಿಸಲು, ಅವಳು "ಬಂದೆಯಾ? ಕಂದಾ, ಬಹಳ ದಿವಸಗಳಿಂದ ನಿನ್ನನ್ನು ಕಾಣದೆ, ಆಗಾಗ್ಗೆ ನೀನು ಬರೆಯುತ್ತಿದ್ದ ಕಾಗದ ಪತ್ರಗಳಿಂದ

ಸುಕ್ಷೇಮಿಯಾಗಿದ್ದೆ ಎಂದು ಕಂಡುಬಂದರೂ, ನಿನ್ನನ್ನು ಪ್ರತ್ಯಕ್ಷವಾಗಿ ಕಾಣಬೇಕೆಂದು ಬಹಳವಾಗಿ ಬಯಸುತ್ತಿದ್ದೆನು" ಎಂದನೇಕ ಪ್ರೀತಿಯ ವಚನಗಳನ್ನಾಡಿ, ಬೇಗನೆ ಚಾ ರೊಟ್ಟಿ ಮುಂತಾದ್ದನ್ನು ಫಲಾಹಾರಕ್ಕೆ ಕೊಟ್ಟು, ಫಲಾಹಾರವಾದ ಬಳಿಕ "ಕಂದಾ, ಈ ಹೊತ್ತೂ ನಾಳೆಯೂ ಇಲ್ಲೇ ಇದ್ದು ನಾಳೆ ಒಂದಿಷ್ಟು ಎಣ್ಣೇ ಹಾಕಿ ಎರಕೊಂಡು ಸ್ವಲ್ಪ ವಿಶ್ರಾಂತಿಯನ್ನು ಪಡೆದ ಮೇಲೆ ಅಮೃತರಾಯರಲ್ಲಿಗೆ ಹೋದರಾಗದೆ?" ಎಂದು ಕೇಳಲು, ಅವನು, "ನಿನ್ನಪೇಕ್ಷೆಯಂತೇ ಆಗಲಿ. ಪರಂತು ನಾನಿಲ್ಲಿಗೆ ಬಂದು ತಲಪಿದ ಮೇಲೆ ಸಂರಕ್ಷಕರನ್ನು ಕೂಡಲೇ ಹೋಗಿ ಕಾಣುವುದು ಯೋಗ್ಯವೆಂದು ಕಾಣುತ್ತೆ. ಈಗಲೇ ಹೋಗಿ ಕಂಡು ಮಾತನಾಡಿಕೊಂಡು ಬರಲೇ?" ಎಂದು ಕೇಳಿದನು. ಅದಕ್ಕವಳು–"ಯೋಗ್ಯವಾದ ಕೆಲಸವೇ, ಕಂಡು ಬಾ" ಎಂದು ಹೇಳಿ ಕಳುಹಿಸಿದಳು.

ಭಾಸ್ಕರನು ಒಡನೆ ಎದ್ದು ಅಮೃತರಾಯನಲ್ಲಿಗೆ ಹೋಗಿ ಅವನನ್ನು ನಮಸ್ಕರಿಸಿ ನಿಲ್ಲಲು, ಅವನು–"ಕುಳ್ಳಿರು, ಈಗಲೇ ಬಂದೆಯಾ? ಕ್ಷೇಮವಷ್ಟೆ?" ಎಂದು ಪ್ರೀತಿಯಿಂದ ಮಾತನಾಡಿ, ಹೆಂಡತಿಯಾದ ಜಲಜಾಕ್ಷಿಯನ್ನು ಕರೆದು, "ಇಗೋ ನಮ್ಮ ಭಾಸ್ಕರರಾಯ, ಈಗಲೇ ಮದ್ರಾಸಿನಿಂದ ಬಂದು ಮುಟ್ಟಿದ್ದಾನೆ. ಒಂದಿಷ್ಟು ಚಾ ಮುಂತಾದ ಫಲಾಹಾರವನ್ನು ಕೊಡು" ಎಂದು ಹೇಳಲು, ಆಕೆಯು ತಾಯಿಯಂತೆ ಪ್ರೀತಿಯಿಂದ "ಬಾ ಭಾಸ್ಕರಾ," ಎಂದು ಒಳಗೆ ಕರೆದುಕೊಂಡು ಹೋಗಿ ಕುಳ್ಳಿರಿಸಿ, "ಚೆನ್ನಾಗಿದ್ದೀಯಾ? ತಾಯಿಯನ್ನು ಕಂಡು ಬಂದೆಯಾ?" ಎಂದು ಕೇಳಲು, "ತಮ್ಮೆಲ್ಲರ ದಯದಿಂದ ಚೆನ್ನಾಗಿದ್ದೇನೆ. ತಾಯಮ್ಮನವರನ್ನು ಕಂಡು ಮಾತನಾಡಿ ಈಗಲೇ ಫಲಾಹಾರ ಮಾಡಿ ಬಂದೆನು. ನೀವು ತೊಂದರೆ ಪಡೆಯಬೇಡಿರಿ" ಎಂದು ಹೇಳಿ, ಮದ್ರಾಸಿನ ವರ್ತಮಾನವೆಲ್ಲವನ್ನು ತಿಳುಹಿಸಿ, ಮುಖ್ಯವಾಗಿ ತಾನು ತನ್ನ ಸಮಯವನ್ನು ಹೇಗೆ ಉಪಯೋಗಿಸುತ್ತಿದ್ದೆ, ಶಾಲೆಯಿಂದ ವೃತ್ತಿಯಾಗಿ ಸಿಕ್ಕುತ್ತಿದ್ದ ಹಣದಿಂದಲೂ ಅಮೃತರಾಯನು ಆಗಾಗ್ಗೆ ಕಳುಹಿಸುತ್ತಿದ್ದ ಹಣದಿಂದಲೂ ತಾನು ಮಿತಿಯಿಂದ ಖರ್ಚುಮಾಡಿ ಹೇಗೆ ಕೆಲವು ಹಣವನ್ನು ಕೂಡಿಸಿಟ್ಟೆನು, ಎಂಬ ವಿವರಗಳನ್ನು ಸಹ ಹೇಳಿ, "ತಾಯಮ್ಮನವರು ಎರಡು ದಿವಸ ನಾನು ಅವರಿದ್ದಲ್ಲೇ ನಿಲ್ಲಬೇಕೆಂದು ಹೇಳಿದ್ದಾರೆ. ಅದು ವಿಹಿತವೆಂದು ನಿಮಗೆ ಕಾಣುವುದಾದರೆ, ನಾನು ಹೋಗಲೇ?" ಎಂದು ಕೇಳಲು ಜಲಜಾಕ್ಷಿಯು ಗಂಡನ ಬಳಿಗೆ ಹೋಗಿ, "ನಮ್ಮ ಭಾಸ್ಕರನು ಒಂದೆರಡು ದಿವಸ ತಾಯಿ ಇದ್ದಲ್ಲೇ ಇದ್ದುಕೊಂಡು ಆ ಮೇಲೆ ಬರುತ್ತಾನಂತೆ. ಇಲ್ಲೇ ಇದ್ದರೇನಾಗುತ್ತೆ?" ಎಂದು ಕೇಳುವಷ್ಟರಲ್ಲಿ ಭಾಸ್ಕರನು ಹೊರಗೆ ಬಂದು, "ನಿಮಗೆ ಸಮರ್ಪಕವಾದರೇನೆ" ಎಂದು ಮೆಲ್ಲಗೆ ಹೇಳಿದನು. ಆ ಮಾತನ್ನು ಕೇಳಿ ಅಮೃತರಾಯನು, "ನಮಗೆ ಸಮರ್ಪಕವೇ. ಎರಡು ದಿವಸ ತಾಯಿಯ ಹತ್ತಿರವಿದ್ದು ಆ ಮೇಲೆ ಬರಬಹುದು" ಎಂದು ಹೇಳಿ, ಸೇವಕನಾದ ದೂಮನನ್ನು ಕರೆದು, ಭಾಸ್ಕರನ ಸಂಗಡ ತಾಯಿಯ ಮನೆ ವರೆಗೆ ಹೋಗಿ ಮುಟ್ಟಿಸಿ ಬರಬೇಕೆಂದು ಹೇಳಿ, ಅವನನ್ನು ಸಂಗಡಕ್ಕೆ ಕೊಟ್ಟು ಕಳುಹಿಸಿದನು. ಜಲಜಾಕ್ಷಿಯು ಒಳಗೆ ಮಂಚದ ಕೋಣೆಗೆ ಹೋಗಿ ಮಂಚದ ಮೇಲೆ ಕುಳಿತುಕೊಂಡು ತನ್ನೊಳಗೆ ತಾನೇ– 'ಅಹ!

ನಮಗಿಷ್ಟು ಐಶ್ವರ್ಯವಿದ್ದೇನು? ಪುತ್ರ ಸಂತತಿ ಇಲ್ಲ. ದೇವರು ನಮ್ಮ ಮೇಲೆ ಕರುಣವಿಟ್ಟು ಭಾಸ್ಕರನಂತಹ ಒಂದು ಮಗುವನ್ನು ನಮಗೆ ದಯಪಾಲಿಸಿದರಾಗದೇ? ಸುಶೀಲೆಯು ಎಷ್ಟು ಬಡವೆಯಾದರೇನು? ಭಾಸ್ಕರನು ಅವಳಿಗೆ ದ್ರವ್ಯನಿಧಿ ತಾನೇಯಲ್ಲವೇ? ನಮ್ಮಲ್ಲಿ ಸಂತತಿಯಾಗುವುದು ಇನ್ನ್ಯಾವಾಗ? ಇನ್ನು ನಮ್ಮ ಮಗು ಭಾಸ್ಕರನೇ. ಸುಶೀಲೆಯನ್ನು ಸಹ ನಮ್ಮಲ್ಲೇ ತಂದಿರಿಸಿಕೊಂಡರಾಯಿತು. ಒಂದು ವೇಳೆ ನಮ್ಮಲ್ಲಿ ಮುಂದೆ ಮಗು ಹುಟ್ಟಿದರೂ ಭಾಸ್ಕರನಂತಹ ಮಗುವೇ ಹುಟ್ಟುವುದೆಂದೇನು ನಿಶ್ಚಯ? ಈ ವಿಷಯವನ್ನು ಪತಿಯೊಡನೆ ಈ ಹೊತ್ತೇ ಮಾತನಾಡದೆ ಇರಲಾರೆನು' ಎಂದು ಯೋಚಿಸಿದಳು.

ಇತ್ತಲಾಗೆ ಭಾಸ್ಕರನು ದೂಮನ ಸಮೇತ ಮನೆಗೆ ಹೋಗುತ್ತಾ ದಾರಿಯಲ್ಲಿ ಭೀಮರಾಯನು ಪರಿವಾರ ಸಮೇತ ಅಭಿಮುಖವಾಗಿ ಬರುವುದನ್ನುಕಂಡು, ಸ್ವಲ್ಪ ದಾರಿಬಿಟ್ಟು ನಿಂತು, "ಸ್ವಾಮಿ" ಎಂದು ನಮಸ್ಕರಿಸಿ ಮನೆಗೆ ಹೋಗಿ ಮುಟ್ಟಿದನು. ಮನೆಗೆ ಮುಟ್ಟಿದಾಗ ದೂಮನು,

| | |
|---|---|
| "ದಾನೆ ಸಾಮಿ? ಇನಾಮ್ ಮಿನಿದಾಲಾ ಉಂಡೇ? ನನಾ ರಡ್ಡ್ ವರ್ಸೊಡ್ ಮುನ್‌ಶೀಪೆರಾದ್ ಬರ್ಪಾರ್, ತೂಲೆ. ಆಪಗತಾ ಇನಾಮ್ ಯೆಂಚಲಾ ಉಂಡೇ; ಇತ್ತೆ ದಾಲಾ ಉಂಡೇ?" | "ಏನು ಸ್ವಾಮೀ? ಇನಾಮು ಮುಂತಾದ್ದೇನಾದರೂ ಇದೆಯೇ? ಇನ್ನು ಎರಡು ವರ್ಷದಲ್ಲಿ ಮುನ್‌ಶೀಪರಾಗಿ ಬರುತ್ತೀರಿ ನೋಡಿರಿ. ಆಗಿನ ಇನಾಮು ಹೇಗೂ ಇದೆಯಷ್ಟೆ. ಈಗೇನಾದರೂ ಇದೆಯೇ?" |

ಎಂದು ಕೇಳಲು ಭಾಸ್ಕರನು ಸ್ವಲ್ಪ ಹಳತಾದ ಟ್ವೀಡ್ ವಸ್ತ್ರದ ಒಂದು ಅಂಗಿಯನ್ನು ಆತನಿಗೆ ಇನಾಮಾಗಿ ಕೊಟ್ಟನು.

## ೨೧

ಜಲಜಾಕ್ಷಿಯು ತನ್ನ ಮನೋಭಿಪ್ರಾಯವನ್ನು ಗಂಡನಿಗೆ ತಿಳುಹಿಸಲಾಗಿ ಅವನು "ಹುಡುಗನೆಂತೂ ನಮ್ಮ ಸಂರಕ್ಷಣೆಯಲ್ಲೇ ಇದ್ದು ಕಲಿಯುತ್ತಿದ್ದಾನಷ್ಟೇ? ಅವನು ದೇವರ ದಯದಿಂದ ಬಿ.ಎ. ಪರೀಕ್ಷೆಯಲ್ಲಿ ತೇರ್ಗಡೆಪಡಲಿ. ಆ ತರುವಾಯ ಬೇಕಾದಂತೆ ಪ್ರವರ್ತಿಸಬಹುದು. ಸಮಯವಿದೆಯಷ್ಟೆ?" ಎಂದವಳನ್ನು ಸಂತೈಸಿದನು.

ಇತ್ತಲಾಗಿ ಭೀಮರಾಯನು ಆ ರಾತ್ರಿ ನಿತ್ಯ ನಿಯಮದ ಪ್ರಸಂಗ, ಹುರುಳಿಯ ತಾಳದ, ಪಾನಕ, ಫಲಾಹಾರ ಮುಂತಾದ್ದನ್ನು ತೀರಿಸಿ ಮಂಚದಲ್ಲಿ ಶಯನವಾಗಿದ್ದಾಗ ಅಂಬಾಬಾಯಿ ಯೊಡನೆ,

"ಕೇಳಿದೆಯೆನೇ? ಆ ಸುಂದರರಾಯನ ಮಗ! ಮೂರು ಬೆರಳಷ್ಟಿಲ್ಲದ ಪುಸ್ಕೋಟ ತಿರಿದುಂಬುವ ಚಿಂದಿಹುಡುಗ! ನಾಲ್ಕು ಇಂಗ್ರೇಜಿ ಅಕ್ಷರಗಳನ್ನು ಕಲಿತು, ಮದ್ರಾಸಿಗೆ ಹೋಗಿ,

ಹಣೆವರೆಗೆ ಜುಟ್ಟು ಬೆಳೆಯಿಸಿ, ಅವನ ಹಾತ್ ಬೇಡಿಯ ಅಂಗಿಗಳೋ, ಸೊಂಟದ ಕಮ್ಮರಬಂದೋ, ಕಣ್ಣಿಗೆ ಕಾಣಿಸದಷ್ಟು ಸಣ್ಣ ಹಣೆಬೊಟ್ಟೋ, ಓಹೋ! ಗಮ್‌ಚಾರಿ ಏನು ಹೇಳಲಿ, ನಾನು ಮನೆಗೆ ಬರುತ್ತಾ ದಾರಿಯಲ್ಲಿ ಕಂಡೆನು. ಅವನು ನನಗೆ ದಾರಿಬಿಟ್ಟು ತುಸಾ ನಿಂತು ನಮಸ್ಕರಿಸಿ, ಅವನ ಮನೆಕಡೆಗೆ ಹೋದನು."

"ಅದು ಹಾಗೆಯೇ. ಮದ್ರಾಸಿಗೆ ಹೋದ ಕೂಡಲೆ ಸ್ನಾನಮಾನ, ಜಪತಪ, ಸಂಧ್ಯಾವಂದನ, ಅನುಷ್ಠಾನವೆ ಮುಂತಾದ ಜಾತಿಯ ನಿಯಮಗಳು ಘಟ್ಟ ಹತ್ತುತ್ತಿವೆ. ಜುಟ್ಟು ಬೋಳಿಸಿ ಕ್ರಿಸ್ತಾನಿಯರಂತೆ ಕ್ಷೌರ ಬೆಳೆಯಿಸಿ, ಗುರುಹಿರಿಯರ ನಯನೀತಿ ಏತರ ಲಕ್ಷ್ಯವೂ ಇಲ್ಲದೆ ಮನಸ್ವಿಯಾಗಿ ನಡೆದುಕೊಳ್ಳುತ್ತಾರೆ. ಕೆಲರು ಬ್ರಹ್ಮಸಮಾಧಿಯೋ, ಏನದು? ಅದರಲ್ಲಿ ಸೇರುತ್ತಾರೆ. ಹೀಗೆಲ್ಲ ಹಲವು ಬಗೆಯ ವಿಕಾರಗಳನ್ನು ಮಾಡುತ್ತಾರೆ. ಶ್ರೀ ಗುರುಗಳಂತೂ ಇಂತಹರ ವಿಷಯದಲ್ಲಿ ಸಾಕಷ್ಟು ಮನಸ್ಸು ಕೊಡುವುದಿಲ್ಲ."

"ಶ್ರೀ ಗುರುಗಳಿಗದೆಲ್ಲ ಎಲ್ಲಿನ ಗೊತ್ತು? ಅವರು ತಮ್ಮ ಧ್ಯಾನಾನುಷ್ಠಾನ, ಪೂಜೆ, ಪಾರಾಯಣ ಮುಂತಾದ್ದನ್ನೇ ನೋಡಿಕೊಂಡಿರುತ್ತಾರೆ. ನಮ್ಮಂತಹರು ಅಂತಹ ಪ್ರಕರಣಗಳನ್ನು ಬಿನ್ನಹಪತ್ರದ್ವಾರಾ ಗೋಚರಪಡಿಸಿದರೆ ತಾನೇ ಅವರು ಅದಕ್ಕೆ ತಕ್ಕ ಏರ್ಪಾಡುಗಳನ್ನು ಮಾಡುವರು."

"ಹಾಗಾದರೆ ಈ ಹುಡುಗನ ವಿಷಯದಲ್ಲೊಂದು ಬಿನ್ನಹಪತ್ರವನ್ನು ಬರೆದುಹಾಕಿ ತುಸಾ ಹಮ್ಮು ಮುರಿದರಾಗದೆ?"

"ನೋಡಬೇಕು,– ಆದರೆ ನಾವಾಗಿ ಅವನ ಪ್ರಕರಣ ಮುಂತರುವುದಕ್ಕಿಂತಲೂ, ಇಲ್ಲಿ ಆಗಾಗ್ಗೆ ಬಿನ್ನಹಪತ್ರಗಳನ್ನು ಬರೆದುಕೊಳ್ಳುವವರು ಕೆಲವರಿದ್ದಾರಷ್ಟೆ, ಅವರಿಗೆ ರವಷ್ಟು ಸೂಚನೆ ಕೊಟ್ಟುಬಿಡುತ್ತೇನೆ. ನಾವೇಕೆ ಮುಂದೆ ಬೀಳಬೇಕು?"

"ಹಾಗಲ್ಲ; ನನ್ನ ಮಾತೊಂದು ಕೇಳಿರಿ. ಮೊದಲಿನಿಂದಲೇ ತಾವು ನನ್ನ ಮಾತು ಕೇಳಿದುದರಿಂದಲ್ಲವೇ ನಾವು ಈ ಪದವಿಗೆ ಬಂದು ಇಷ್ಟನ್ನೆಲ್ಲ ಕೊಂಡಿದ್ದೇವೆ?"

"ಸರಿ, ಸರಿ! ನೀನು ಬಹು ಜಾಣೆ. ಏನು ಮಾಡಬೇಕೆಂದು ಹೇಳು."

"ಬಿನ್ನಹಪತ್ರ ಮಾಡಿ ಹಾಕಬೇಕೆಂದು ನಾನು ಹೇಳಿದ್ದು. ಬೇರೆಯವರಿಂದ ಬರೆಯಿಸಬೇಕೆಂದಲ್ಲ. ಬೇರೆಯವರ ಹೆಸರಿನಲ್ಲಿ ನಾವೇ ಒಂದು ತಳ್ಳಿಯ ಪತ್ರಮಾಡಿ ಹಾಕಬೇಕು. ಆಗ ಅದನ್ನು ಯಾರು ಮಾಡಿದ್ದೆಂಬುದು ಗೊತ್ತಾಗದು. ಒಂದು ಕೆಲಸ ಮಾಡಿದರೆ ನೋಟನಿಮಿತ್ಯಕ್ಕೆ ಸಿಕ್ಕಬಾರದು. ಅದೀಗ ಚಮತ್ಕಾರ."

"ವಾಸ್ತವವೇ, ಹಾಗೆಯೇ ಮಾಡುತ್ತೇನೆ."

"ಅದಂತಿರಲಿ, ಸದ್ಯ ನಮ್ಮ ಇಂದಿರೆಗೆ ಏಳು ವರುಷಗಳು ತುಂಬಿ ಎಂಟನೆಯದು ನಡೆಯುತ್ತಿದೆ. ಅವಳ ಕಲ್ಯಾಣದ ವಿಷಯವೇನಾದರೂ ಆಲೋಚಿಸಿದ್ದೀರಾ?"

"ಅದನ್ನಾಲೋಚಿಸಬಹುದಷ್ಟೆ."

"ಇದೀಗ ತಮ್ಮ ವಿದ್ಯಮಾನ; ಕಡೆಯುವ ಕಲ್ಲನ್ನು ನೆನೆಯುವುದಕ್ಕೆ ಹಾಕಿದ ಹಾಗೆ.

'ಮದುವೆ ಮಾಡಿದವನೇ ಬಲ್ಲ, ಮನೆ ಕಟ್ಟಿದವನೇ ಬಲ್ಲ' ಎಂಬ ಗಾದೆ ಕೇಳಿದ್ದೀರಷ್ಟೆ? ಮದುವೆಯೆಂದರೆ ಸಾಧಾರಣ ವಿಷಯವಲ್ಲ. ಪ್ರಥಮತಃ ಒಳ್ಳೇ ಜಾತಕ ಸಿಕ್ಕುವುದೇ ದುರ್ಲಭ. ಅದು ಸಿಕ್ಕಿದರೆ, ಆ ಮೇಲೆ ಕುಟುಂಬ ನೋಡಬೇಕು. ನಮ್ಮ ಕುಟುಂಬದಷ್ಟೇ ಮರ್ಯಾದೆಯುಳ್ಳ ಕುಟುಂಬವಷ್ಟೇ ಬೇಕಾದದ್ದು? ನಾನಾದರೋ, ಹುಡುಗಿಯನ್ನು ಈ ವರೆಗೆ ಜಾಗ್ರತೆಯಿಂದ ಬೆಳೆಯಿಸಿ, ಉದಯರಾಗದ ಪಟನೆ, ಒಲೇಬಾಯಿಯ ಹತ್ತಿರದ ಪಟನೆ, ಕಡೆಯುವ ಕಲ್ಲಿನ ಮೇಲಿನ ಪಟನೆ, ದೀಪ ಹಚ್ಚುವಾಗಿನ ಪಟನೆ, ಗಜೇಂದ್ರ ಮೋಕ್ಷ, ಮಂಗಳಗೌರಿಯ ಕಥೆ, ಬೀಗರ ಹಾಡು, ಜೋಗೀ ಹಾಡು, ಕವುಲೆ ಹಾಡು ಇವೆ ಮುಂತಾದ ಬಗೆಬಗೆಯ ಹಾಡುಗಳನ್ನೂ ತಕ್ಕಮಟ್ಟಿಗೆ ಅಡಿಗೆಯ ಕೆಲಸಗಳನ್ನೂ ಕಲಿಸಿದ್ದೇನೆ. ಹಾಡುಗಳನ್ನು ಓದಿ ಬರೆದು ಪಾಠಮಾಡುವುದಕ್ಕೆ ಅವಶ್ಯವಿದ್ದಷ್ಟು ಬರಹ ಸಹ ಕಲಿಸಿದ್ದೇನೆ. ನಮ್ಮ ಪುಣ್ಯದಿಂದ ಅಂಗೈಯಲ್ಲಿ ಆಡಿಸುವುದಕ್ಕೂ ಸೀರೆಯ ಸೆರಗಿನಿಂದ ಮುಖ ಉಜ್ಜುವುದಕ್ಕೂ ಯೋಗ್ಯನೆಂಬಷ್ಟು ಚಿಕ್ಕ ಪ್ರಾಯದ ಅಳಿಯನು ದೊರಕಿದರೆ, ನಮ್ಮ ಜನ್ಮವು ಸಾರ್ಥಕವಾಯಿತು. ಇಂಗ್ರೇಜಿ ಕಲಿತ ಪೋಕರಿ ಹುಡುಗರು ನಮಗೆ ಬೇಡ, ಗೊತ್ತಾಯಿತೇ? ತಾವಿನ್ನು ಕಾಲಹರಣ ಮಾಡದೆ ಕೆಲವು ಒಳ್ಳೇ ಜಾತಕಗಳನ್ನು ಸಂಗ್ರಹಿಸಿ ನಾಳೆಯೇ ಹತ್ತುಕೋಟೆ ಸೀತಾರಾಮ ಜೋಯಿಸನನ್ನು ಕರೆಯಿಸಿ ಜಾತಕದ ಘಟಿತಾರ್ಥವನ್ನು ನೋಡಿಸಬೇಕು, ಮರೆಯಬಾರದಷ್ಟೆ?"

"ಮರೆಯಲಾರೆನು; ನಾಳೆ ಎದ್ದವನೇ ಬಿನ್ನಹಪತ್ರದ ಕೆಲಸವನ್ನು ಮುಗಿಸಿ ಜಾತಕಗಳನ್ನು ಒಂದು ಗಳಿಗೆಯೊಳಗೆ ಕರೆಯಿಸಿ, ಮೇಲಿನ ಏರ್ಪಾಡುಗಳನ್ನೆಲ್ಲ ನೋಡಿಕೊಳ್ಳುತ್ತೇನೆ, ನೋಡಬಾರದೇ?" ಎಂದುತ್ತರಕೊಟ್ಟನು.

ಭೀಮರಾಯನು ಮಾರಣೆದಿನ ಮುಂಜಾನೆ ಎದ್ದು ಪ್ರಥಮತಃ ಭಾಸ್ಕರರಾಯನ ವಿಷಯದಲ್ಲಿ ಬೇರೆಯವರ ಹೆಸರಿನಲ್ಲಿ ಬಿನ್ನಹಪತ್ರವನ್ನು ಬರೆದು ಸೋಮಯ್ಯನ ಕೈಯಲ್ಲಿ ಕೊಟ್ಟು ಟಪ್ಪಾಲಿಗೆ ಕಳುಹಿಸಿದನು. ಆ ತರುವಾಯ ಸ್ವಲ್ಪ ಹೊತ್ತು ಮನಸಿನಲ್ಲಾಲೋಚಿಸಿ, ಹಲಸೂರು ತ್ರಿಯಂಬಕರಾಯನ ಮಗ ವಿಠಲರಾಯನೆಂಬ ಹುಡುಗನಿಗೆ ಇಂದಿರೆಯನ್ನು ಕೊಡುವುದಾದರೆ, ಬೇರೆ ಯಾವ ನೆಂಟಸ್ತಿಕೆಯನ್ನಾದರೂ ಹುಡುಕಿಕೊಂಡು ಹೋಗಬೇಕಾದ್ದಿಲ್ಲ ವೆಂದು ನಿಶ್ಚಯಮಾಡಿಕೊಂಡರೂ, ಆ ಹುಡುಗನ ಮತ್ತು ಬೇರೆ ಐದಾರು ಕುಟುಂಬದವರಲ್ಲಿಂದ ಜಾತಕಗಳನ್ನು ತರಿಸಿ, ಮಧ್ಯಾಹ್ನನಂತರ ಹತ್ತುಕೋಟೆ ಸೀತಾರಾಮ ಜೋಯಿಸನನ್ನು ಕರೆದು ತರುವುದಕ್ಕೆ ಜನಬಿಟ್ಟು ಹಾಗೆಯೇ ಆತನು ಬಂದುಮುಟ್ಟಿ, ಭೀಮರಾಯನನ್ನು ಕಂಡು, "ರಾಯರೇ, ನಾನು ಈಗ ಬಂದು ತಮ್ಮ ದರ್ಶನವಾದದ್ದು ಮೀನರಾಶಿಯಲ್ಲಾಗಿರುವುದರಿಂದ ಎಣಿಸಿ ಗುಣಿಸಿ ನೋಡುವಾಗ ಜಾತಕಗಳ ಘಟಿತಾರ್ಥ ನೋಡುವುದಕ್ಕೋಸ್ಕರ ನನ್ನನ್ನು ಕರೆಯಿಸಿದ್ದೆಂದು ಕಾಣುತ್ತೆ, ಸರಿಯೋ?" ಎಂದು ಕೇಳಲು, ಭೀಮರಾಯನು, "ಜೋಯಿಸರೇ, ನಿಮ್ಮ ಜೋತಿಷವೆಂದರೆ ಹಸಿ ಗೋಡೆಗೆಸೆದ ಕಲ್ಲು, ಕುಳ್ಳಿರಿ" ಎಂದುಪಚಾರ ಮಾಡಿದನು. ಜೋಯಿಸನು ಪಚಕ್ಕನೇ ಚಕ್ಕಳಬಕ್ಕಳ ಕುಳಿತುಕೊಂಡು, ಕವಡಿಯ ಚೀಲವನ್ನು ಬಿಚ್ಚಿ, ವಿಧ ವಿಧವಾದ ಕವಡಿಗಳನ್ನು ತೆಗೆದು ಒಂದು ಮಣೆಯ ಮೇಲೆ ರಾಶಿ ರಾಶಿಯಾಗಿಟ್ಟು,

ಸೊಂಟದಲ್ಲಿದ್ದ ನಸ್ಯದ ಡಬ್ಬಿಯನ್ನು ತೆಗೆದು, ಅದರ ಮುಚ್ಚಳದ ಮೇಲೆ ಎರಡು, ಬದಿಯಲ್ಲೆರಡು, ಹೀಗೆ ನಾಲ್ಕು ಸಾರಿ ಟಕ್ಕ್ ಟಕ್ಕನೆ ತರ್ಜನಿಯ ಉಗುರಿನಿಂದ ಹೊಡೆದು, ಆ ಮೇಲೆ ಡಬ್ಬಿಯ ಮುಚ್ಚಳವನ್ನು ತೆರೆದು, ಒಂದು ಚಿಮಿಟಿ ತುಂಬಾ ನಸ್ಯವನ್ನು ತೆಗೆದು, ಸೊರ್ರ್ ಸೊರ್ರೆಂದು ಮೂಗಿನಲ್ಲಿ ಸೆಳೆದು, ಒಂದು ನಿಮಿಷ ವರೆಗೆ ಕೆಮ್ಮಿ ಒಂದೆರಡು ಶೀನು ತೆಗೆದು, ಐದಾರು ಸಾರಿ ಉಗುಳಿ, ಆ ಮೇಲೆ ಮೂಗನ್ನೂ ಮುಖವನ್ನೂ ಉಜ್ಜಿಕೊಂಡು, ಇಷ್ಟೆಲ್ಲಾ ಹವಣುಮಾಡಿದ ಮೇಲೆ "ಹುಡುಗನ ಜಾತಕವೆಲ್ಲಿ?" ಎಂದು ಕೇಳಿದನು. ಅಷ್ಟರಲ್ಲಿ ಅಂಬಾಬಾಯಿಯು ಬಂದು ಸಮೀಪದಲ್ಲಿ ಕುಳಿತುಕೊಂಡು, "ಜೋಯಿಸರೇ, ಹುಡುಗಿಯ ಜಾತಕವನ್ನು ಪ್ರಥಮತಃ ಚೆನ್ನಾಗಿ ಪರಿಶೋಧಿಸಿ ನೋಡಿ ಹೇಳಿರಿ. ಆ ಮೇಲೆ ಅದು ಹುಡುಗನ ಜಾತಕಕ್ಕೆ ಕೂಡಿಬರುವುದೋ ಇಲ್ಲವೋ ನೋಡಬಹುದೆ"ಂದಳು. ಜೋಯಿಸನು ಹುಡುಗಿಯ ಜಾತಕವನ್ನು ನೋಡಿ, ಕೋಸುಗಣ್ಣಿನಿಂದ ಅರ್ಧಗಳಿಗೆಯ ಪರ್ಯಂತರ ಆಲೋಚಿಸಿ "ಈ ಹುಡುಗಿಯ ಆಯುರ್ಬಲವು ಚೆನ್ನಾಗಿದೆ. ಸೌಮಾಂಗಲ್ಯ ಗಜಕೇಸರಿ ಯೋಗಗಳು ಸಹಾ ಇವೆ. ಇವುಗಳನ್ನು ಮಿಕ್ಕಿ ಬೇಕಾದ್ದೇನು?" ಎಂದು ಹೇಳಲು, ಭೀಮರಾಯನು ಹೆಂಡತಿ ಹೇಳಿದ ಪ್ರಕಾರ ತ್ರಿಯಂಬಕರಾಯನ ಮಗ ವಿಠಲರಾಯನ ಜಾತಕವನ್ನು ಜೋಯಿಸನ ಕೈಯಲ್ಲಿ ಕೊಟ್ಟು "ಇದರ ಮತ್ತು ಹುಡುಗಿಯ ಜಾತಕದ ಘಟಿತಾರ್ಥವನ್ನು ನೋಡಿರಿ" ಎಂದು ಹೇಳಿದನು. ಜೋಯಿಸನು ಕೆಲವು ಸಮಯ ವರೆಗೆ ಕವಡಿಗಳನ್ನು ರಾಶಿಹಾಕುತ್ತಾ, ವಿಂಗಡಿಸುತ್ತಾ, ಪುನಃ ಬೇರೆ ತರದಲ್ಲಿ ಕುಪ್ಪೆಗೂಡಿಸುತ್ತಾ ಲೆಕ್ಕಹಾಕಿ ನೋಡಿ, ಅನೇಕ ಶ್ಲೋಕಗಳನ್ನು ಹೇಳಿ, ಮನಸ್ಸಿನಲ್ಲಿ ಬ್ರಹ್ಮಾಂಡ ಯೋಚನೆಮಾಡಿ, "ಹುಡುಗನಿಗೆ ದೀರ್ಘಾಯುಷ್ಯ, ಸುಪತ್ನಿಯೋಗ ಸಹ ಇವೆ. ಎರಡು ಜಾತಕಗಳನ್ನು ನೋಡಿದ್ದಲ್ಲಿ ಅಂಶಮಿತ್ರತ್ವ, ಗ್ರಹಮಿತ್ರತ್ವ ಸಹ ಚೆನ್ನಾಗಿ ಕೂಡಿಬರುತ್ತವೆ. ಹುಡುಗನಿಗೆ ಹದಿನೆಂಟನೆಯ ವರುಷದಲ್ಲಿ ಕುಜರಾಹುಗಳ ಸಂಧಿ–(ಈ ಸಂದರ್ಭದಲ್ಲಿ ನಸ್ಯದ ಡಬ್ಬಿಯಿಂದ ಪುನಃ ಒಂದು ಚಿಮಿಟಿ ನಸ್ಯವನ್ನು ತೆಗೆದು ಸೊರ್ರೆಂದು ಸೆಳೆದು, ಮೂಗನ್ನುಜ್ಜಿಕೊಂಡು) ಕುಜರಾಹುಗಳ ಸಂಧಿ–ಅಂದರೆ ಪೂರ್ಣ ಸಂಧಿಯಲ್ಲ, ಯೋಗ ಮಾತ್ರವೇ–ಇದೆ. ಆದರೆ ಅದು ದೊಡ್ಡಮಾತಲ್ಲ. ಆ ಕಾಲದಲ್ಲಿ ಪುರೋಹಿತನಿಗೆ ಸುವರ್ಣದ ಒಂದು ಸವತ್ಸ ಗೋದಾನ ಕೊಟ್ಟುಬಿಟ್ಟರೆ ಪರಿಹಾರವಾಗುವುದು. ಯಾವ ಆಕ್ಷೇಪವೂ ಕಂಡುಬರುವುದಿಲ್ಲ. ಘಟಿತಾರ್ಥ ಚೆನ್ನಾಗಿ ಕೂಡಿಬರುತ್ತಿದೆಂದೇ ಹೇಳಬೇಕು. ಮತ್ತೇನು? ತಾವೂ ಶ್ರೀಮಂತರು, ಅವರೂ ಶ್ರೀಮಂತರು. ಈ ನೆಂಟಸ್ತಿಕೆಯಾಗಲೇಬೇಕು" ಎಂದು ಖಂಡಿತವಾಗಿ ಹೇಳಲಾಗಿ, ಭೀಮರಾಯನು "ಸರಿ! 'ರೋಗಿ ಬಯಸಿದ್ದೂ ಹಾಲೋಗರ; ವೈದ್ಯ ಹೇಳಿದ್ದು ಹಾಲೋಗರ' ಎಂಬಂತೆ ನಾವು ಯೋಚಿಸಿದಂತೆಯೇ ಆಯಿತು" ಎಂದು ಹೇಳಿ ಸಂತೋಷಪಟ್ಟು ಜೋಯಿಸನಿಗೆ ಎರಡು ರೂಪಾಯಿ ದಕ್ಷಿಣೆ ಕೊಟ್ಟು ಕಳುಹಿಸಿದನು.

# ೨೨

ಭಾಸ್ಕರರಾಯನು ತಾಯಿ ಇದ್ದಲ್ಲಿ ಎರಡು ದಿವಸ ನಿಂತು, ಆ ಮೇಲೆ ಅವಳ ಅಪ್ಪಣೆಯನ್ನು ಪಡೆದುಕೊಂಡು ಅಮೃತರಾಯನಲ್ಲಿಗೆ ಹೋಗಿ, ಅಡಿಕೆಯ ದಿವಸಗಳಲ್ಲಿ ತನ್ನ ಪುಸ್ತಕಗಳೊ ವರ್ತಮಾನ ಪತ್ರಗಳೊ ಇವುಗಳನ್ನು ಓದುತ್ತಾ ಆಗಾಗ್ಗೆ ತಾಯಿ ಇದ್ದಲ್ಲಿ ಹೋಗಿ ಅವಳನ್ನು ಕಂಡು ಮಾತನಾಡಿ ಬರುತ್ತಾ ಇದ್ದು, ರಜಾದಿವಸಗಳಲ್ಲಿ ಇನ್ನು ಏಳೆಂಟು ದಿವಸಗಳಿರುವಾಗ ತಾಯಿಯ ಮತ್ತು ಹಿರಿಯರ ಮತ್ತು ಅಮೃತರಾಯ ಜಲಜಾಕ್ಷಿ ಇವರ ಅಪ್ಪಣೆಯನ್ನು ಪಡೆದುಕೊಂಡು ಸಂಜೀವರಾಯನ ಸಮೇತ ಮದ್ರಾಸಿಗೆ ತಿರಿಗಿ ಹೊರಟನು. ಅಮೃತರಾಯನು ಆ ಹುಡುಗರ ಸಂಗಡ ತಾನೇ ಸ್ಟೀಮರ ವರೆಗೆ ಹೋಗಿ ಮುಟ್ಟಿಸಿ ಬಂದನು. ಭಾಸ್ಕರರಾಯನು ಮದರಾಸನ್ನು ಮುಟ್ಟಿದ ಕೂಡಲೆ ತಾಯಿಗೂ ಅಮೃತರಾಯನಿಗೂ ತಾನೂ ಸಂಜೀವರಾಯನೂ ಕ್ಷೇಮದಿಂದ ಮುಟ್ಟಿದ ವರ್ತಮಾನವನ್ನು ತಂತಿಯ ದ್ವಾರಾ ತಿಳಿಸಲು, ಅವರೆಲ್ಲರೂ ಸಂತೋಷಪಟ್ಟರು.

ಇತ್ತಲಾಗಿ ಭಿಮರಾಯನು ನೆಂಟಸ್ತಿಕೆ ವರದಕ್ಷಿಣೆ ಆಭರಣಕೊಡುವುದು, ಕೊಳ್ಳುವುದು ಮುಂತಾದ್ದನ್ನು ನಿಶ್ಚಯಿಸುವುದಕ್ಕೋಸ್ಕರ ಅಂಬಾಬಾಯಿಯ ಸಮೇತ ನೆಲ್ಲೂರ ಎತ್ತುಗಳ ಸಾರೋಟಿನಲ್ಲಿ ತ್ರಿಯಂಬಕರಾಯನಲ್ಲಿಗೆ ಹೋಗಿ, ಆ ಮನೆಯ ಹೆಬ್ಬಾಗಿಲಲ್ಲಿ ಮುಟ್ಟುತ್ತಲೆ ತಾಂಬೂಲಕೋಶವನ್ನು ಹಿಡಿದುಕೊಂಡ ಸೋಮಯ್ಯನನ್ನು ಕರೆದು, ತಾನು ಬಂದಿರುವುದನ್ನು ಒಳಗೆ ಹೋಗಿ ತಿಳಿಸೆನಲು, ಅವನು ಹೋಗಿ ತಿಳಿಸಿದನು. ತ್ರಿಯಂಬಕರಾಯನು ಪತ್ನಿ ಚಂದ್ರಭಾಗಿಯ ಸಹಿತ ಹೆಬ್ಬಾಗಿಲಿಗೆ ಬಂದು, ತ್ರಿಯಂಬಕರಾಯನು ಭೀಮರಾಯನ ಕೈ, ಚಂದ್ರಭಾಗಿಯು ಅಂಬಾಬಾಯಿಯ ಕೈಯನ್ನು ಹಿಡಿದುಕೊಂಡು ಇಬ್ಬರನ್ನು ಒಳಗೆ ಕರೆದುಕೊಂಡು ಹೋಗಿ, ಅವರವರಿಗೆ ಯೋಗ್ಯವಾದ ಆಸನಗಳಲ್ಲಿ ಕುಳ್ಳಿರಿಸಿ, ತೊಗರಿಯ ತಾಳದ, ಮಿಠಾಯಿ ಲಡ್ಡುಗಳು, ಕಾಫಿ ಮುಂತಾದ ಫಲಾಹಾರದಿಂದುಪಚರಿಸಿದ ನಂತರ ತ್ರಿಯಂಬಕರಾಯನು–

"ಏನೋ, ಅಪರೂಪ ದರ್ಶನ, ದಯಮಾಡಿಸಿದ ಕಾರ್ಯಾಕಾರಣಗಳು ತಿಳಿಯ ಲಿಲ್ಲವಷ್ಟೆ."

ಭೀಮರಾಯ–"ವಿಠಲರಾಯನ ಜಾತಕವನ್ನು ತರಿಸಿಕೊಂಡಿದ್ದೆನು. ಅದು ನಮ್ಮ ಇಂದಿರೆಯ ಜಾತಕಕ್ಕೆ ಚಲೋದಾಗಿ ಕೂಡಿಬರುತ್ತೆ; ಎಲ್ಲಾ ಕೂಟಗಳೂ ಸರಿಯಾಗಿವೆ!"

"ಚೆನ್ನಾಯಿತು; ನನ್ನಿಂದೇನಾಗಬೇಕು? ಅಪ್ಪಣೆಯಾಗಲಿ."

"ಇನ್ನು ತಮ್ಮಿಂದಲ್ಲವೇ ಸರ್ವವೂ ಆಗಬೇಕಾದದ್ದು? ಸರ್ವಕೂಟಗಳಲ್ಲಿ ಮನೋಕೂಟವೇ ಮುಖ್ಯ. ನಾನು ವಿವರವಾಗಿ ಹೇಳಬೇಕಾದ್ದೇನು?"

"ಆ ವಿಷಯದಲ್ಲಿ ಪ್ರಯಾಸವೇನಿದೆ? ನನಗೆ ಒಂದೇ ಗಂಡು ಮಗು, ತಮಗೆ ಒಂದೇ ಹೆಣ್ಣು ಮಗು. ಊರಿನ ಜನರು ಸೈ! ಸೈ! ಅನ್ನುವ ಹಾಗೆ ಕಾರ್ಯವು ಸಂಪಾದನೆಯಾಗಬೇಕು."

"ಅಲ್ಲವೆ! ನಾನು ಸಹ ಹಾಗೆಯೇ ಎಣಿಸಿದ್ದೇನೆ. ಮಿಕ್ಕದ್ದೆಲ್ಲವೂ ಅಲ್ಪ ವಿಷಯಗಳೇ ತಾನೇ? ವರದಕ್ಷಿಣೆ"–(ಎನ್ನುವಷ್ಟರಲ್ಲಿ ಸ್ವಲ್ಪ ಕೆಮ್ಮು ಬಂತು.)

"ಅದೇನು ದೊಡ್ಡ ಮಾತು? ನನ್ನ ಶಕ್ತಿಮೀರಿ ನಾನೂ, ತಮ್ಮ ಶಕ್ತಿ ಮೀರಿ ತಾವೂ ನಡೆದುಕೊಳ್ಳದೆ ಇರಲಾರೆವಷ್ಟೇ?"

ಅಂಬಾಬಾಯಿ–"ನಮಗೇನು ಎಂಟು ಹತ್ತಲ್ಲ, ಇಡೀ ಸಂಸಾರಕ್ಕೆ ಒಬ್ಬ ಹುಡುಗಿ; ನಾಳೆ ಪ್ರಾಯ ತುಂಬಿದಾಗ ಅವಳು ಮುಖ ಸಣ್ಣದಾಗಿ ಮಾಡಿಕೊಳ್ಳಬಾರದು. ಚಿನ್ನದ ಪಟ್ಟಿ ವರೆಗಿನ ಆಭರಣಗಳಾಗಬೇಕು."

ಚಂದ್ರಭಾಗಿ–"ವಿಹಿತವೇ. ನಮಗೂ ಇಡೀ ಸಂಸಾರಕ್ಕೆ ಒಬ್ಬನೇ ಹುಡುಗ. ನಾಲ್ಕು ಕಾಸು ಖರ್ಚು ಮುಟ್ಟಿಸಿ, ಧೇಧೂಮ್ ಮಾಡಿ, ಊರಲ್ಲಿ ಸೈ! ಸೈ! ಎಂದು ಜನರು ಕೊಂಡಾಡುವಂತೆ ನಡೆದುಕೊಳ್ಳಬೇಕಾಗಿ ನಮಗೂ ಮನಸ್ಸಿದೆ."

ಭೀಮರಾಯ–"ಎರಡು ಸಾವಿ–ರಹ್ಹ!–ಅಹ್ಹ!–ಅಹ್ಹ!" (ಪುನಃ ಕೆಮ್ಮುತ್ತಾನೆ.)

ತ್ರಿಯಂಬಕರಾಯ–"ಹಾಗೆಯೇ ಆಗಲಿ, ತಮ್ಮ ಇಷ್ಟಕ್ಕನುಸಾರವಾಗಿಯೇ ಆಗಲಿ."

"ನಿಶ್ಚಯ ತಾಂಬೂಲಕ್ಕೆ ದಿವಸ"–(ಇನ್ನಷ್ಟು ಕೆಮ್ಮುತ್ತಾನೆ.)

"ಅದನ್ನು ಬೇಕಾದರೆ, ಈಗಲೇ ಮುಗಿಸಬಹುದಷ್ಟೆ? ತಮಗೇನು ಸ್ವಲ್ಪ ಕೆಮ್ಮಿನ ಪೀಡೆ ಇದ್ದಹಾಗೆ ಕಾಣಿಸುತ್ತೆ?"

"ನಿನ್ನೆ ರಾತ್ರೆ ಬಕಾಸುರ ವಧೆಯ ಪ್ರಸಂಗವನ್ನು ಹಾಡಿ ಬಕಾಸುರನ ಮಾತುಗಳನ್ನು ನಾನೇ ಆಡಿದೆ. ಉಷ್ಣದಿಂದ ಗಂಟ್ಲು ಬಿದ್ದು ಕೆಮ್ಮು ಹತ್ತಿಕೊಂಡಿದೆ. ಕರಿಮೆಣಸಿನ ಕಷಾಯ ಕುಡಿದಿದ್ದೇನೆ. ಕೆಮ್ಮು ಈಗಲೇ ಪರಿಣಮಿಸುವುದೇನೋ–ಅಹ್ಹು! ಅಹ್ಹು!– ಲಗ್ನವೂ ಈಗಲೇ ನಿಶ್ಚಯವಾದರೆ, ಉತ್ತಮವಲ್ಲವೇ?"

"ಆಗಲಿ, ಅಗತ್ಯವಾಗಿ ಆಗಲಿ. ನಾಳಿನ ಕೆಲಸವನ್ನು ಈ ಹೊತ್ತೇ ಹವಣಿಸಿಕೊಳ್ಳುವುದು ಸೂಜ್ಞರ ಲಕ್ಷಣವಲ್ಲವೇ? ಕಾಶೀನಾಥ ಭಟ್ಟನನ್ನು, ಕರೆಯಿಸಲೇನು?" ಎಂದು ಊಳಿಗದ ಐತನಿಂದ ಕಾಶೀನಾಥ ಭಟ್ಟನನ್ನು ಕರೆಯಿಸಿಕೊಂಡು ಚಿತ್ರಭಾನು ಸಂವತ್ಸರದ ಚೈತ್ರ ಶುದ್ಧ ಷಷ್ಠಿಯ ರಾತ್ರೆ ಘಟಿ ಹತ್ತರ ಲಗ್ನವನ್ನು ನಿಶ್ಚಯಿಸಿ ಲಗ್ನಪತ್ರಿಕೆಯನ್ನು ಬರೆಯಿಸಿದರು. "ಬರುವ ಬುಧವಾರದ ಸಾಯಂಕಾಲಕ್ಕೆ ನಿಶ್ಚಯ ತಾಂಬೂಲವು ಜರಗಬಹುದೇ?" ಎಂದು ಭಟ್ಟನೊಡನೆ ಕೇಳಲಾಗಿ, ವಧೂವರರ ಮತ್ತು ಬೀಗರಿಬ್ಬರ ಜಾತಕಗಳನ್ನು ತರಿಸಿ ನೋಡಿ, "ಅಹ! ದಿವ್ಯವಾಗಿ ಆಗಬಹುದು; ವಧುವಿಗೆ ಕ್ಷೇಮತಾರೆ, ವರನಿಗೆ ಸಂಪತ್ತಾರೆ, ಬೀಗರಿಬ್ಬರಿಗೂ ಸಾಧಕತಾರೆ. ಇಂತಹ ಚಂದ್ರತಾರಾ ಬಲವು ಇನ್ನು ಯಾವಾಗ ತಾನೇ ದೊರಕುವುದು! 'ಶುಭಸ್ಯ ಶೀಘ್ರಂ' ಶ್ರುತಿವಾಕ್ಯವಿದೆ. ಅವಶ್ಯವಾಗಿ ಬುಧವಾರ ದಿವಸವೇ ಆಗಬೇಕು" ಎಂದು ಭಟ್ಟನು ಹೇಳಿದನು. ಹಾಗಾಗಲಿ, ಎಂದು ಬೀಗರಿಬ್ಬರೂ ಹೇಳಿ ಭಟ್ಟನಿಗೆ ಒಂದೊಂದು ರೂಪಾಯಿ ದಕ್ಷಿಣೆ ಕೊಟ್ಟು ಕೊನೆಗೆ ಕಳುಹಿಸಿದರು.

ಆ ಮೇಲೆ ಮರುದಿನವೇ ಉಭಯಪಕ್ಷದವರೂ ತಂತಮ್ಮ ಬಂಧು ಬಾಂಧವ್ಯ

ನೆಂಟರಿಷ್ಟರಿಗೆಲ್ಲ ಕ್ರಮಪ್ರಕಾರ ವಾದ್ಯ ತಾಳ ಮೇಳ ಮುಂತಾದ ಸಂಭ್ರಮದಿಂದ ತಿಳುಹಿಸಿ, ಅದರ ಮರುದಿವಸ ಬುಧವಾರ ಸಾಯಂಕಾಲಕ್ಕೆ ಸರ್ವರೂ ತ್ರಿಯಂಬಕರಾಯನಲ್ಲಿ ಕೂಡಿ ಬಹು ಅಟ್ಟಹಾಸದೊಡನೆ ನಿಶ್ಚಯ ತಾಂಬೂಲವಾಯಿತು.

ಒಂದು ವಾರ ಕಳೆದ ತರುವಾಯ ವಧುವಿನ ಪಕ್ಷದಿಂದ ವರನಿಗೆ ಉಂಗುರದುಡುಗೊರೆ, ವರನ ಪಕ್ಷದಿಂದ ವಧುವಿಗೆ ಚೂಡಾಮಣಿಯುಡುಗೊರೆ ಎಂಬ ಕಟ್ಟಳೆಗಳು ವಾದ್ಯ ಮೇಳ ಮುಂತಾದ ಘೋಷಗಳಿಂದ ನಡೆದವು. ಬೀಗರಿಬ್ಬರಲ್ಲಿಯೂ ಸ್ತ್ರೀಯರು ಹಪ್ಪಳ ಸಂಡಿಗೆ ಉಪ್ಪಿನಕಾಯಿ ಮುಂತಾದ ವಿಧವಿಧವಾದ ಸಾಹಿತ್ಯಗಳನ್ನು ಮಾಡಿಸತೊಡಗಿದರು. ಭೀಮರಾಯನು ಸಂಜಗಕ್ಕೆ ಬೇಕಾದ ಭರ್ಜರಿಯ ಪಟ್ಟೆ ಪೀತಾಂಬರ, ಪಗಡಿ, ಶಾಲು ಮುಂತಾದ ವಸ್ತ್ರಾಲಂಕಾರ ಸಾಹಿತ್ಯಗಳನ್ನು ಸುವರ್ಣದ ಯಜ್ಞೋಪವೀತ, ಪವಿತ್ರದುಂಗುರ, ಗಾಲವಂಟಿ, ನೇವಳ, ಮಣಿಸರ ಮುಂತಾದ ಆಭರಣಗಳನ್ನೂ, ಚಾಂದಿ ಬೆಳ್ಳಿಯ ಹರಿವಾಣ, ಪಂಚಪಾತ್ರ, ಸೌಟು, ದ್ರೋಣ, ಚಂಬು ಮುಂತಾದ ಅನುಷ್ಠಾನ ಸಾಧನಗಳನ್ನೂ ಒದಗಿಸಿಕೊಂಡನು. ಇತ್ತಲಾಗಿ ತ್ರಿಯಂಬಕರಾಯನು ವಧುವಿಗೋಸ್ಕರ ಬನಾರಸ್, ಪೂನಾ, ಹುಬ್ಬಳ್ಳಿ, ಗದಗ ಮುಂತಾದ ಪ್ರಸಿದ್ಧವಾದ ಊರುಗಳಿಂದ ಚಿತ್ರವಿಚಿತ್ರವಾದ ಸೀರೆಗಳೂ, ಕಂಚುಕ ವಸ್ತ್ರಗಳೂ, ಸುವರ್ಣದ ವಂಕಿ, ನಾಗಮುರ್ಗಿ, ಪುತ್ತಳೀಸರ, ಜೀವನ ಮಾಲೇಸರ, ಬಂದಿ, ಕಟ್ಕಾಣಿ, ಚೂಡೆ, ದೋರೆ, ಉಗುರು ಹಿಂಬಳೆ, ಗೆಜ್ಜೆಪಟ್ಟಿ, ಬಗೆಬಗೆಯ ಕುತ್ತಿಗೆಯಾಭರಣಗಳೂ ಇವೇ ಮುಂತಾದ ಸಕಲ ಸಾಹಿತ್ಯಗಳನ್ನೂ ಒದಗಿಸಿಕೊಂಡನು. ಉಭಯಪಕ್ಷದ ಸ್ತ್ರೀಯರು ಆಗಾಗ್ಗೆ 'ಜಾಲಿ, ಬೋಲಿ' ಎಂಬ ಕಟ್ಟುಕಟ್ಟಳೆಗಳನ್ನು ಪರಸ್ಪರವಾಗಿ ಕೈಕೊಳ್ಳುತ್ತಾ, ತಂತಮ್ಮ ಆಭರಣ ವಸ್ತ್ರಾಲಂಕಾರಗಳಲ್ಲಿ ಹೆಚ್ಚುಕಡಿಮೆ ಇದ್ದದ್ದನ್ನು ಸರಿಪಡಿಸುತ್ತಾ ಮದುವೆಗೆ ನಿಶ್ಚಯಿಸಿದ ದಿವಸವು ಸಮೀಪಿಸುತ್ತಾ ಬರುವಾಗ ಪ್ರಸ್ತಗಳಿಗೆ ಬೇಕಾದ ಚಕ್ಕುಲಿ, ಕೋಡುಬಳೆ, ಶಾವಿಗೆ, ಫೇಣಿ ಮುಂತಾದ ಬಗೆಬಗೆಯ ಖಜ್ಜಾಯಗಳನ್ನು ಮಾಡಿಸಿಟ್ಟು, ಮದುವೆ ಯಾವಾಗ ಪ್ರಾರಂಭಿಸುತ್ತದೋ ಎಂದು ಹಾರೈಸುತ್ತಾ, ಇಂದಿರೆಯನ್ನು ಕಂಡಕಂಡಾಗ ಅವಳೇನಾದರೂ ಮಾತನಾಡುವಾಗ ಮದುಮಗನ ಹೆಸರಿನ ಅಕ್ಷರಗಳಲ್ಲಿ ಯಾವುದಾದರೂ ಒಂದು ಅಕ್ಷರ ಅವಳ ಬಾಯಿಯಿಂದ ಹೊರಡಲು, "ಓಹೊ! ಗಂಡನ ಹೆಸರು ತೆಗೆದಳು!" ಎಂದು ಖೋ ಖೋ ನಕ್ಕು ಅವಳನ್ನು ನಾಚಿಸುತ್ತಾ ಹೀಗೆಲ್ಲ ಶಾನೆ ಉಲ್ಲಾಸದಿಂದಿದ್ದರು.

## ೨೩

ಗರ್ಭದ ಕಷ್ಟಗಳನ್ನು ಎದುರಿಸುವ ಪುತ್ರಕಾಮೇಷ್ಠಿ ಪ್ರಸಂಗದ ಪದವನ್ನು, ಬುದ್ಧಿಯಿಲ್ಲದೆ ಗರ್ಭವತಿಯಾದ ಹೆಂಡತಿಯು ಕೇಳುವ ಹಾಗೆ ತಾನು ಹಾಡಿದ ದೆಸೆಯಿಂದ ಅವಳು ಭಯಪಟ್ಟು ಗಂಡು ಹೆರುವಲ್ಲಿ ಹೆಣ್ಣು ಹೆತ್ತರೂ ಹೆಣ್ಣಾಗಲಿ ಗಂಡಾಗಲಿ ಮಗು ಹುಟ್ಟಿದ್ದು

ಶ್ರೀ ಗುರುಗಳವರ ಆಶೀರ್ವಚನದ ಬಲದಿಂದಲ್ಲದೆ ಬೇರೇನಲ್ಲವಾದುದರಿಂದ ಆ ಮಗುವಿನ ಕಲ್ಯಾಣದ ಸಮಯದಲ್ಲಿ ಶ್ರೀ ಗುರುಗಳವರನ್ನು ಕರೆಯಿಸಿಕೊಂಡು, ವಧೂವರರನ್ನು ಅವರು ಆಶೀರ್ವದಿಸುವುದು ಅತ್ಯಾವಶ್ಯಕವೆಂದು ಭೀಮರಾಯನು ತಿಳಿದು, ಸವಾರಿ ಶೀಘ್ರದಲ್ಲಿ ಚಿತ್ತೈಸಿ ಬರುವಂತೆ ಕೂಡಲೇ ಬಿನ್ನಹಪತ್ರವನ್ನು ಬರೆದುಕೊಂಡದ್ದಲ್ಲದೆ, ಪ್ರಯಾಣದ ಖರ್ಚಿನ ಬಗ್ಗೆ ಇನ್ನೂರೈವತ್ತು ರೂಪಾಯಿ ಸಹ ಅಂಚೆಯದ್ವಾರಾ ಕಳುಹಿಸಿಕೊಟ್ಟನು. ಹಣವೂ ಬಿನ್ನಹಪತ್ರವೂ ಶ್ರೀ ಮಠದಲ್ಲಿ ತಲುಪುತ್ತಲೇ ಪಾರುಪತ್ಯಗಾರನಿಂದ ಬಿನ್ನಹಪತ್ರವನ್ನು ಓದಿಸಿದ್ದಲ್ಲಿ ವಿವರಗಳು ಮಂದಟ್ಟಾಗಿ, ಸವಾರಿ ತೆರಳಿಬರುವುದಾಗಿ ನಿರೂಪವನ್ನು ಬರೆಯುವಂತೆಯೂ ಪ್ರಯಾಣದ ಏರ್ಪಾಡುಗಳನ್ನು ಕೂಡಲೇ ಮಾಡುವಂತೆಯೂ ಶ್ರೀ ಪಾದಂಗಳವರು ಅಪ್ಪಣೆಕೊಟ್ಟು, ಮಜಲು ಮಜಲುಗಳಿಗೆ ನಿರೂಪಗಳನ್ನು ಕಳುಹಿಸಿ, ಸವಾರಿ ಹೊರಟು, ದಿಬ್ಬಣವು ಎದಿರುಗೊಂಬೋಣದ ಮುಂಚಿನ ದಿವಸ ಬಂದು ಮುಟ್ಟಿದರು. ಭೀಮರಾಯನು ಪ್ರಥಮತಃ ಹೋಗಿ, ಶ್ರೀ ಸನ್ನಿಧಿಗೆ ಸಾಷ್ಟಾಂಗವೆರಗಿ, ತನ್ನ ಉದ್ದೇಶವೆಲ್ಲವನ್ನರಿಕೆಮಾಡಿ, ಫಲ ಮಂತ್ರಾಕ್ಷತೆಯನ್ನು ಪಡೆದದ್ದಲ್ಲದೆ, ಶ್ರೀ ಪಾದಂಗಳವರು ಅಲ್ಲಿದ್ದಷ್ಟು ದಿವಸಗಳ ಭಿಕ್ಷೆ, ಪೂಜೆ ಮುಂತಾದ್ದಕ್ಕೆ ತಗಲುವ ಹಣ ಮಾತ್ರವಲ್ಲ, ಆ ಮೇಲೆ ಮಠಕ್ಕೆ ಮುಟ್ಟುವ ವರೆಗಿನ ಖರ್ಚಿನ ಹಣವನ್ನು ಸಹ ಮುಂಗಡವಾಗಿ ಒಂದೇ ಗಂಟಿನಿಂದ ಪಾರುಪತ್ಯಗಾರನ ಹತ್ತಿರಕ್ಕೆ ಕೊಟ್ಟು ಲೆಕ್ಕಕ್ಕೆ ಬರೆಯಿಸಿದನು. ತ್ರಿಯಂಬಕರಾಯನು ಸಹ ಶ್ರೀ ಸನ್ನಿಧಿಗೆ ಬಂದು, ಪಾದಪೂಜೆ ಕಾಣಿಕೆ ಮುಂತಾದ್ದನ್ನರ್ಪಿಸಿ, ಫಲ ಮಂತ್ರಾಕ್ಷತೆಯನ್ನು ಪಡೆದನು. ಮರುದಿನ ಮುಂಜಾನೆ ಭೀಮರಾಯನು ಮಗಳಾದ ಇಂದಿರೆಯನ್ನು ತ್ರಿಯಂಬಕರಾಯನು ಮಗನಾದ ವಿಠಲರಾಯನನ್ನು ಸಹ ಕರೆದುಕೊಂಡು ಬಂದು, ಶ್ರೀ ಸನ್ನಿಧಿಯಲ್ಲಿ ಸಾಷ್ಟಾಂಗವೆರಗಿಸಲು, ಇಂದಿರೆಗೆ, "ಸುಮಂಗಲೀಭವ, ಸುಪುತ್ರವತೀಭವ" ಎಂದೂ, ವಿಠಲರಾಯನಿಗೆ "ಧನಂ ಧಾನ್ಯ ಪಶುಂ ಬಹುಪುತ್ರ ಲಾಭಂ ಶತ ಸಂವತ್ಸರಂ ದೀರ್ಘಮಾಯುಃ" ಎಂದೂ ಆಶೀರ್ವದಿಸೋಣಾಯಿತು. ಆ ಮೇಲೆ ಅವರು ಮಕ್ಕಳನ್ನು ತೆಗೆದುಕೊಂಡು ತಂತಮ್ಮ ಮನೆಗಳಿಗೆ ಹೊರಟುಹೋದರು.

ಸೂರ್ಯಾಸ್ತಮಯಕ್ಕೆ ಸ್ವಲ್ಪ ಸಮಯವಿರುವಾಗ ದಿಬ್ಬಣಗಳು ಎದಿರುಗೊಂಬೋಣದ ಅಬ್ಬರವೇರಿತು. ಸಾಲೊಂದರಲ್ಲಿ ಐನೂರು ಹಿಲಾಲುಗಳಿರುವ ಎರಡು ಸಾಲು ಹಿಲಾಲುಗಳೂ, ತಟ್ಟಿಯೊಂದರಲ್ಲಿ ಇಪ್ಪತ್ತೈದು ಹಿಲಾಲುಗಳಿರುವ ಇಪ್ಪತ್ತು ಬಳಾರ್ ತಟ್ಟಿಗಳೂ, ಗೋವೆಯಿಂದ ಇದಕ್ಕೆಂದೇ ಬೇರೆಯಾಗಿ ತರಿಸಿದ ಬಿರುಸು, ಚಕ್ರಬಾಣ, ಆಕಾಶವಿಮಾನ ಮುಂತಾದ ಬಾಣ ಪ್ರದರ್ಶನಗಳನೂ, ಭಾಮಾಮಣಿ, ರಾಜಾಮಣಿ, ಸಂಜೀವಿ, ಚಂದ್ರಾವತಿ, ಲೂಪಿಮೀನಾಕ್ಷಿ, ಇವರ ನರ್ತನ ಸಂಘಗಳೂ, ಕುಪ್ಪ ಸೇರುಗಾರ, ಚನ್ನ ಸೇರುಗಾರ, ಇವರ ಬಜಂತ್ರಿ ಮೇಳಗಳೂ, ಜಕ್ರಿ ಶೇಕೆ ಇವರ ಚೀನಿ ವಾದ್ಯದ ಮೇಳಗಳೂ, ಮದ್ರಾಸು ೨೨ನೆಯ ಪಾಯದಳದವರ ಬ್ಯಾಂಡ್ ಎಂಬ ವಾದ್ಯದವರೂ, ಪ್ರಖ್ಯಾತಿಪಟ್ಟ ಹಮ್ಮಬ್ಬ, ಪಿಲಿದೂಮ, ಇವರ ಹುಲಿವೇಷಗಳೂ, ಗರಡೀ ಸಾಧಕದವರೂ, ಕಹಳೆ, ತುತೂರಿ, ತಂಬೂರಿ, ನಗಾರಿ,

ಜಯಭೇರಿ ಮುಂತಾದ ಸಕಲ ವಾದ್ಯಗಳೂ, ಖಂಡಿಗಟ್ಟಲೆಯಿಂದ ಎಣ್ಣೆ ತುಂಬಿಸಿದ ಪಾತ್ರಗಳಿರುವ ಹತ್ತು ಬಂಡಿಗಳೂ ಸಾಲುಸಾಲಾಗಿ ಹೊರಡಲು, ಸಾವಿರಗಟ್ಟಲೆಯಿಂದ ಜನರು ಬಂದು ತುಂಬಿಕೊಂಡು, ಅಪರಿಮಿತವಾದ ಜನಸ್ತೋಮವು ಒಟ್ಟುಕೂಡಲು, ವಧೂಪಕ್ಷದವರ ದಿಬ್ಬಣವು ಹೊರಟು ನಗರದ ಮಧ್ಯಭಾಗದಲ್ಲಿ ಬಂದು, ಇದೇ ತರದ ಅಟ್ಟಹಾಸದೊಡನೆ ಎರಡು ಕುದುರೆಯ ಸಾರೋಟಿನಲ್ಲಿ ವರನನ್ನು ಕುಳ್ಳಿರಿಸಿಕೊಂಡು ಬರುತ್ತಿರುವ ವರನ ಪಕ್ಷದವರನ್ನು ಅತಿ ಸಂಭ್ರಮದಿಂದೆದಿರುಗೊಂಡು, ಉಭಯ ಪಕ್ಷದವರೂ ಕೂಡಿ ಮುಂದುವರಿಸಿ, ಅಲ್ಲಲ್ಲಿ ಮೇಳದವರಿಂದ ನರ್ತನವನ್ನು ಮಾಡಿಸುತ್ತಾ, ಜಾಣಗಾರಿಕೆಯಿಂದ ಇರುಳನ್ನು ಹಗಲನ್ನಾಗಿ ಮೆರೆಯಿಸುತ್ತಾ, ಧ್ವನಿಯಿಂದಲೂ, ಪ್ರಕಾಶದಿಂದಲೂ, ಧೂಳಿನಿಂದಲೂ, ಧೂಮದಿಂದಲೂ ಸರ್ವರ ಕಣ್ಣು ಕಿವಿಗಳನ್ನು ತುಂಬಿಸಿ, ನೇತ್ರಾನಂದವನ್ನೂ ಕರ್ಣಾನಂದವನ್ನೂ ಮಾಡಿಸುತ್ತಾ, ವರನು ಮನೆಯನ್ನು ಸಮೀಪಿಸುತ್ತಿರುವಾಗ, ಭೀಮರಾಯನು ಹೋಗಿ ವರನನ್ನು ಸಾರೋಟಿನಿಂದ ಕೆಳಗಿಳಿಸಿ, ಕೈ ಹಿಡಿದುಕೊಂಡು, ಅಲ್ಲಿ ಮಾರ್ಗದ ಬದಿಯಲ್ಲಿ ಕಟ್ಟಿಸಿದ ಮಂಟಪಕ್ಕೆ ಕರೆದುಕೊಂಡು ಹೋಗಿ, ಶಾಸ್ತ್ರಾನುಸಾರ ಸೀಮಂತ ಪೂಜೆ, ಉಡುಗೊರೆ ಉಪಚಾರಗಳನ್ನು ಮಾಡಿ ಪುನಃ ಸಾರೋಟಿನಲ್ಲಿ ತಂದಿರಿಸಲು, ದಿಬ್ಬಣವು ಪುನಃ ಬಹು ಗದ್ದಲದಿಂದ ಮುಂದರಿಸಿ ಹೋಗಿ ವರನ ಮನೆಗೆ ತಲಪಿದಾಗ ಭೀಮರಾಯನು ಬಂದು ವರನನ್ನು ಕೈ ಹಿಡಿದು ಕೆಳಗಿಳಿಸಿದನು. ಅಂಬಾಬಾಯಿಯು ಬೆಳ್ಳಿಯ ಹರಿವಾಣದಲ್ಲಿ ಒಂಭತ್ತು ನೀರಾಂಜನ ದೀಪಗಳನ್ನು ತಂದು ಆರತಿಯನ್ನು ನೀವಾಳಿಸಿದಳು. ಆ ಮೇಲೆ ಭೀಮರಾಯನು ವರನನ್ನು ಮೆಟ್ಟುಸೀರೆಯ ಮೇಲಿನಿಂದ ಕೈಹಿಡಿದು ನಡೆಸುತ್ತಾ ಚಪ್ಪರದೊಳಗೆ ಕರೆದುಕೊಂಡುಹೋಗಿ, ದಿವ್ಯವಾದ ಆಸನದಲ್ಲಿ ಕುಳ್ಳಿರಿಸಿದನು. ಚಪ್ಪರದ ಅಲಂಕಾರವಂತೂ ಅಷ್ಟಿಷ್ಟೆಂದು ವರ್ಣಿಸಿ ಪೂರಯಿಸುವುದಲ್ಲ. ಪಂಚರಂಗಿನ ವಸ್ತ್ರಗಳ ಮೇಲುಗಟ್ಟಿನ ಕೆಳಗೆ ಸಾವಿರಾರು ಗ್ಲಾಸುಗಳೂ, ಝುಮ್ಮರುಗಳೂ ಚಾಂಡೆಲಿಯರೆಂಬ ಗೊಂಚು ದೀಪಗಳೂ, ವಿದ್ಯುಲ್ಲತೆಯಂತೆ ಬೆಳಕಿರುವ ಅನೇಕ ತರದ ಸಮೆಗಳೂ ಅಲ್ಲಲ್ಲಿ ಪ್ರಕಾಶಿಸುತ್ತಾ ಇಂದ್ರಭವನವೆಂಬುದಿದೆಯೇ ಎಂಬಂತೆ ಮೆರೆಯುತ್ತಿತ್ತು.

ದಿಬ್ಬಣದವರೆಲ್ಲರೂ ಚಪ್ಪರದಲ್ಲಿ ಪ್ರವೇಶಿಸಿ ಅವರವರಿಗೋಸ್ಕರ ಒದಗಿಸಿಟ್ಟ ಆಸನಗಳಲ್ಲಿ ಕುಳಿತುಕೊಂಡಿರಲು, ಲವೆಂಡರ್, ಗುಲಾಬಿ ಅತ್ತರ್, ಮೈಸೂರ ಬಿಲ್ಲೆಗಳ ಗಂಧ ಮುಂತಾದ ಪರಿಮಳ ದ್ರವ್ಯಗಳನ್ನೂ, ದುಂಡುಮಲ್ಲಿಗೆ, ಜಾಜಿ, ಜೂಯಿ, ಕಸ್ತೂರಿ ಮುಂತಾದ ಪರಿಮಳ ಪುಷ್ಪಗಳನ್ನೂ, ಖರ್ಜೂರ, ಚೀನಿ ಸಕ್ಕರೆ ಮುಂತಾದ ಮಧುರ ಪದಾರ್ಥಗಳನ್ನೂ ವಧೂವರರ ಪಕ್ಷದವರು ಬೇರೆ ಬೇರೆಯಾಗಿ ಹಂಚಿದ್ದಲ್ಲದೆ, ಪ್ರತಿಯೊಬ್ಬನು ಕುಳಿತಲ್ಲಿ ಒಂದೊಂದು ವೀಳ್ಯದ ಹರಿವಾಣವನ್ನು ಸಹ ತಂದಿಟ್ಟರು. ಆ ಮೇಲೆ "ಬೇರೆ ವಾದ್ಯಗಳೆಲ್ಲ ನಿಲ್ಲಿಸಿ, ನಾಲ್ಕು ಕಡೆಯಿಂದಲೂ ವೇಶ್ಯಾ ಸ್ತ್ರೀಯರ ನರ್ತನವು ಪ್ರಾರಂಭಿಸಲಿ!" ಎಂದು ಭೀಮರಾಯನು ಅಪ್ಪಣೆ ಕೊಡಲು, ಹಾಗೆಯೇ ಪ್ರಾರಂಭವಾಯಿತು. ವೃದ್ಧರೂ

ಬಡಬಗ್ಗರೂ ಮೆಲ್ಲನೆ ಒಬ್ಬೊಬ್ಬನೇ ಎದ್ದು ಮನೆಗೆ ನಡೆಯಲು, ಮೋಜುಗಾರರೂ ಹೊಂತುಗಾರರೂ ಮೆಲ್ಲಮೆಲ್ಲಗೆ ಮುಂದುವರಿಸುತ್ತಾ ಇರುವಾಗ ಭೀಮರಾಯನು ಮಧ್ಯದಲ್ಲಿ ಬಂದು ಕುಳಿತು, ರೂಪಾಯಿಯ ಚೀಲದಿಂದ ಒಂದೊಂದು ಮುಷ್ಟಿಯಲ್ಲಿ ಹಿಡಿಯುವಷ್ಟು ರೂಪಾಯಿಗಳನ್ನು ತೆಗೆದು, ಒಂದೊಂದು ಮೇಳದಿಂದ ಒಬ್ಬಾಕೆಯನ್ನು ಕೈಸನ್ನೆಯಿಂದ ಕರೆದು, ಆ ರೂಪಾಯಿಗಳನ್ನವಳಿಗೆ ಕೊಟ್ಟು, "ಸಬ್ ಮಜ್ಲೀಸ್ ಕೀ ದವ್‌ಲತ್ ಜಾದಾ!" ಎಂದು ಕೂಗೆನ್ನಲು, ಅವಳು ರೂಪಾಯಿಗಳನ್ನೆಣಿಸಿ ನೋಡಿ ಎಷ್ಟು ರೂಪಾಯಿಗಳಿದ್ದವೊ ಅಷ್ಟು ಸಾರಿ ಕೂಗಿದಳು– ಅಂದರೆ ಒಂದೊಂದು ಮುಷ್ಟಿ ಹಣಕ್ಕೆ ಇಪ್ಪತ್ತು ಇಪ್ಪತ್ತೈದು ಸಾರಿ ಕೂಗಿದಳು. ಆ ಮೇಲೆ ಹೊಂತುಗಾರರೆಲ್ಲರೂ ಒಬ್ಬರಿಗೊಬ್ಬರು ಪರಸ್ಪರ ಸಲಾಮು ಮಾಡಿಸತೊಡಗಿದರು. ನರ್ತನಕ್ಕಿಂತ ಸಲಾಮುಗಳ ಗದ್ದಲವೇ ಹೆಚ್ಚಾಯಿತು. ಬಹಳ ರಾತ್ರಿಯವರೆಗೆ ಈ ಗದ್ದಲವು ನಡೆದು, ಒಂದೊಂದು ಮೇಳದವರಿಗೆ ಸುಮಾರು ೨೦೦–೩೦೦ ರೂಪಾಯಿಗಳ ಮಟ್ಟಿಗೆ ಆದಾಯವಾಯಿತು. ಆ ಮೇಲೆ ನರ್ತನವನ್ನು ನಿಲ್ಲಿಸಿ, ಭೀಮರಾಯನು ಮನೆಗೆ ಹೊರಡಲು, ಮೇಳದವರೂ ಇತರರೂ ತಂತಮ್ಮ ಮನೆಗಳಿಗೆ ನಡೆದರು.

## ೨೪

ಮರುದಿನ ಸಮಾವರ್ತನೆಯಾಯಿತು. ಸಮಾವರ್ತನವೆಂಬುದು ಶಾಸ್ತ್ರದಲ್ಲಿ ಬೇರೊಂದು ವಿಧವಾಗಿ ಹೇಳಲ್ಪಟ್ಟಿದ್ದರೂ, ಭೀಮರಾಯ ತ್ರಿಯಂಬಕರಾಯ ಮುಂತಾದ ದೊಡ್ಡ ದೊಡ್ಡ ಗೃಹಸ್ಥರು ಲೋಕಾಚಾರದ ಕಟ್ಟಳೆಗೆ ಸರಿಯಾಗಿ ನಡೆಕೊಳ್ಳುವುದೇ ಯೋಗ್ಯವೆಂದು ನಿಶ್ಚಯಿಸಿ, ಆ ದಿವಸ ವರನಿಗೆ ಕಣ್ಣಿನಲ್ಲಿ ಕಾಡಿಗೆಯನ್ನು ಹಚ್ಚಿ, ದ್ವಾದಶನಾಮಗಳನ್ನು ಮಾಡಿಸಿ, ಒಂದು ಅಂಗವಸ್ತ್ರದ ಪಂಚೆಯನ್ನುಡಿಸಿ, ಮತ್ತೊಂದು ಪಂಚೆಯನ್ನು ಹೆಗಲಲ್ಲಿರಿಸಿ, ಇನ್ನೊಂದು ಪಂಚೆಯನ್ನು ತಲೆಗೆ ಕಟ್ಟಿ, ಎಡದ ಕೈಯಲ್ಲೊಂದು ಓಲೆಕೊಡೆ, ಬಲದ ಕೈಯಲ್ಲಿ ದಂಡಕಾಷ್ಠವೆಂದು ತತ್ಕಾಲಕ್ಕೆ ಕರೆಯಲ್ಪಡುವ ಒಂದು ಬಿದಿರಿನ ಕೋಲನ್ನು ಕೊಟ್ಟು, ಕಾಲುಗಳಲ್ಲೊಂದು ಜೋಡನ್ನು ಮೆಟ್ಟಿಸಿ–ಅಹ! ವೇಷವೇ!– ಕಾಶಿಗೆ ಹೋಗುವ ಬ್ರಾಹ್ಮಣನೆಂಬ ಭಾವದಲ್ಲಿ ವಾದ್ಯಘೋಷದಿಂದ ಹೊರಗೆ ಕರೆದು ತಂದರು. ಆಗ ಕೂಡಿದ ಸ್ತ್ರೀಯರಲ್ಲೊಬ್ಬಳು– "ಅಯ್ಯೋ! ಎಂತಹ ಅರ್ತಿ!" ಇನ್ನೊಬ್ಬಳು "ಅಹ! ಹುಡುಗನನ್ನು ಕಂಡರೆ, ಸೆಳೆದುಕೊಳ್ಳಲೇ ಎಂಬಂತೆ ಕಾಣುತ್ತೆ! ಏನು ಚಂದ!" ಮತ್ತೊಬ್ಬಳು– "ಅಂಬಾಬಾಯಿ ಪುಣ್ಯವಂತೆ! ಇಂತಹ ಅಳಿಯ ಎಲ್ಲರಿಗೂ ದೊರಕುವುದುಂಟೇ?" ಎಂದು ಹೀಗೆಲ್ಲ ಮಾತನಾಡುತ್ತಿರುವಾಗ ಭೀಮರಾಯನು ಒಂದು ಪೀತಾಂಬರವನ್ನುಟ್ಟು, ಮತ್ತೊಂದು ಪೀತಾಂಬರದೊಂದಂಶವನ್ನು ತಲೆಗೆ ಸುತ್ತಿಕೊಂಡು, ಉಳಿದ ಅಂಶವನ್ನು ಮೈಮೇಲೆ ಬಿಟ್ಟು, ವರನಿದ್ದಲ್ಲಿಗೆ ಫಕ್ಕನೆ ಬಂದನು. ಆಗ ಪುರೋಹಿತ ಕಾಶಿನಾಥ ಭಟ್ಟನು ಭೀಮರಾಯನಿಂದ

ವರನೊಡನೆ, ವರನಿಂದ ಭೀಮರಾಯನೊಡನೆ ಕೆಲವು ಸಂಸ್ಕೃತ ಮಾತುಗಳನ್ನಾಡಿಸಿದನು; ಅಂದರೆ ಯಥಾರ್ಥದಲ್ಲಿ ತಾನೇ ಮಾತನಾಡಿ ಮಾತುಗಳ ತಾತ್ಪರ್ಯವನ್ನು ಅವರ ಭಾಷೆಯಲ್ಲಿ ಕೂಡಿದ ಮಟ್ಟಿಗೆ ಹೇಳಿದನು. ಆ ಮಾತುಗಳ ತಾತ್ಪರ್ಯವೇನೆಂದರೆ– "ಎಲ್ಲಿಗೆ ಹೋಗುತ್ತೀರಿ?" ಎಂದು ಭೀಮರಾಯನು ಕೇಳಿದ್ದಕ್ಕೆ "ಕಾಶಿಗೆ ಹೋಗುತ್ತೇನೆ" ಎಂದು ಹುಡುಗನು ಹೇಳಿದ ಹಾಗೂ, "ಬೇಡ, ನನ್ನ ಮಗಳನ್ನು ನಿನಗೆ ವಿವಾಹಮಾಡಿಕೊಡುತ್ತೇನೆ" ಎಂದು ಪುನಃ ಭೀಮರಾಯನು ವಾಗ್ದತ್ತಮಾಡಿದ್ದಕ್ಕೆ "ಹಾಗಾಗಲಿ" ಎಂದು ಹುಡುಗನು ಒಪ್ಪಿದ ಹಾಗೂ ಈ ಸಂಭಾಷಣೆಯ ತಾತ್ಪರ್ಯವಂತೆ. ಈ ಮಾತುಗಳು ತೀರಿದ ಮೇಲೆ ಭೀಮರಾಯನು ಹುಡುಗನನ್ನು ಕೈಹಿಡಿದು ಚಪ್ಪರದೊಳಗೆ ಕರೆದುಕೊಂಡು ಬಂದನು. ಅಲ್ಲಿ ಕಾಶೀನಾಥ ಭಟ್ಟನು ಹುಡುಗನಿಂದ ಒಂದು ಹೋಮವನ್ನು ಮಾಡಿಸಿ, ತನಗೂ ಅಲ್ಲಿ ಕೂಡಿದ್ದ ಬೇರೆ ಕೆಲವು ಮಂದಿ ಭಟ್ಟರಿಗೂ ಬೇಕಾದ ದಾನಗಳನ್ನು ಕೊಡಿಸಿದನು. ಆ ಬಳಿಕ ಸ್ತ್ರೀಯರೆಲ್ಲರೂ ಹುಡುಗನಿಗೆ ಮಂಗಳಾಕ್ಷತೆಯನ್ನು ಹಾಕಲಾಗಿ ಅಂಬಾಬಾಯಿಯು ಬಂದು ಆರತಿಯನ್ನು ಬೆಳಗಿದಳು.

ಆ ಮೇಲೆ ವಧುವಿನ ಚಪ್ಪರದಲ್ಲಿ 'ಉದ್ದಿನ ಮುಹೂರ್ತ'*ವೆಂಬ ಸಂಸ್ಕಾರವು ಪ್ರಾರಂಭಿಸಿತು. ಆದರೆ ವಧುವಿಗೆ– ಮದುಮಗಳ ಅಲಂಕಾರವೇ ಅಲ್ಲದೆ ವರನ ಅಲಂಕಾರಕ್ಕೊಪ್ಪುವ ಬೇರೆ ವಿಶೇಷವಾದ ಅಲಂಕಾರವ್ಯಾವುದೂ ಇರಲಿಲ್ಲ. ಲೋಕಾಚಾರದ ಕಟ್ಟಳೆಗಳಲ್ಲಿ ಹಾಗಿರಬೇಕೆಂದಿಲ್ಲವೇನೋ. ಕಾಶೀನಾಥ ಭಟ್ಟನು ಸಾಧಾರಣ ಒಂದು ಹೋಮವನ್ನು ಮಾಡಿಸಿ, ಪ್ರಥಮತಃ ತನಗೂ, ಆಮೇಲೆ ಬೇರೆ ಭಟ್ಟರಿಗೂ ದಾನಗಳನ್ನು ಕೊಡಿಸಿದನು. ಆನಂತರ ಸೇಸೆ ಆರತಿ ಮುಂತಾದ ಕ್ರಮಗಳು ನಡೆದವು.

ಇಷ್ಟಾಗುವಾಗ ಸಾಯಂಕಾಲವು ಸಮೀಪಿಸಿದುದರಿಂದ ಭೀಮರಾಯನಲ್ಲಿ ಸಮಾವರ್ತನೆಯ ಪ್ರಸ್ತದ ಊಟವನ್ನು ಬೇಗ ಪ್ರಾರಂಭಿಸಿ, ಕೂಡಿದ ಸ್ತ್ರೀಯರನ್ನೆಲ್ಲ ವಿಧ ವಿಧವಾದ ಭಕ್ಷ್ಯಭೋಜ್ಯಗಳಿಂದುಪಚರಿಸುವಲ್ಲಿ ಅಂಬಾಬಾಯಿಯು ತಾನೇ ಹತ್ತಿರ ನಿಂತು, ಗರ್ಭವತಿಯರಿಗೂ, ಚಿಕ್ಕ ಮಕ್ಕಳ ತಾಯಂದಿರಿಗೂ ಎರಡೆರಡು ಪಾಲು ಭಕ್ಷ್ಯಗಳನ್ನು ಕಟ್ಟಳೆಯ ಪ್ರಕಾರ ಬಡಿಸಿ, ಏನೊಂದೂ ಆಕ್ಷೇಪ ಬಾರದಂತೆ ಜಾಗರೂಕತೆಯಿಂದ ಮೇಲ್ವಿಚಾರವನ್ನು ಮಾಡಿಕೊಂಡು ಊಟ ತೀರಿದ ಮೇಲೆ 'ಪಾಲಿನ ಭಕ್ಷ್ಯ'ವೆಂಬ ಭಕ್ಷ್ಯದ ಹಂಚಿಕೆಯನ್ನು ತಾನೆ ನಿಂತು ಮನೆಗಳ ತಾರತಮ್ಯದ ಪ್ರಕಾರ ಕಟ್ಟಳೆಗೆ ಸರಿಯಾಗಿ ಮಾಡಿಸಿಕೊಟ್ಟಳು. ಸ್ತ್ರೀಯರೆಲ್ಲರೂ ಸಂತೋಷಪಟ್ಟು ವೀಳ್ಯವನ್ನು ತೆಗೆದುಕೊಂಡು ತಂತಮ್ಮ ಮನೆಗಳಿಗೆ ಹೋಗುವುದಕ್ಕೆ ಹೊರಡಲು, ಅಂಬಾಬಾಯಿಯು– ರಾತ್ರಿ ಲಗ್ನಕ್ಕೆ ಎಲ್ಲರೂ ದಯವಿಟ್ಟು ಬರಲೇ ಬರಬೇಕೆಂದು ಹೇಳಿಕೊಂಡಳು. ಎಲ್ಲರೂ ಹಾಗಾಗಲೆಂದು ಹೇಳಿ ಹೊರಟುಹೋದರು.

ಸುಮಾರು ಎಂಟು ಗಳಿಗೆ ರಾತ್ರಿ ಕಳೆಯಲು ಭೀಮರಾಯನು ತನ್ನ ನೆಂಟರಿಷ್ಟರನ್ನು

---

*ಷೋಡಷ ಸಂಸ್ಕಾರಗಳಲ್ಲಿ ಇದು ಯಾವುದೆಂದು ನಾವರಿಯೆವು.

ಕೂಡಿಕೊಂಡು, ಮಹಾ ಗದ್ದಲದಿಂದ ವರನನ್ನು ಕರೆದು ತರುವುದಕ್ಕೆ ಹೋಗುತ್ತಾ ದಾರಿಯಲ್ಲಿ ಬಹು ಜನರು ಅವನ ಸಂಗಡ ಕೂಡಿ, ಎಲ್ಲರೂ ವಾದ್ಯ ತಾಳ ಮೇಳ ಮುಂತಾದವುಗಳ ಸಹಿತ ವರನಲ್ಲಿಗೆ ಬಂದು, ಅಲ್ಲಿ ನಡೆಯಬೇಕಾದ ಕೆಲವು ಶಾಸ್ತ್ರವಿಧಿಗಳನ್ನು ಕೈಕೊಂಡು, ವರನಿಗೆ ಬಾಸಿಂಗವೆಂಬ ಕಿರೀಟವನ್ನು ಕಟ್ಟಿಸಿ, ಗುರುಹಿರಿಯರ ಪ್ರಾರ್ಥನೆಯನ್ನು ಮಾಡಿಸಿ, ವರನ ಕೈಯಲ್ಲಿ ಒಂದು ನಾರೀಕೇಳವನ್ನು ಕೊಟ್ಟು, ವರನ ತಂದೆತಾಯಿಗಳು ನೆಂಟರಿಷ್ಟರು ಮುಂತಾದವರನ್ನು ಕೂಡಿಕೊಂಡು ಮಹಾ ಸಂಭ್ರಮದಿಂದ ಶುಭಮುಹೂರ್ತದಲ್ಲಿ ತನ್ನ ಮನೆಯಾದ ವಧುವಿನ ಚಪ್ಪರಕ್ಕೆ ಕರೆದು ತಂದನು. ವರನು ಸಾರೋಟಿನಿಂದ ಕೆಳಗಿಳಿದ ಕೂಡಲೇ ಅಂಬಾಬಾಯಿಯು ಆರತಿಯನ್ನು ಬೆಳಗಿ ಹರಿವಾಣದಲ್ಲಿದ್ದ ನೀಲಾಂಜನಗಳೆಲ್ಲವನ್ನು ಒಂದೊಂದಾಗಿ ಸಾಲಿನಲ್ಲಿ ವರನ ಕಾಲಡಿಗಳ ಹತ್ತಿರದಲ್ಲಿಟ್ಟು, ಒಂದು ಬೆಳ್ಳಿಯ ಪಂಚಪಾತ್ರದಿಂದ ನೀರನ್ನು ಕೈಯಲ್ಲಿ ತೆಗೆದು ಮೂರು ಸಾರಿ ವರನ ಅಡಿಗಳ ಮೇಲೆ ಚೆಲ್ಲಿದಳು. ಆ ಮೇಲೆ ಭೀಮರಾಯನು ವರನನ್ನು ಮಂಟಪಕ್ಕೆ ಕರೆದುಕೊಂಡುಹೋಗಿ, ಅಲ್ಲಿ ಕುಳ್ಳಿರಿಸಿದನು. ಅಂಬಾಬಾಯಿಯ ಅಣ್ಣನಾದ ವಧುವಿನ ಮಾವ ವಿಶ್ವೇಶ್ವರರಾಯನು ವಧುವನ್ನು ಸೊಂಟದಲ್ಲೆತ್ತಿಕೊಂಡು, ಲಗ್ನಮಂಟಪದಲ್ಲಿ ನಿಲ್ಲಿಸುವಷ್ಟರಲ್ಲಿ ಉಭಯ ಪಕ್ಷದ ಪುರೋಹಿತರು ಪೀತವರ್ಣದ ಒಂದು ಶಾಲನ್ನು ವಧೂವರರು ಒಬ್ಬರನ್ನೊಬ್ಬರು ನೋಡದಂತೆ ಅಡ್ಡವಾಗಿ ಹಿಡಿದು, ಮಂತ್ರೋಕ್ತವಾದ ಕ್ರಮಗಳನ್ನೆಲ್ಲ ನಡೆಯಿಸಿ, ಕಸ್ತೂರಿಮಲ್ಲಿಗೆಯ ಒಂದು ಹೂಮಾಲೆಯನ್ನು ವಧುವಿನ ಕೈಯಲ್ಲಿ, ಇನ್ನೊಂದನ್ನು ವರನ ಕೈಯಲ್ಲಿ ಕೊಟ್ಟು, ಪ್ರಥಮತಃ ವಧುವಿಂದ ವರನ ಕೊರಳಿಗೂ ಆ ಮೇಲೆ ವರನಿಂದ ವಧುವಿನ ಕೊರಳಿಗೂ ಹಾಕಿಸಿ ಪುರೋಹಿತರಿಬ್ಬರೂ ವಧೂವರರ ತಲೆಗಳ ಮೇಲೆ ಅರಳುಮಳೆಯನ್ನು ಸುರಿಸಿದರು. ಅನಂತರ ಭೀಮರಾಯನು ಪತ್ನಿ ಸಹ ವರ್ತಮಾನ ಮಂಟಪದಲ್ಲಿ ಪ್ರವೇಶಿಸಿ, ತನ್ನ ಕೈಗಳಿಂದ ವಧುವಿನ ಕೈಗಳನ್ನು ಹಿಡಿದು ಇಬ್ಬರ ಕೈಗಳನ್ನು ವರನ ಕೈಯಲ್ಲಿರಿಸಿ, ಅಂಬಾಬಾಯಿಯಿಂದ ಒಂದು ಬೆಳ್ಳಿಯ ಕಲಶದಿಂದ ನೀರನ್ನು ಸುರಿಯಿಸಿ, ತದ್ವಾರಾ ಕನ್ನಿಕೆಯನ್ನು ವರನಿಗೆ ಧಾರಾದತ್ತಮಾಡಿಕೊಟ್ಟನು. ತತ್‌ಕ್ಷಣವೇ ಕಾಶೀನಾಥ ಭಟ್ಟನು ಸ್ತ್ರೀಯರ ಕಡೆಗೆ ತಿರಿಗಿ ಉನ್ನತ ಧ್ವನಿಯಿಂದ– “ಹಾಲಿಗಿಷ್ಟು ಹೆಪ್ಪು ಹಾಕಿಬಿಡಿ! ಜಾಗ್ರತೆ!” ಎಂದು ಹೇಳಿದನು. ಅಂಬಾಬಾಯಿಯು ಇಷ್ಟು ದಿವಸ ತಾನು ಸಾಕಿ ಬೆಳೆಯಿಸಿದ ಮಗುವನ್ನು ಈಗ ಪರರ ಕುಟುಂಬಕ್ಕೆ ಕೊಟ್ಟೆನೆಂಬ ವ್ಯಸನದಿಂದ ಕಟ್ಟಳೆಯ ಪ್ರಕಾರ ಕಣ್ಣೀರಿಟ್ಟಳು.

ಆ ಮೇಲೆ ಕಟ್ಟಳೆಯ ಪ್ರಕಾರ ಕಲ್ಯಾಣಗೀತಗಳನ್ನು ಹಾಡುವ ಪ್ರಸಂಗವೆಸಗಿತು. ಮಂಟಪದ ಸಮೀಪದಲ್ಲಿ ಕುಳಿತ ಸ್ತ್ರೀಯರೆಲ್ಲರೂ ಒಬ್ಬರಿಗೊಬ್ಬರು ಹತ್ತಿರ ಸೇರಿದರು.

ಈ ಕ್ರಮ ವೇದ ಮಂತ್ರಗಳಲ್ಲಿಯೂ ಗೃಹಸೂತ್ರಗಳಲ್ಲಿಯೂ ನಾವು ಕಂಡದ್ದಿಲ್ಲ.

ಅಂಬಾಬಾಯಿ– “ಕಮಲಾಬಾಯೀ, ನೀನು ಹಾಡವ್ವಾ.”

ಕಮಲಾಬಾಯಿ–“ಅಯ್ಯೋ! ನನ್ನ ಹಾಡುಗಳನ್ನು ಕೇಳಿದರೋ? ಅದೇಕೆ? ನಿನ್ನ ಧಾಟಿಯು ಬಹು ಚಲೋದು; ನೀನೇ ಹಾಡಬಾರದೇ?”

ಅಂಬಾಬಾಯಿ–"ಮೀನಾಕ್ಷೀ, ನೀನು ಹಾಡವ್ವಾ. ಅವಳು ಅಳುಕುತ್ತಾಳೇನೋ."

ಮೀನಾಕ್ಷಿ–"ನೀನೆ ಹಾಡು; ನನ್ನ ಕಂಠವೇ ಸರಿಯಿಲ್ಲ."

ಅಂಬಾಬಾಯಿ–"ನೀನಾದರೂ ಹಾಡು, ಕೃಷ್ಣಾಬಾಯಿ."

ಕೃಷ್ಣಾಬಾಯಿ–"ನಾನು ಕಲ್ಯಾಣಗೀತಗಳನ್ನು ಕಲಿಯಲೇ ಇಲ್ಲ. ನಿನಗೆ ಲೆಕ್ಕವಿಲ್ಲದ ಗೀತಗಳು ಬರುತ್ತವಷ್ಟೆ?"

ಅಂಬಾಬಾಯಿ–"ನಾನು ಕಲಿತಿದ್ದೆನು; ಈಗ ಒಂದೂ ನೆನಪಿಗೆ ಬರುವುದಿಲ್ಲ. ಅದಲ್ಲದೆ ಮದುಮಗಳ ತಾಯಿಗೆ ಗಂಟ್ಲು ಬಿದ್ದುಹೋಗುವ ಕಟ್ಟಳೆಯುಂಟಷ್ಟೆ? ನನ್ನ ಗಂಟ್ಲು ಬಿದ್ದುಹೋಗಿದೆ. ರುಕ್ಮಿಣೀಬಾಯೀ, ನೀನಾದರೂ ಹಾಡು,–'ನೀನು ಹಾಡು, ನೀನು ಹಾಡು' ಎಂಬ ನಮ್ಮ ಈ ರಗಳೆಯನ್ನು ನೋಡಿ ಗಂಡಸರು ನಗುವರು. ಇದು ನಮ್ಮಲ್ಲಿ ಮಾತ್ರ ಒಂದು ಹೊಸ ಪರಿಯಲ್ಲ, ಎಲ್ಲವರಲ್ಲಿಯೂ ಹೀಗೆಯೇ– ಆದರೂ ಗಂಡಸರಿಗೇನು? ನಗುವುದಕ್ಕೇನಾದರೂ ಸಿಕ್ಕಿತೆಂದರಾಯಿತು. ನೀನು ಹಾಡವ್ವ."

ರುಕ್ಮಿಣೀಬಾಯಿ–"ಹಾಡುತ್ತೇನೆ, ನಗಾಡಬೇಡಿರಿ,–"

"ಸರ್ವೇಶ್ವರ ಸುಕುಮಾರನಿಗೆ,–ಜಯ
ಸರ್ವೇಶ್ವರಿ ವಾಗ್ದೇವತೆಗೆ
ಪಾರ್ವತಿಪತಿ ಚರಣಕೆ ವಂದಿಸಿ"–ಎಂಬುವಷ್ಟರಲ್ಲಿ ಕೀ ಎಂದು ಒಂದಪಸ್ವರ ಹುಟ್ಟಲು, "ನನ್ನಿಂದ ಕೂಡದು. ನಾನೇಕೆ ನಿಮ್ಮ ಕೈಯಲ್ಲಿ ಸಿಕ್ಕಿದೆ! ನನ್ನಿಂದ ಸರ್ವಥಾ ಕೂಡದು" ಎಂದು ಸೀರೆಯ ಸೆರಗು ಮುಖದ ಮೇಲಕ್ಕೆಳೆದು, ಮುಖ ತಗ್ಗಿಸಿ ಒಂದೇ ಮನಸ್ಸುಮಾಡಿ ಕುಳಿತುಕೊಂಡಳು.

ಅಂಬಾಬಾಯಿ–"ಮುಂದೇನಪ್ಪಾ ಉಪಾಯ? ಓಹೋ, ನೆನಪಾಯಿತು, ನಮ್ಮ ಶಾಂಭವಿಗೆ ಇಡೀ ಸೀತಾಕಲ್ಯಾಣ ಮುಖಪಾಠವಿದೆ. ಎಲ್ಲಿ, ಶಾಂಭವಿ, ನೀನು ಹೇಳವ್ವಾ–ಹೇಳು–ನೆವನವಿಲ್ಲದೆ ಹೇಳು, ಅಂಜಬೇಡ; ನಾವೆಲ್ಲರೂ ಇದ್ದೇವಷ್ಟೆ? ಅಲ್ಲಲ್ಲಿ ಸಹಾಯ ಮಾಡುವೆವು, ಹೇಳು, ಹೊತ್ತು ಹೋಗುತ್ತೆ. ನಮ್ಮ ಶಾಂಭವಿ!–ಎಷ್ಟು ಜಾಣೆ! ಹೇಳವ್ವಾ!"

ಶಾಂಭವಿಯು ಅಳುಕುತ್ತಾ, ಅಳುಕುತ್ತಾ ಕಡೆಗೆ ಹೇಗೂ ಸೀತಾಕಲ್ಯಾಣದ ಗೀತಗಳನ್ನು ಹಾಡಿದಳು. ಆಕೆಯೊಟ್ಟಿನಲ್ಲಿ ಬೇರೆ ಸ್ತ್ರೀಯರೂ (ಅಂದರೆ ಮುಖ್ಯವಾಗಿ ಹಾಡಲಾರೆವೆಂದು ಮೊದಲು ಹೇಳಿದವರು) ಹಾಡಿದರು. ಆ ಮೇಲೆ ವಧೂವರರ ಪಕ್ಷದವರು ಬಗೆಬಗೆಯ ಪರಿಮಳ ದ್ರವ್ಯಗಳನ್ನೂ ಪುಷ್ಪಗಳನ್ನೂ ಮಧುರ ಪದಾರ್ಥಗಳನ್ನೂ ಹಂಚಿದರು. ನರ್ತನ ಸ್ತ್ರೀಯರು ಗಾಯನ ನರ್ತನಗಳಿಂದಲೂ ಸಲಾಮುಗಳಿಂದಲೂ ಬಹಳ ಹಣವನ್ನು ಸಂಪಾದಿಸಿದರು. ತ್ರಿಯಂಬಕರಾಯನು ದೊಡ್ಡದೊಂದು ಹರಿವಾಣದಲ್ಲಿ ತರತರದ ನಾಣ್ಯಗಳನ್ನು ಸುರಿದು, ಅಲ್ಲಿ ಕೂಡಿದ ಬ್ರಾಹ್ಮಣಕುಲದವರಿಗೆ ತಾರತಮ್ಯಾನುಸಾರವಾಗಿ ಒಟ್ಟಿನಲ್ಲಿ ಒಂದು ಸಾವಿರ ರೂಪಾಯಿಗೆ ಕಡಿಮೆಯಾಗದೆ ದಕ್ಷಿಣೆಯನ್ನು ಹಂಚಿದನು. ಲಗ್ನದ ಕ್ರಮಗಳೆಲ್ಲ ತೀರಿದ ನಂತರ ಕೂಡಿದವರೆಲ್ಲರೂ ತಂತಮ್ಮ ಮನೆಗಳಿಗೆ ಹೋದರು.

ಆ ಮೇಲೆ ಚತುರ್ಥಿ, ನಾಗೋಲೆ ಮುಂತಾದ ಕ್ರಮಗಳೆಲ್ಲ ಸಾಂಗವಾಗಿ ಆಯಾ ದಿವಸಗಳಲ್ಲಿ ನಡೆದು, ಎಂಟು ದಿವಸದಲ್ಲಿ ಮದುವೆಯ ಕಾರ್ಯವು ಸಮಾಪ್ತವಾಯಿತು. ಎಲ್ಲಾ ಕೂಡಿ ಭೀಮರಾಯನಿಗೆ ಹದಿನೈದು ಸಾವಿರ ರೂಪಾಯಿ ವೆಚ್ಚವಾಯಿತೆಂದು ಹೇಳಿದರೆ, ಅದರಲ್ಲಿ ಅತಿಶಯೋಕ್ತಿ ಇಲ್ಲದ ಹಾಗಿತ್ತು.

## ೨೫

ಭಾಸ್ಕರರಾಯನು ಮದ್ರಾಸಿನಲ್ಲಿ ಬಹು ಬುದ್ಧಿಯಿಂದ ಕಲಿಯುತ್ತಾ ಇದ್ದು ಕಡೆಗೆ ಬಿ.ಎ. ಪರೀಕ್ಷೆಯಲ್ಲಿ ಸಂಸ್ಥಾನದಲ್ಲಿ ಪ್ರಥಮಸ್ಥಾನ ಹೊಂದಿ, ತೇರ್ಗಡೆಪಡಲು, ಅನೇಕರಿಂದ ಬಹುಮಾನಗಳನ್ನು ಹೊಂದಿದನು. ಇದನ್ನು ಕೇಳಿ ಸುಶೀಲೆ, ಅಮೃತರಾಯ, ಜಲಜಾಕ್ಷಿ ಇವರು ಬಹಳ ಸಂತೋಷಪಟ್ಟರು. ಊರಿನವರೆಲ್ಲ–"ಇಂತಹ ಒಬ್ಬ ಹುಡುಗ ಸಾಲದೆ! ಕುಲದೀಪಕನಲ್ಲವೆ! ಅಮೃತರಾಯನಿಗೆ ಸ್ವಂತ ಪುತ್ರನಿಲ್ಲದಿದ್ದರೂ, ಈ ಹುಡುಗನು ತನ್ನ ಮಗುವೇ ಎಂದು ಭಾವಿಸಿ ಅವನ ವಿದ್ಯಾಭ್ಯಾಸಕ್ಕೆ ಬೇಕಾದ ಸಕಲ ಸಹಾಯಗಳನ್ನು ಮಾಡಿ, ಹುಡುಗನಿಗೆ ಇಂತಹ ಅನುಪಮವಾದ ಒಳ್ಳೇ ಸ್ಥಿತಿಗೆ ತಂದನು. ಇಂತಹ ಸುಪುತ್ರನು ಹುಟ್ಟಬೇಕಾದರೆ, ಸುಂದರರಾಯನು ಎಷ್ಟು ಜನ್ಮಗಳಲ್ಲಿ ತಪಸ್ಸುಮಾಡಿದ್ದಾನೊ? ಶಾಭಾಸು! ಸಾರ್ಥಕವಾಯಿತು!" ಎಂದು ಮನೆ ಮನೆಗಳಲ್ಲಿ ಹೊಗಳತೊಡಗಿದರು. ಇದೇ ಸಮಯದಲ್ಲಿ ಸಂಜೀವರಾಯನು ಬಿ.ಎ. ಪರೀಕ್ಷೆಯಲ್ಲಿ ಬಹು ಉಚ್ಚಸ್ಥಾನದಲ್ಲಲ್ಲದಿದ್ದರೂ, ಒಂದನೇ ತರಗತಿಯಲ್ಲಿ ತೇರ್ಗಡೆಪಟ್ಟಿದ್ದನು. ಭೀಮರಾಯನು ಭಾಸ್ಕರರಾಯನ ವರ್ತಮಾನವನ್ನು ಕೇಳಿ ಒಂದು ದಿವಸ ಹೆಂಡತಿಯೊಡನೆ, "ಭಾಸ್ಕರನ ಸುದ್ದಿ ಕೇಳಿದೆಯಾ? ಎಲ್ಲಿ ಹೋದರೂ ಯಾರ ಬಾಯಿಯಲ್ಲಿಯೂ ಭಾಸ್ಕರನ ಸ್ತೋತ್ರವೇ. ಬಿ.ಎ. ಪರೀಕ್ಷೆಯಲ್ಲಿ ಪಾಸುಹೊಂದಿ ಅನೇಕ ಬಹುಮಾನ ಬಿರಿದು ಬಿಲ್ಲೆಗಳನ್ನು ಹೊಂದಿದ್ದಾನಂತೆ. ಸಂಸ್ಥಾನದಲ್ಲಿ ಎಲ್ಲಾ ಹುಡುಗರನ್ನೂ ಹಿಂದೆಹಾಕಿ ಪ್ರಥಮಸ್ಥಾನ ಪಡೆದಿದ್ದಾನಂತೆ. ಇನ್ನು ಏನೇನೆಲ್ಲ ಅಗಾಧವಾದ ಕೆಲಸಗಳನ್ನು ಮಾಡುತ್ತಾನೊ ತಿಳಿಯದು. ಸಾಹಸದಲ್ಲಿ ಸಾಕ್ಷಾತ್ ಅರ್ಜುನನೇ ಎಂದು ಹೊಗಳುತ್ತಾರೆ" ಎಂದು ಹೇಳಲು, ಅವಳು "ಅದೆಲ್ಲ ಹೌದು, ಎಕ್ಕಲೆಗಳಿಗೆ ರೆಕ್ಕೆಗಳು ಬಂದಾಗ ಲೆಕ್ಕವಿಲ್ಲದೆ ಹಾರಾಟ. ತಾವು ಸುಮ್ಮಗಿರ್ರಿ; ಎಣ್ಣೆ ತೀರುವಾಗ ದೀಪವು ಭಗ್ಗೆಂದುರಿಯುತ್ತೆ. ಅಲ್ಪಾಯುಷಿಗಳ ಮಾತು ನಮಗೇಕೆ? ಆ ಹಾರಾಟದ ಬಗೆಯೆಲ್ಲ ನಾವು ಸ್ವಲ್ಪ ದಿವಸದಲ್ಲೆ ನೋಡುವೆವು" ಎಂದು ಪ್ರತ್ಯುತ್ತರವನ್ನು ಕೊಡಲು, ಭೀಮರಾಯನು "ಅಲ್ಪಾಯುಷಿ!" "ಸ್ವಲ್ಪ ಸಮಯದಲ್ಲೇ ಬಗೆ ನೋಡುವುದು!" ಇದೆಲ್ಲ ಏನು? ಎಂದು ತನ್ನೊಳಗೆ ತಾನೇ ಭಯಪಟ್ಟು, "ಭಾಸ್ಕರನು ಕಮಲಪುರಕ್ಕೆ ಬೇಗನೇ ತಿರಿಗಿ ಬರುವುದು ಹೇಗಿದೆಯೊ?"

"ಎಂದಾದರೂ ಬಾರದಿರನಷ್ಟೆ?"

“ಬಂದರೇನಾಗುವುದು?”

“ಬಂದ ಮೇಲೆ ಹೇಳುವೆನು.”

“ಈಗಲೇ ಹೇಳಬಾರದೆ?”

“ಮುಂದೆ ನಡೆಯುವ ಕಾರ್ಯ ಈಗಲೇ ಹೇಳುವುದು ಹೇಗೆ?”

ಭೀಮರಾಯನು ಸ್ವಲ್ಪ ಹೊತ್ತು ಸುಮ್ಮಗೆ ನಿಂತು, ಕೋಸುಗಣ್ಣಿನಿಂದಾಲೋಚಿಸಿ, “ಅದೇನೋ, ನಾನರಿಯೆ. ದೇವಕಿಯ ಪೀಕಲಾಟಕ್ಕೆ ಇನ್ನು ನಾನು ಕೈಹಾಕಲಾರೆನು. ಒಂದಾವರ್ತಿ ಅಸುವುಳಿಸಿ ತಪ್ಪಿಸಿಕೊಂಡದ್ದೇ ಸಾಕು. ಅಷ್ಟು ತಾನೇ ಅಲ್ಲ, ದೇವಕಿಗೆ ಕೊಟ್ಟ ವಾಗ್ದಾನ ಪ್ರಕಾರ ನಾವು ಈವರೆಗೆ ನಡೆದುಕೊಳ್ಳಲೂ ಇಲ್ಲ. ಎರಡನೇ ನಾನು–”(ಅತ್ತಿತ್ತ ನೋಡುತ್ತಾನೆ.)

“ಹೂಂ! ಆಯಿತೇ ತಮ್ಮ ಅಠರಾಪುರಾಣ! ಮುಂದುವರಿಸಲಿ! ಏನು ಕಷ್ಟವಪ್ಪಾ! ಹಿಂದಿನ ಈ ಒಣರಗಳೆಗಳನ್ನೇಕೆ ಬಿಚ್ಚಿದಿರಿ?”

“ಹಾಗಲ್ಲ, ‘ಅಲ್ಪಾಯುಷಿ’, ‘ಬಗೆ ನೋಡುವೆವು’ ಎಂದು ಹೀಗೆಲ್ಲ ನೀನು ಮಾತನಾಡಿದೆ. ಆದುದರಿಂದ ಮೊದಲಿನಂತೆಯೇ ಏನಾದರೂ ಸಾಹಸದ ಯೋಚನೆ ಹತ್ತಿತೋ ಎಂದು ಬೆದರಿಹೋದೆ. ಹಾಗಲ್ಲವಾದರೆ ಹೋಗಲಿ.”

ಇಷ್ಟು ಮಾತನಾಡುವಾಗ ಶ್ರೀ ಗುರುಮಠದಿಂದ ಒಂದು ನಿರೂಪ ತಲುಪಿತು. ಅದರಲ್ಲಿ “ಭಾಸ್ಕರನೆಂಬ ಹುಡುಗನ ನಡತೆಗಳ ಕುರಿತು ಕಮಲಪುರದಿಂದ ಒಂದು ಬಿನ್ನಹಪತ್ರ ಮುಟ್ಟಿದೆ. ಆದರೆ ಅದು ಯಾರು ಬರಕೊಂಡದ್ದೆಂದು ಗೊತ್ತಾಗುವುದಿಲ್ಲವಾದ್ದರಿಂದ ಅದರ ವಿಷಯದಲ್ಲಿ ಯಾವುದೊಂದು ವ್ಯವಹರಣೆಯೂ ನಡಿಸುವಣಾಗಲಿಕ್ಕಿಲ್ಲ” ಎಂದು ಬರೆದಿರುವುದನ್ನು ಭೀಮರಾಯನು ಹೆಂಡತಿಗೆ ತಿಳಿಸಲು, ಅವಳು “ಆಗಲಿ, ಮುಂದೆ ನೋಡಿಕೊಳ್ಳೋಣ” ಎಂದಳು. ಇದರಿಂದ ಇಬ್ಬರಿಗೂ ತತ್ಕಾಲಕ್ಕೆ ಸ್ವಲ್ಪ ಯೋಚನೆಗೆ ಕಾರಣವಾಯಿತು. ಆದರೆ ಮೂರು ನಾಲ್ಕು ದಿವಸದ ನಂತರ ಭೀಮರಾಯನು ಹುಟ್ಟಲೇ ಇಲ್ಲದ ಒಬ್ಬ ಮನುಷ್ಯನ ಹೆಸರು ಕಾಣಿಸಿ ಅದೇ ವಿಷಯದಲ್ಲಿ ಮತ್ತೊಂದು ಬಿನ್ನಹಪತ್ರ ಬರೆದು ಅಂಚೆಯ ದ್ವಾರಾ ಕಳುಹಿಸಿದನು.

ಭಾಸ್ಕರರಾಯನು ‘ಗೌರ್ನ್‌ಮೆಂಟು ಓಫ್ ಇಂಡಿಯಾ ಸ್ಕೋಲರ್‌ಶಿಪ್’ ಎಂಬ ಬಹುಮಾನದ ವಿದ್ಯಾರ್ಥಿಯ ವೃತ್ತಿಯನ್ನು ಪಡೆದು, ಸಿ.ಎಸ್. ಎಂಬ ಪರೀಕ್ಷೆಗೋಸ್ಕರ ವಿಲಾಯತಿಗೆ ಹೋಗುವುದಕ್ಕೆ ನಿಶ್ಚಯಿಸಿ, ಪ್ರಥಮತಃ ತನ್ನ ಪ್ರಿಯ ತಾಯಿ, ರಕ್ಷಕನಾದ ಅಮೃತರಾಯ, ಜಲಜಾಕ್ಷಿ ಇವರನ್ನು ಕಂಡು ಆ ಮೇಲೆ, ಕಮಲಪುರದಿಂದಲೇ ಹೊಗೆ ಹಡಗವೇರಿ ಪ್ರಯಾಣ ಮಾಡುವುದುತ್ತಮವೆಂದು ತಿಳಿದುಕೊಂಡು, ತಾಯಿಗೂ ಅಮೃತರಾಯನಿಗೂ ತಂತಿಯ ದ್ವಾರಾ ತಿಳಿಸಿ, ನಾಲ್ಕೈದು ದಿವಸದಲ್ಲಿ ಹೊಗೆಹಡಗದಲ್ಲಿ ಸಂಜೀವರಾಯನ ಸಮೇತ ಕಮಲಪುರದ ಬಂದರಕ್ಕೆ ತಲಪಿದನು. ಅಮೃತರಾಯನು ತನ್ನ ಇಷ್ಟಮಿತ್ರರೊಡನೆ ಕೂಡಿ ಬಂದರಕ್ಕೆ ಹೋಗಿ, ಹುಡುಗರಿಬ್ಬರನ್ನು ಕಂಡು, ಕ್ಷೇಮ

ಸಮಾಚಾರಗಳನ್ನು ಮಾತನಾಡಿ, ಅವರನ್ನು ತನ್ನ ಜೋಡುಕುದುರೆಯ ಸಾರೋಟಿನಲ್ಲಿ ಕುಳ್ಳಿರಿಸಿಕೊಂಡು, ಬೇರೆ ಸಾರೋಟುಗಳಲ್ಲಿ ಇಷ್ಟಮಿತ್ರರ ಸಮೇತ ಮನೆಗೆ ಬರುತ್ತಾ ಸಂಜೀವರಾಯನನ್ನು ಅವನ ಮನೆಗೆ ಮುಟ್ಟಿಸಿ, ಅಲ್ಲಿಂದ ಮುಂದುವರಿಸಿ, ತನ್ನ ಮನೆಗೆ ಮುಟ್ಟಿ ಪತ್ನಿಯನ್ನು ಕರೆದು, "ಇಗೋ ನಮ್ಮ ಭಾಸ್ಕರರಾಯ! ಹಡಗದಲ್ಲಿ ಆಹಾರ ನಿದ್ರೆ ಸರಿಯಾಗಿರಲಿಲ್ಲವೆಂದು ತೋರುತ್ತೆ. ಫಲಾಹಾರ ಸಿದ್ಧವಿದೆಯೇ?" ಎಂದು ಕೇಳಲು, ಅವಳು "ಬಾರಯ್ಯ, ಭಾಸ್ಕರಾ" ಎಂದು ಹುಡುಗನನ್ನು ಒಳಗೆ ಕರೆದುಕೊಂಡುಹೋಗಿ, ಕುಳ್ಳಿರಿಸಿ, "ಹೇಗಪ್ಪಾ, ಚೆನ್ನಾಗಿದ್ದೀಯಾ? ಪರೀಕ್ಷೆಯಲ್ಲಿ ಜಯಿಸಬೇಕೆಂಬ ತವಕದಿಂದ ತಾನೇ ಕಷ್ಟಪಟ್ಟೆಯೆಂದು ನಿನ್ನ ಶರೀರ ಸ್ಥಿತಿಯಿಂದ ಕಾಣುತ್ತೆ. ಇರಲಿ" ಎಂದು ಪ್ರೀತಿಪೂರ್ವಕವಾದ ಮಾತುಗಳಿಂದುಪಚರಿಸಿ ಫಲಾಹಾರವನ್ನು ಕೊಟ್ಟು ವಿಶ್ರಾಂತಿಪಡಿಸಿದಳು. ಆ ಮೇಲೆ ಸ್ವಲ್ಪ ಹೊತ್ತಿನಲ್ಲೇ "ಭಾಸ್ಕರಾ, ಸ್ನಾನಕ್ಕೆ ಹೋಗು" ಎಂದು ಜಲಜಾಕ್ಷಿಯು ಹೇಳಲು, "ಅಮ್ಮಾ, ತಾಯಮ್ಮನವರನ್ನು ಕಾಣದೆ ಬಹಳ ದಿವಸಗಳಾದುವು. ಅಪ್ಪಣೆ ಕೊಟ್ಟರೆ, ಬೇಗ ಹೋಗಿ ಕಂಡುಬರುತ್ತೇನೆ. ಈಗಲೇ ಫಲಾಹಾರ ಮಾಡಿದ್ದೇನಷ್ಟೆ? ತಾಯಮ್ಮನವರನ್ನು ಕಂಡುಬಂದು ಸ್ನಾನಮಾಡಿದರಾಗದೇ?" ಎನಲು, ಜಲಜಾಕ್ಷಿಯು ತನ್ನೊಳಗೆ ತಾನೇ 'ಹುಡುಗನಿಗೆ ಎಷ್ಟಾದರೂ ತಾಯಿಯ ಮೇಲೆ ಇರುವಷ್ಟು ಮಮತೆ ನಮ್ಮ ಮೇಲಿರುವುದೇ? ಎಷ್ಟಾದರೂ ಒಂಭತ್ತು ತಿಂಗಳು ಹೊತ್ತ ತಾಯಿ. ಆದರೂ ಪ್ರಥಮತಃ ನಮ್ಮಲ್ಲಿಗೇನೇ ಬಂದನು. ನಮ್ಮನ್ನು ತಂದೆ ತಾಯಿಗಳಂತೇ ಭಾವಿಸುತ್ತಾನೆಂಬುದಕ್ಕೆ ಸಂಶಯವೇನು' ಎಂದಾಲೋಚಿಸಿ, ಸಮಾಧಾನಪಟ್ಟು, "ಹೋಗಿ ಬಾ, ಭಾಸ್ಕರಾ, ಆದರೆ ಸ್ನಾನಕ್ಕೆ ಇಲ್ಲಿಗೆ ತಾನೇ ಬಾ, ಬಲ್ಲೆಯಾ? ರಾಯರಿಗೆ ನಾನು ತಿಳಿಸುತ್ತೇನೆ" ಎಂದು ಹೇಳಿ, ಹೊರಗೆ ಬಂದು, ಗಂಡನೊಡನೆ "ಭಾಸ್ಕರನು ತಾಯಿಯನ್ನು ಕಂಡು, ಮಾತನಾಡಿ ಬರುವುದಕ್ಕೆ ಹೋಗುತ್ತಾನಂತೆ. ಊಟ ತೀರಿಸಿ ಹೋಗೆಂದರೆ ಕೇಳಲಾರನು. ಹೋಗಿಬರಲೇ?" ಎಂದು ಕೇಳಲು, ಅಮೃತರಾಯನು "ಸಂಶಯವೇನು? ತಾಯಿಯನ್ನು ಕಾಣಲಾತುರಪಡುತ್ತಾನೇನೊ, ವಿಹಿತವೇ. ಸಂಗಡ ದೂಮನನ್ನು ಕೊಟ್ಟು ಕಳುಹಿಸು" ಎಂದುತ್ತರಕೊಡಲು, ದೂಮನನ್ನು ಕರೆದು, "ಎಲೋ? ಭಾಸ್ಕರನನ್ನು ತಾಯಿಯ ಮನೆಗೆ ಮುಟ್ಟಿಸಿ, ಅವನು ತಾಯಿಯ ಸಂಗಡ ಮಾತನಾಡಿ, ಅಲ್ಲಿ ಬೇರೇನಾದರೂ ಕೆಲಸವಿದ್ದರೆ ಮಾಡಿ, ಹಿಂದಕ್ಕಿಲ್ಲಿ ಬರುವುದಕ್ಕೆ ಹೊರಡುವವರೆಗೆ ನೀನಲ್ಲೇ ಇದ್ದು, ಬರುವಾಗ ಸಂಗಡಲೇ ಬಾ; ಬಿಟ್ಟು ಬರಬೇಡ ಬಲ್ಲೆಯಾ?" ಎಂದೆಚ್ಚರಿಸಿ ಹೇಳಿ ಅವನನ್ನು ಸಂಗಡಕೊಟ್ಟು ಕಳುಹಿಸಿದಳು.

## ೨೬

ಭಾಸ್ಕರರಾಯನು ಮನೆಗೆ ಬಂದು ತಾಯಿಯನ್ನು ಕಂಡು ನಮಸ್ಕರಿಸಿ ನಿಲ್ಲಲು, "ಬಂದೆಯಾ, ಕಂದಾ? ಬಹಳ ಬಚ್ಚಿಹೋಗಿದ್ದಿ. ಪರೀಕ್ಷೆಗಳಲ್ಲಿ ಜಯಿಸಬೇಕೆಂಬ ಕಕ್ಕುಲತೆಯಿಂದ

ದೇಹಾರೋಗ್ಯವನ್ನಲಕ್ಷಿಸಿದೆಯೇನೋ? ಮುಂದಾದರೂ ದೇಹಾರೋಗ್ಯವನ್ನಲಕ್ಷಿಸಬೇಡ. ದೇಹಾರೋಗ್ಯವಿಲ್ಲದೆ ಕಲಿಯುವಿಕೆ ಏತಕ್ಕೆ? ಕುಳ್ಳಿರು, ಒಂದಿಷ್ಟು ಚಾ ಮಾಡುತ್ತೇನೆ" ಎಂದು ಹೇಳಿದಾಗ– "ಬೇಡ, ನಾನು ಬಂದರಕ್ಕೆ ಮುಟ್ಟುವಾಗಲೇ ಅಮೃತರಾಯರು ನನ್ನನ್ನು ತನ್ನ ಸಾರೋಟಿನಲ್ಲಿ ಮನೆಗೆ ಕರೆದುಕೊಂಡು ಹೋಗಿ, ಅಲ್ಲಿ ಜಲಜಾಕ್ಷ್ಯಮ್ಮನವರು ಚಾ ಮುಂತಾದ್ದನ್ನು ಕೊಟ್ಟರು. ಸ್ನಾನಕ್ಕಲ್ಲಿಗೆ ತಾನೇ ಹೋಗಬೇಕಾಗಿ ಅವರಿಬ್ಬರೂ ಒತ್ತಾಯಮಾಡಿ ಹೇಳಿದ್ದಾರೆ. ನೀನೀಗ ನನಗೋಸ್ಕರ ಅಡಿಗೆಯೋ ಫಲಾಹಾರಕ್ಕೋ ಮಾಡುವ ಅವಶ್ಯವಿಲ್ಲ. ನಾನು ಪ್ರಥಮತಃ ಬಂದು ನಿನ್ನ ಕಾಲಡಿಗಳನ್ನು ಕಾಣಬೇಕಿತ್ತು. ಆದರೆ ಕಾರಣಾಂತರದಿಂದ ಅಮೃತರಾಯರಲ್ಲಿಗೆ ಹೋಗಬೇಕಾಯಿತು. ಅದಕ್ಕಾಗಿ–"

"ಹೌದು, ಹೌದು, ಅದನ್ನೆಲ್ಲ ನಾನು ಬಲ್ಲೆನು. ನೀನು ಕಳೆದ ಸಾರಿ ಇಲ್ಲಿಗೆ ಬಂದಾಗಲೇ ಅವರು 'ನಮ್ಮ ಭಾಸ್ಕರ' 'ನಮ್ಮ ಭಾಸ್ಕರ' ಎನ್ನುತ್ತಿದ್ದರು. ಆ ಮೇಲೆಯೂ ಅವರು ನಿನ್ನ ವಿಷಯದಲ್ಲಿ ಕೆಲವು ಸಂಗತಿಗಳನ್ನು ಮಾತನಾಡುತ್ತಿದ್ದರು. ನನಗೂ ಗುಟ್ಟು ತುಸಾ ಗೊತ್ತಾಗಿದೆ. ಅದು ಹೇಗೂ ಇರಲಿ. ನೀನು ಸ್ನಾನಕ್ಕೆ ಹೋಗು, ಊಟ ಸಿದ್ಧವಿದೆ. ದೂಮನೇತಕ್ಕೆ ನಿಂತಿದ್ದಾನೆ?"

"ನನ್ನ ಸಂಗಡ ಹೋಗುವುದಕ್ಕಾಗಿ ನಿಂತಿದ್ದಾನೇನೋ?"

"ಹಾಗೆಯೇ?"

"ನಾಳೆ ಇಲ್ಲಿಗೆ ಬಂದು ಹತ್ತು ಹದಿನೈದು ದಿವಸ ಇಲ್ಲೇ ಇರುವೆನು. ಈಗ ಅವರು ಹೇಳಿದ ಮಾತನ್ನೇಕೆ ತೆಗೆದು ಹಾಕುವುದು?"

"ಇದೇನು! ಹತ್ತು ಹದಿನೈದು ದಿವಸದ ನಂತರವೆಲ್ಲಿ?"

"ಮತ್ತೆ ಹೇಗೂ ವಿಲಾಯತಿಗೆ ಹೋಗುವುದಕ್ಕೆ ಹೊರಡಬೇಕಷ್ಟೆ?"

"ಎಲ್ಲಿಗೆ?"

"ವಿಲಾಯತಿಗೆ."

"ವಿಲಾಯತೆಂದರೆಲ್ಲಿ?"

"ವಿಲಾಯತೆಂದರೆ ನಮ್ಮ ಮಹಾರಾಣಿಯವರು ಇರುವ ರಾಜ್ಯ."

"ಅಲ್ಲಿಗೇಕೆ ಹೋಗುವುದು?"

"ಸಿ.ಎಸ್. ಎಂಬ ಪರೀಕ್ಷೆ ಕೊಡುವುದಕ್ಕೋಸ್ಕರ."

"ಅಯ್ಯೋ! ಎಷ್ಟು ಪರೀಕ್ಷೆಗಳಪ್ಪಾ! ವಿಲಾಯತೆಂದರೆ ಎಷ್ಟು ದೂರವಿದೆ?"

"ಅದು ಇಲ್ಲಿಂದ ಸುಮಾರು ಆರು ಸಾವಿರ ಮೈಲಷ್ಟು ದೂರವಿದೆ."

"ಅಲ್ಲಿಯ ವಾಯುಗುಣ ಹೇಗೆ? ಜನರೆಂತಹರು?"

"ವಾಯುಗುಣ ಸ್ವಲ್ಪ ಹೆಚ್ಚುಶೀತ. ಜನರೆಲ್ಲ ಈ ದೇಶದಲ್ಲಗೋ ಸರದಾರೆಂದು ನಾವು ಹೇಳುತ್ತೇವೆ, ಅಂತಹರು."

"ಅಲ್ಲಿ ನಮ್ಮ ಜಾತಿಯವರಿದ್ದಾರೇನು?"

"ಈ ದೇಶದಿಂದ ಹೋದವರೊಬ್ಬರಿಬ್ಬರಿದ್ದಾರೆ."

"ಆ ಪರೀಕ್ಷೆ ಕೊಟ್ಟು ತೇರ್ಗಡೆ ಪಟ್ಟು ಬರುವುದಕ್ಕೆ ಎಷ್ಟು ತಿಂಗಳು ಬೇಕಾದೀತು?"

"ತಿಂಗಳಲ್ಲ, ಕನಿಷ್ಟಪಕ್ಷದಲ್ಲಿ ಮೂರು ವರುಷ ಬೇಕು."

"ಪ್ರಯಾಣದ ಬಗೆ ಹೇಗೆ? ಅಲ್ಲಿಗೆ ಮುಟ್ಟುವುದಕ್ಕೆ ಎಷ್ಟು ದಿವಸ ಬೇಕು?"

"ಇಲ್ಲಿಂದ ಹೊಗೆ ಹಡಗವೇರಿ ಬೊಂಬಾಯಿಗೆ ಹೋಗಿ, ಅಲ್ಲಿಂದ ನೆಟ್ಟಗೆ ವಿಲಾಯತಿಗೆ ಹೋಗುವ ಹೊಗೆ ಹಡಗದಲ್ಲಿ ಹೋಗಬೇಕು. ಮುಟ್ಟುವುದಕ್ಕೆ ಹೇಗೂ ಮೂರು ವಾರ ಬೇಕು."

"ಏತನ್ಮಧ್ಯ ಊಟಕ್ಕೇನು ಗತಿ?"

"ಅದಕ್ಕುಪಾಯವಿದೆ. ಎಷ್ಟೋ ಜನರು ಹೋಗಿ ಬರುವುದಿಲ್ಲವೇ?"

"ಉಪಾಯವೇತರದು? ಯಾರ್‍ಯಾರು ಮಾಡುವ ಅನ್ನವನ್ನು ತಿನ್ನುವುದೇನೋ?"

"ಅದೇಕೆ? ಅಮೃತರಾಯರು ಒಬ್ಬ ಅಡಿಗೇಭಟ್ಟನನ್ನು ನೇಮಿಸಿ ಸಂಗಡ ಕಳುಹಿಸುವರು."

"ಅದು ಒಂದು ವೇಳೆ ಹಾಗಾಯಿತು. ಮ್ಲೇಂಛರು ಮುಟ್ಟಿದ ನೀರಲ್ಲದೆ ಶುದ್ಧವಾದ ನೀರು ಎಲ್ಲಿಂದ?"

"ಮ್ಲೇಂಛರು ಮುಟ್ಟದಿದ್ದ ನೀರು ಎಲ್ಲಿದೆಯೊ? ಯಥಾರ್ಥದಲ್ಲಿ ನಾವು ಸಾಧಾರಣವಾಗಿ ಉಪಯೋಗಿಸುವ ನೀರೆಲ್ಲ ಮ್ಲೇಂಛರು ಮುಟ್ಟಿದ್ದಲ್ಲದೆ ಬೇರೆ ಯಾವುದು? ಬ್ರಾಹ್ಮಣರಂತೂ ಬಾವಿಗಳನ್ನು ತೋಡುವುದಿಲ್ಲವಷ್ಟೆ? ತೋಡಿದ ಬಾವಿಗಳ ನೀರನ್ನು ನಾವು ಮುಟ್ಟುವ ಮೊದಲೇ ತೋಡಿದವರು ಮುಟ್ಟುತ್ತಾರೆ."

"ಮುಟ್ಟಿದರೇನಾಯಿತು? ಆ ಮೇಲೆ ನಾವು ಅದರಲ್ಲಿ ಶುದ್ಧೋದಕವನ್ನು ಹಾಕಿ ಶುದ್ಧಪಡಿಸುವುದಿಲ್ಲವೇ?"

"ಹಾಗಾದರೆ ಚೆನ್ನಾಯಿತು. ನಾನು ಇಲ್ಲಿಂದ ಹೋಗುತ್ತಾ ಒಂದೆರಡು ಕುಪ್ಪಿ ಶುದ್ಧೋದಕವನ್ನು ತೆಗೆದುಕೊಂಡು ಹೋದರೆ ಸರಿಯಾಯಿತಷ್ಟೆ?"

"ಅದೇನೊ, ನಾನರಿಯೆ. ಇಂಗ್ರೇಜಿ ಕಲಿತ ಹುಡುಗರ ಹತ್ತಿರ ಮಾತನಾಡಿದರೆ, ಕುತರ್ಕಗಳನ್ನೇ ಮಾಡುತ್ತಾರೆ."

"ಕುತರ್ಕವಲ್ಲವ್ವಾ, ನಾನು ಹೇಳಿದ್ದನ್ನು ವಿಚಾರಿಸಿ ನೋಡು. ಮುಟ್ಟುವುದರಿಂದ ಅಶುದ್ಧವಾಗುತ್ತೆಂಬುದರ ಅರ್ಥವೇ ನನಗೆ ತಿಳಿಯಲಿಲ್ಲ. ಒಬ್ಬ ಮ್ಲೇಂಛನು ನನ್ನನ್ನು ಮುಟ್ಟಿದರೆ, ನನ್ನ ಶರೀರವು ಅಶುದ್ಧವಾಗುವುದೇ?"

"ಸಂಶಯವೇನು?"

"ಹಾಗಾದರೆ ನಾನು ಮ್ಲೇಂಛನ ಮೈಯನ್ನು ಮುಟ್ಟಿದರೆ, ಅವನ ಶರೀರವು ಶುದ್ಧವಾಗುವುದಷ್ಟೆ?"

"ಈ ಚಮತ್ಕಾರದ ಪ್ರಶ್ನೆಗಳಿಗೆ ನನ್ನಿಂದುತ್ತರ ಕೊಡಲು ಅಸಾಧ್ಯವೇ" (ಎಂದು ನಗುತ್ತಾಳೆ.)

"ಚಮತ್ಕಾರವೇನೂ ಇಲ್ಲವ್ವಾ. ನನ್ನ ಬುದ್ಧಿಗೆ ತೋರುವುದೇನೆಂದರೆ, ಶುದ್ಧವಿರಬೇಕಾದ್ದು ನಮ್ಮ ಹೃದಯವೇ; ಹೃದಯದಲ್ಲಿ ರೋತೆಯನ್ನಿಟ್ಟು ಹೊರಗಿನಿಂದ ಶರೀರವನ್ನು ಶುದ್ಧಪಡಿಸಿದರೆ ಪ್ರಯೋಜನವೇನೂ ಇಲ್ಲ. ನಿನಗೆ ಹೆಚ್ಚಾಗಿ ಹೇಳುವುದಕ್ಕೆ ನಾನು ಶಕ್ತನಲ್ಲ."

"ಸರಿಯೇ, ಹಾಗಾದರೆ ವಿಲಾಯತಿಗೆ ಹೋಗಿ ಬರುವುದು ಧರ್ಮ ವಿರುದ್ಧವೆಂದು ಗುರುಹಿರಿಯರು ಹೇಳುತ್ತಾರಷ್ಟೆ? ಹಾಗೆ ಹೋಗಿ ಬಂದವರನ್ನು ಜಾತಿಯಿಂದ ತೆಗೆದು ಹಾಕುತ್ತಾರಷ್ಟೆ? ಅದೇಕೆ?"

"ತಂತಮ್ಮ ಅನುಕೂಲತೆಗಳಿಗೋಸ್ಕರವೇನೋ. ಮತ್ತೇನು ಹೇಳಲಿ?"

"ಹೇಗೂ ಜಾತಿ ಹೋಗುತ್ತಷ್ಟೆ?"

"ಯಥಾರ್ಥದಲ್ಲಿ ಜಾತಿ ಹೋಗುವುದೆಂಬುದು ವಿಲಾಯತಿಗೆ ಹೋಗಿ ಬಂದವರದಲ್ಲ. ಕಾಲಕ್ರಮದಲ್ಲಿ ವಿಲಾಯತಿಗೆ ಹೋಗಿ ಬರುವವರ ಸಂಖ್ಯೆಯೂ ಹೆಚ್ಚು ಹೆಚ್ಚಾಗಿ ಜಾತಿ ಹೋಗುವುದೆಂಬುದು ಯಾರದೆಂದು ಹೇಳಬೇಕಾದ್ದಿಲ್ಲ."

"ನಮಗೆ ಹಗೆಯವರಿದ್ದಾರೆ. ನೀನು ಯಾರ ದಯದಿಂದಾದರೂ ನಾಲ್ಕು ಅಕ್ಷರಗಳನ್ನು ಕಲಿತದ್ದೇ ಅವರಿಗೆ ಸಹಿಸಕೂಡದ ಹೊಟ್ಟೆಕಿಚ್ಚಿಗೆ ಕಾರಣವಾಗಿದೆ. ಮುಂದೆ ನಮ್ಮ ಮೇಲೆ ಏನೇನೆಲ್ಲ ಗಂಡಗಳನ್ನು ತರಿಸುವರೊ ಗೊತ್ತಿಲ್ಲ. ನಾವು ಈ ಕಾರ್ಯದಲ್ಲಿ ಚೆನ್ನಾಗಿ ಹಿಂದೆ ಮುಂದೆ ಆಲೋಚಿಸಿ ಪ್ರವರ್ತಿಸಬೇಕಪ್ಪಾ."

"ಇನ್ನು ಕೆಲವು ದಿವಸಗಳಿವೆಯಷ್ಟೆ. ಚೆನ್ನಾಗಿ ಆಲೋಚಿಸಿ ತಾನೇ ಪ್ರವರ್ತಿಸುವೆನು. ಹೊತ್ತು ಹೋಗುತ್ತೆ, ಅಮೃತರಾಯರಲ್ಲಿ ನನ್ನ ದಾರಿ ನೋಡುತ್ತಿದ್ದಾರೇನೋ. ಹೋಗಿ ಬರಲಿಕ್ಕಪ್ಪಣೆ ಕೊಡುತ್ತೀಯಾ?"

"ಹೋಗಿ ಬಾ ಕಂದೈಯಾ. ಮಾತನಾಡುತ್ತಾ ಕುಳಿತುಕೊಂಡು ಊಟಕ್ಕೆ ಹೊತ್ತು ಮೀರಿತು."

ಭಾಸ್ಕರರಾಯನು ತಾಯಿಯನ್ನು ನಮಸ್ಕರಿಸಿ ದೂಮನ ಸಮೇತ ಅಮೃತರಾಯನಲ್ಲಿಗೆ ಬಂದನು.

## ೧೭

ಭಾಸ್ಕರರಾಯನು ಕೆಲವು ದಿವಸ ಅಮೃತರಾಯನಲ್ಲಿಯೂ ಕೆಲವು ದಿವಸ ತಾಯಿಯ ಮನೆಯಲ್ಲಿಯೂ ಇರುತ್ತಾ ವಿಲಾಯತಿಗೆ ಹೋಗುವುದನ್ನು ಕುರಿತು ಆಗಾಗ್ಗೆ ತಾಯಿಯ ಹತ್ತಿರ ಮಾತನಾಡಿ, ಅದರಿಂದ ಮುಂದಿನ ವೃದ್ಧಿಗೆ ಬಹಳ ಒಳ್ಳೇದಿದೆಯೆಂದು ಅವಳನ್ನು ಸಮಾಧಾನಪಡಿಸಿದನು. ಹತ್ತು ಹದಿನೈದು ದಿವಸ ಕಳೆದ ಮೇಲೆ ಅಮೃತರಾಯನು ಪ್ರಯಾಣದ ಸಕಲ ಸಾಹಿತ್ಯಗಳನ್ನು ಒದಗಿಸಿ, ವಿಲಾಯತಿಯಲ್ಲಿ ಸಿಕ್ಕುವ ವೃತ್ತಿಯ ಹಣದಿಂದ ಮಾತ್ರವೇ ಹುಡುಗನ ಕಾಲಕ್ಷೇಪವು ಸರಿಯಾಗಿ ನಡೆಯದೆಂದು ತಿಳಿದುಕೊಂಡು, ತನ್ನ ಸ್ವಂತ

ಕೈಯಿಂದ ಎರಡು ಸಾವಿರ ರೂಪಾಯಿ ಮುಂದಾಗಿ ಒಬ್ಬ ದೊಡ್ಡ ಗೃಹಸ್ಥನ ಬಳಿಗೆ ಕಳುಹಿಸಿ, ಹುಡುಗನು ವಿಲಾಯತಿಗೆ ಮುಟ್ಟಿದ ಮೇಲೆ ಅವಶ್ಯ ಬಿದ್ದ ಹಾಗೆ ಅವನಿಗೆ ಕೊಡುವ ಹಾಗೆ ಬೇಕಾದ ಏರ್ಪಾಡುಗಳೆಲ್ಲವನ್ನು ಮಾಡಿದನು. ಭಾಸ್ಕರರಾಯನು ಹಡಗವನ್ನೇರುವ ಮುಂಚಿನ ದಿವಸ ಕಮಲಪುರದಲ್ಲಿರುವ ಎಲ್ಲಾ ಬಿ.ಎ.ಗಳಿಗೆ ಒಂದು ಭೋಜನಕ್ಕೆ ಕರೆದನು. ಅವರೆಲ್ಲರು ಕ್ಲುಪ್ತ ಸಮಯಕ್ಕೆ ಬಂದು ಕೂಡಲು, ಅಮೃತರಾಯನೂ ಭಾಸ್ಕರರಾಯನೂ ಅವರೆಲ್ಲರನ್ನುಪಚರಿಸಿ, ತಕ್ಕ ಸ್ಥಾನಗಳಲ್ಲಿ ಕುಳ್ಳಿರಿಸಿದರು. ಭೋಜನ ಪ್ರಾರಂಭವಾಯಿತು. ಭೋಜನದ ಸಮಯದಲ್ಲಿ ಅನೇಕ ವಿಷಯಗಳೆಲ್ಲ ಪ್ರಸ್ತಾವಕ್ಕೆ ಬಂದವು. ಒಬ್ಬ ಬಿ.ಎ.ಯು,

"ಅದೆಲ್ಲಾಯಿತಷ್ಟೆ. ಸದ್ಯ ಭಾಸ್ಕರರಾಯನು sea voyage (ಸಮುದ್ರ ಪ್ರಯಾಣ) ಮಾಡಿ ಬಂದ ಮೇಲೆ ಅದರ ಫಲ ಪರ್ಯವಸಾನವೇನೋ ತಿಳಿಯದು."

ಇನ್ನೊಬ್ಬ ಬಿ.ಎ.: "ಅದು ಮುಂದಿನ ವಿಷಯವಷ್ಟೆ; ಅದರಲ್ಲಿ ವಿಶೇಷವೇನಾದರೂ ಇರುವ ಪಕ್ಷದಲ್ಲಿಯೂ ಅದು mere money matter (ಬರೇ ಹಣವಿನ ಮಾತು) ಆಗಿರುವುದು."

"ಅದು ಬರೇ money matter (ಹಣವಿನ ಮಾತು) ಆಗಿರದು. Money matter ಆದರೆ ಹೇಗೂ ಸುಧಾರಿಸಬಹುದು. ಒಂದು ವಿಧದ social ostracism, boy-cotting (ಕೂಟಸಂಪರ್ಕ ಭಂಗ) ಮುಂತಾದ ಹಲವು ಬಗೆಯ presecution (ಉಪದ್ರವ)ಗಳಿವೆ. ಒಬ್ಬನಲ್ಲಿ ಮಗಳಿಗೆ ಹನ್ನೆರಡು ವರುಷ ಪ್ರಾಯ ದಾಟುವ ವರೆಗೂ ನೆಂಟಸ್ಥಿಕೆ ಗೊತ್ತು ಹರಿಯದೆ ಆ ಮೇಲೆ ಎಲ್ಲ್ಯಾದರೂ ನೆಂಟಸ್ಥಿಕೆ ಗೊತ್ತಾದರೆ, ಆಗೀಗ ಕುತ್ತಿಗೆ ಹಿಡಿಯುವುದು."

"ಚೆನ್ನಾಯಿತಷ್ಟೆ? Reform (ಧರ್ಮಪರಿವರ್ತನೆ)ಗೆ ಇನ್ನಷ್ಟು ಸಹಾಯವಾಯಿತು. Infant marriage (ಬಾಲ ವಿವಾಹ) ಹಾಗಾದರೂ ನಿಲ್ಲಲಿ."

ಈ ಮಾತುಗಳನ್ನು ಹಳಬನಾದ ಒಬ್ಬ ಬಿ.ಎ.ಯು ಕೇಳಿ, "ಊಟಕ್ಕೆ ಕುಳಿತಲ್ಲಿ ಗುಳ್ಳೂರಿಗೆ, ಕಾಯಿ ಹೋಳಿಗೆ ತಿನ್ನುತ್ತಾ, ರುಚಿ ಹತ್ತಿರುವ ಸಮಯದಲ್ಲಿ, ಅಥವಾ lecture (ಭಾಷಣ) ಮಾಡುವಾಗ ಅಥವಾ "Madras Mail" (ಮದ್ರಾಸ ಮೈಲಿ ಎಂಬ ಸಮಾಚಾರ ಪತ್ರ) ಕೈಯಲ್ಲಿ ಹಿಡಿದುಕೊಂಡು ಬಾಯಿಯಲ್ಲಿ golden bird's-eye tobacco (ಇದೊಂದು ಬಗೆಯ ಹೊಗೆಸೊಪ್ಪು)ವಿನ ಬೀಡಿ ಸೇದುತ್ತಾ beach(ಸಮುದ್ರತೀರ)ನ ಮೇಲೆ ತಿರುಗಾಡುತ್ತಿರುವಾಗ ಹೀಗೆಲ್ಲ ಮಾತನಾಡಬಹುದು. ಪರರಿಗೆ ಹೇಳುವುದಕ್ಕೆ ನಮ್ಮಲ್ಲಿ ಬೇಕಾದಷ್ಟು ಬುದ್ಧಿವಂತಿಕೆ ಇದೆ. ಕುಂಭಕೋಣದಲ್ಲಿ ಒಬ್ಬ ಬಿ.ಎ., ಬಿ.ಎಲ್. ಮಾಡಿದ್ದಾನೆಂದು ನಾವೆಲ್ಲರೂ ಕೇಳಿದ್ದೇವಷ್ಟೇ? ವಿಧವಾ ವಿವಾಹ ಮಾಡುವುದಕ್ಕೆ ಗುರುಗಳವರು sanction (ಸಮ್ಮತ) ಕೊಡದಿದ್ದರೆ, ಆ ವಿಷಯದಲ್ಲಿ ತಾನು practical steps (ಕಾರ್ಯರೂಪಕ ವ್ಯವಹರಣೆ) ತೆಗೆದುಕೊಳ್ಳುವುದಕ್ಕೆ ನಿಶ್ಚಯಿಸಿದ್ದೇನೆಂದು ಎಲ್ಲಾ ಕಡೆಗಳಿಗೂ letters (ಪತ್ರಗಳು) ಕಳುಹಿಸಿ, ತನ್ನ ಹಂಗಿನಲ್ಲಿದ್ದ ಒಬ್ಬ ಬಾಲವಿಧವೆಯನ್ನು ಪುನರ್ವಿವಾಹ ಮಾಡಲಿಕ್ಕೆ ಉದ್ಯುಕ್ತನಾಗಿದ್ದಾಗ ಕಾಲವಶಾತ್ ಆತನ ಹೆಂಡತಿಯೇ ಮೃತವಾದಳು.

ಆಗಲನೇಕ reformers (ಧರ್ಮಪರಿವರ್ತಕರು) ಒಟ್ಟು ಕೂಡಿ ಅವನ ಹತ್ತಿರ, 'ಇಗೋ ನೀನು practical steps (ಕಾರ್ಯರೂಪಕ ವ್ಯವಹರಣೆ) ತೆಗೆದುಕೊಳ್ಳುವ ಸಮಯ ಬಂದಿದೆ. ನೀನ ಯೋಗ್ಯಳಾದ ಒಬ್ಬ ವಿಧವೆಯ ಸಂಗಡ ವಿವಾಹವಾಗಿ, ನೀನೀಗ Champion of reform (ಧರ್ಮಪರಿವರ್ತನೆಯ ವೀರ) ಎಂದೆನ್ನಿಸಬೇಕು,' ಎಂದು ಛಲವರಿತು ಹೇಳಿದಾಗ, ಆತನು ಮಾಡಿದ್ದೇನೆಂಬುದನ್ನು ನಾವು ಬಲ್ಲೆವಷ್ಟೆ? ಮಶಕದಂತಿದ್ದ ಆರೇಳು ವರುಷ ಪ್ರಾಯದ ಒಂದು ಬಾಲೆಯ ಸಂಗಡ ಮದುವೆಯಾದನಲ್ಲವೇ? ಇದೀಗ ನಮ್ಮ reform (ಧರ್ಮಪರಿವರ್ತನ!). ಪರರಿಗೆಲ್ಲ ಹೇಳಬಹುದು. 'ತಾನು ಸಾಯಬೇಕು ಸ್ವರ್ಗ ಪಡೆಯಬೇಕು' ಎಂದು ಗಾದೆ. ನಿಮ್ಮ ಈ ಒಣರಗಳೆಯ ಮಾತುಗಳಿಂದೆಲ್ಲ ಪ್ರಯೋಜನವೇನು?" ಎಂದು ಜರೆದು ಮಾತನಾಡಲು, ಮತ್ತೊಬ್ಬ ಬಿ.ಎ.ಯು, "ಸರಿ, ಸರಿ, ವಿಹಿತವಾದ remarks (ಅಭಿಪ್ರಾಯ). ನಾವು ಸುಮ್ಮಗೆ ಮಾತನಾಡಿ ಪ್ರಯೋಜನವಿಲ್ಲ, ನಾವೆಲ್ಲರೂ ಒಟ್ಟುಕೂಡಿ ಗುರುಗಳ ಹತ್ತಿರ sea voyage (ಸಮುದ್ರ ಪ್ರಯಾಣ)ನ್ನು ಕುರಿತು ಒಂದು agitation (ವಾಗ್ವಾದ) ಮಾಡಬಹುದೆಂದು ನನಗೆ ಕಾಣುತ್ತೆ. ಹೇಗಯ್ಯಾ?" ಎಂದು ಇನ್ನೊಬ್ಬ ಬಿ.ಎ.ಯನ್ನು ಕುರಿತು ಕೇಳಲು, ಅವನು "ವಾಸ್ತವವೇ, ಆದರೆ there are a few traitors in our camp, let me be outspoken (ನಮ್ಮ ಕೂಟದಲ್ಲಿ ಕೆಲವು ದ್ರೋಹಿಗಳಿದ್ದಾರೆ! ಇದ್ದದ್ದನ್ನು ಹೇಳುತ್ತೇನೆ.) ಅವರ ಉದ್ಯೋಗವೇನೆಂದು ಬಲ್ಲಿರಾ? ಇಲ್ಲಿ ಈ ಹೊತ್ತು ಸರಿಯಾಗಿ ಮಾತನಾಡಿ, ನಾಳೆ ಧರ್ಮಕಾರ್ಯಾಲೋಚನೆಯ ಸಭೆ ಕೂಡುವಾಗ ಇಲ್ಲಿಂದ delegates (ಪ್ರತಿನಿಧಿಗಳು) ಆಗಿ ಹೋಗುತ್ತಾರೆ. ಅಲ್ಲಿಗೆ ಹೋಗಿ ಮಠದಲ್ಲಿ ಒಂದೆರಡು ಚೆಲೋ ಊಟಗಳಾದ ಮೇಲೆ ಸಭೆಯ ಸಮಯದಲ್ಲಿ 'ಸಮುದ್ರ ಪ್ರಯಾಣವು ಅಶಾಸ್ತ್ರೀಯವಾದ್ದಲ್ಲವೇ?' 'ನಮ್ಮ ಬ್ರಾಹ್ಮಣಕುಲದ ಪ್ರತಿಷ್ಠೆಗೆ ಹಾನಿ ತರಿಸುವಂಥಾದ್ದಲ್ಲವೇ' ಎಂಬ ಪ್ರಶ್ನೆಗಳಿಗೆ ಉತ್ತರವಾಗಿ, ಶಾಸ್ತ್ರದ ವಿಷಯ ಶ್ರೀ ಪಾದಂಗಳವರು ನಿಶ್ಚಯಿಸುವ ಹಾಗಲ್ಲದೆ ನಮಗೆಲ್ಲಿನ ಗೊತ್ತು? ಇಲ್ಲಿಂದ ನಿಶ್ಚಯಿಸಿದ್ದಕ್ಕೆ ನಮ್ಮ ಪೂರ್ಣವಾದ ಸಮ್ಮತವಿದೆ. ಪ್ರತಿಷ್ಠೆಗೆ ಹಾನಿ ಎಂಬುದು ದಿಟವೇ. ಇತರ ಜಾತಿಯವರು ನಿಂದೆ ಮಾಡುತ್ತಾರೆ. ಏವಂಚ ತೀ ಪಾದಂಗಳವರ ನಿರ್ಣಯವನ್ನೇ ನಾವು ಶಿರಸಾವಹಿಸಿಕೊಳ್ಳಲಿಕ್ಕುಳ್ಳವರು, ಎಂದು ಹೇಳಿ, ಹಾಗೆಯೇ ಉತ್ತರಗಳನ್ನು ಬರೆದು, ಸಹಿಮಾಡಿಕೊಟ್ಟು ಒಂದು ಕಾಶ್ಮೀರ ಶಾಲನ್ನೋ ಏನಾದರೂ ಒಂದು ಉಡುಗೆರೆಯನ್ನೊ ಪಡೆದು ಬರುತ್ತಾರೆ. ಆದುದರಿಂದ agitation (ವಾಗ್ವಾದ) ಮಾಡುವುದಕ್ಕೆ ಮುಂಚಿತವಾಗಿ ಈ time servers (ಸಮಯಕ್ಕೆ ತಕ್ಕ ಹಾಗೆ ಮಾತನಾಡುವವರು)ರ ವಿಷಯದಲ್ಲಿ ಮಾಡಬೇಕಾದ್ದೇನೆಂದು ಆಲೋಚಿಸಿ, ನಮ್ಮಲ್ಲಿ Unity (ಏಕತ್ವ)ಯನ್ನುಂಟು ಮಾಡಿ, ಆ ಮೇಲೇನಾದರೂ ಮುಂದರಿಸುವುದು ಯುಕ್ತವೆಂದು ನನ್ನ ಅಭಿಪ್ರಾಯ"ವೆಂದನು. ಈ ಮಾತುಗಳಿಗೆಲ್ಲರೂ ಸಮ್ಮತಪಟ್ಟರು. "ಈ ವಿಷಯದಲ್ಲಿ ತಕ್ಕ measures (ಉಪಾಯಗಳು) ತೆಗೆದುಕೊಳ್ಳುವುದಕ್ಕೋಸ್ಕರ ಬರುವ ಆದಿತ್ಯವಾರ ದಿವಸ ಜುಬಿಲಿ ಟೌನ್ ಹಾಲಿನಲ್ಲಿ ಸಭೆ ಕೂಡಬೇಕೆಂದು ನಾನು propose (ಆಲೋಚನೆ ಹೇಳು)ಮಾಡುತ್ತೇನೆ" ಎಂದು ಒಬ್ಬ ಬಿ.ಎ.

ಕೂಗಿ ಹೇಳಲು ಇನ್ನೊಬ್ಬನು 'I second' (ಅನುಮತಿಸುತ್ತೇನೆ) ಎಂದು ಕೂಗಿದನು. ಎಲ್ಲರೂ ಹಾಗಾಗಲೆಂದು ಹೇಳಿ, ಕೇಕೇ ಬಡೆಯುವುದಕ್ಕೆ ಉಪಾಯವಿಲ್ಲದ್ದರಿಂದ ಎಡದ ಕೈ ಬೆರಳುಗಳಿಂದ ಹತ್ತರವಿದ್ದ ಪಂಚಪಾತ್ರಗಳ ಮೇಲೆ ಕಿಣಿ ಕಿಣಿ ಶಬ್ದಮಾಡಿ, ಭೋಜನ ತೀರಿದ ನಂತರ ಒಬ್ಬನು Vote of thanks to our dear Bhaskara Rao (ನಮ್ಮ ಪ್ರಿಯ ಭಾಸ್ಕರರಾಯರ ಸ್ತುತಿಗೆ ವೋಟು) ಎಂದೂ, ಮತ್ತೊಬ್ಬನ thorough success in C.S. (ಸಿವಿಲ್ ಸರ್ವಿಸ್ ಪರೀಕ್ಷೆಯಲ್ಲಿ ಪೂರ್ಣ ಜಯ) ಎಂದೂ ಕಡೆಗೆ ಎಲ್ಲರೂ ಕೂಡಿ Hurrah! (ಇದೊಂದು ವಿಲಾಯತಿಯ ನಮೂನೆಯ ಹೊಗಳಿಕೆ) ಎಂದು ಮೂರು ಮೂರು ಸಾರಿ ಕೂಗಿದರು. ಅನಂತರ ಕೈಬಾಯಿ ತೊಳೆದು, ಎಲ್ಲರೂ ಚಾವಡಿಯಲ್ಲಿ ಬಂದು ಕೂಡಿ, ಕೆಲವರು ಸಿಗರೇಟ್ ಎಂಬ ಬೀಡಿಗಳು, ಕೆಲವರು ಹವಾನ್ನ ಚುಟ್ಟಗಳು, ಇನ್ನು ಕೆಲವರು ತಂಬಾಕಿನ ನಸ್ಯ ಮುಂತಾದ್ದನ್ನು ಸೇವಿಸಿ, ಕೆಲವು ನಿಮಿಷಗಳ ನಂತರ ಡೆಜರ್ಟ್ (dessert) ಎಂಬ ಫಲಾಹಾರವನ್ನು ಮಾಡಿ, ಒಮ್ಮಿಂದೊಮ್ಮೆ good bye, good night (ವಿಲಾಯತಿ ಜನರ ಸಭ್ಯಾಚಾರದ ಮಾತುಗಳು) ಎಂದು ಹೇಳುತ್ತಾ ತಂತಮ್ಮ ಮನೆಗಳಿಗೆ ನಡೆದರು.

ಮರುದಿವಸ ಭಾಸ್ಕರರಾಯನು ವಿಲಾಯತಿಗೆ ಹೋಗುವುದಕ್ಕೆ ಹಡಗವೇರಿದನು. ಅಮೃತರಾಯನೂ ಸಂಜೀವರಾಯನೂ ಬೇರೆ ಅನೇಕರೂ ಹಡಗದ ವರೆಗೆ ಹೋಗಿ ಮುಟ್ಟಿಸಿಬಂದರು.

## ೨೮

ಭಾಸ್ಕರರಾಯನು ಹಡಗವೇರಿ ಹೋದನಂತರ ಐದಾರು ದಿವಸದಲ್ಲಿ "ಕಮಲಪುರದ ಸಭೆಯವರು ಈ ಪ್ರಕರಣವನ್ನು ಕ್ರಮದಂತೆ ವಿಚಾರಿಸಿ, ತಮ್ಮ ಅಭಿಪ್ರಾಯವನ್ನು ಕುರಿತು ಶೀಘ್ರ ಬಿನ್ನಹಪತ್ರ ಬರೆದುಕೊಳ್ಳುವುದು" ಎಂದು ತಳ್ಳೀ ಬಿನ್ನಹಪತ್ರದ ಮೇಲೆ ಶ್ರೀ ಪಾದಂಗಳವರ ನಿರೂಪವು ಧರ್ಮವಿಚಾರಕನಾದ ಭೀಮರಾಯನಿಗೆ ಬಂದು ಮುಟ್ಟಿತು. ಭೀಮರಾಯನು ಶಾನೆ ಸಂತೋಷಪಟ್ಟು, ಅಂಬಾಬಾಯಿಯನ್ನು ಕರೆದು, "ಇಗೋ, ಭಾಸ್ಕರನ ವಿಷಯದಲ್ಲಿ ನಿರೂಪ ಬಂದಿದೆ. ಪ್ರಕರಣವನ್ನು ವಿಚಾರಿಸಿ, ನಮ್ಮಭಿಪ್ರಾಯವನ್ನು ಅರಿಕೆ ಮಾಡಬೇಕಾಗಿ ಅಪ್ಪಣೆ ಇದೆ" ಎನ್ನಲು ಅವಳು ಆನಂದದಿಂದ ನಕ್ಕು, "ವಿಚಾರಣೆ ನಾಳೆ ಆದಿತ್ಯವಾರ ದಿವಸವೇ ತೀರಲಿ, ವಿಳಂಬವಾಗಬಾರದು" ಎಂದಳು. ಭೀಮರಾಯನು ಕೂಡಲೇ ತನ್ನ ಹಿರೇ ಬಂಟನಾದ ಪೊಕ್ಕು ಸೆಟ್ಟಿಯನ್ನು ಕರೆದು, "ಇಗೋ, ಈಗಲೇ ಹೋಗಿ ನಮ್ಮ ಗುಮಾಸ್ತ ದೇವರಾಯನನ್ನು ಕರೆದುಕೊಂಡು ಬಾ" ಎಂದಪ್ಪಣೆ ಕೊಟ್ಟ ಕೂಡಲೆ ಆತನು ಹೋಗಿ ಕರೆದುಕೊಂಡು ಬರಲು, ಭೀಮರಾಯನು "ಇಕ್ಕೊಳ್ಳಿರಯ್ಯಾ, ಈ ಪ್ರಕರಣವನ್ನು ವಿಚಾರಿಸುವುದಕ್ಕೋಸ್ಕರ ನಾಳೆ ಆದಿತ್ಯವಾರ ಮಧ್ಯಾಹ್ನದ ನಂತರ ಮೂರು

ಗಂಟೆ ಸಮಯದಲ್ಲಿ ಗೃಹಸ್ಥರೆಲ್ಲರೂ ತ್ರಿಯಂಬಕರಾಯರಲ್ಲಿಗೆ ಬಂದು, ಸಭೆಕೂಡಬೇಕಾಗಿ ಒಂದು ಪರಿಕ್ರಮಣ ಪತ್ರವನ್ನು ಈಗಲೇ ಬರೆದು ಕೊಟ್ಟುಬಿಡಿ. ಪೊಕ್ಕು ಸೆಟ್ಟಿ, ನೀನದನ್ನು ಕೊಂಡುಹೋಗಿ ಗೃಹಸ್ಥರೆಲ್ಲರಿಗೂ ತೋರಿಸಿ, ಅವರ ಸಹಿಗಳನ್ನು ಪಡೆದುಕೊಂಡು, ತಿರಿಗಿ ತಂದುಕೊಡು" ಎಂದಿಬ್ಬರಿಗೂ ಅಪ್ಪಣೆ ಕೊಟ್ಟನು. ಆಗ ದೇವರಾಯನು ಆ ಬಿನ್ನಹಪತ್ರ ಮತ್ತು ನಿರೂಪವನ್ನು ಓದಿನೋಡಿ ಭೀಮರಾಯನೊಡನೆ,

"ಸ್ವಾಮಿ, ಪರಿಕ್ರಮಣಪತ್ರ ಎಲ್ಲಾ ಗೃಹಸ್ಥರಿಗೂ ಕಳುಹಿಸುವುದೋ, ಅಲ್ಲ, ಮುಖ್ಯರಾದ ಕೆಲವರಿಗೆ ಮಾತ್ರವೆಯೋ?"

"ಹಾಗೇಕೆ ಕೇಳುತ್ತೀರಿ?"

"ಈ ಬಿನ್ನಹಪತ್ರದಲ್ಲಿರುವ ಅನೇಕ ವಿಷಯಗಳು ಈಗಿನ ಅನೇಕ ಗೃಹಸ್ಥರಿಗೆ ಹಿತವಾದವುಗಳೆಂಬ ಹಾಗೆ ಕಾಣುವುದಿಲ್ಲ. ಅವರೆಲ್ಲರೂ ಈ ಸಭೆಗೆ ಕೂಡಿದರೆ, ಬಹುಪಕ್ಷವು ಅವರದ್ದೇ ಆಗಿಹೋದರೆ–"

"ಏನಾಗುತ್ತೆ?"

"ಕೆಲಸ ನೆಟ್ಟಗಾಗುವುದೋ, ಇಲ್ಲವೋ, ಎಂದನುಮಾನಪಡುತ್ತೇನೆ."

"ಶಂಕರ ಭಟ್ಟರು, ದಾಸಭಟ್ಟರು, ತಿಂಮ್ಮೈಯ ಶಾಸ್ತ್ರಿಗಳು, ಈ ಮೂವರು ಅವಶ್ಯವಾಗಿ ಬರಲೇಬೇಕೆಂದು ಒಂದು ಮಾತನ್ನು ಪರಿಕ್ರಮಣಪತ್ರದಲ್ಲಿ ಸೇರಿಸಿಬಿಟ್ಟರಾಯಿತು. ಅವರು ಬಂದು ಶಾಸ್ತ್ರಪುರಾಣಗಳಿಂದೆರಡು ಶ್ಲೋಕಗಳನ್ನು ಹೇಳಿ ವ್ಯಾಖ್ಯಾನಿಸಿಬಿಟ್ಟರೆಂದರೆ, ಅವರೆದಿರಿಗೆ ನಿಲ್ಲತಕ್ಕವನ್ಯಾರು? ನುಸಿಗಳನ್ನು ಚೆಲ್ಲಿ ಒಗೆಯುವುದೇನಗಾಧವೇ?"

"ವಾಸ್ತವವೇ, ಆದರೆ ಕೆಲವು ವರ್ಷ ಹಿಂದೆ ಇದೇ ತರದ ಒಂದು ಪ್ರಕರಣವನ್ನು ಸಭೆಯವರು ವಿಚಾರಿಸುತ್ತಿರುವಾಗ ಹಿಂಗೂರ ಚಂದ್ರಶೇಖರರಾಯರು ಒಂದು ಪಟ್ಟಿಯನ್ನು ಅಂಗಿಯ ಜೇಬಿನಿಂದ ತೆಗೆದು ಓದಲಿಕ್ಕೆ ತೊಡಗಿದ ಕೂಡಲೇ ಸಭೆ–" (ಸ್ವಲ್ಪ ಕೆಮ್ಮುತ್ತಾನೆ.)

"ಸಭೆ, ಏನು?"

"ನಿಂತೇ ಹೋಯಿತು."

"ಆಗ ಧರ್ಮವಿಚಾರಕನ್ಯಾರು?"

"ಕುಂಭಾಂಡರಾಯರು."

"ಸಭೆ ನಿಲ್ಲುವುದಕ್ಕೇನು ಕಾರಣವೊ?"

"ಆ ಪಟ್ಟಿಯಲ್ಲಿ ಸಭೆಯವರ ಬುಡಕ್ಕೆ ತಾನೇ ಬರುವ ಸಂಗತಿಗಳು ಅನೇಕ ಇದ್ದುವು."

"ಕುಂಭಾಂಡರಾಯರು ಪಾಪದ ಹಳಬರು, ನನ್ನ ಹತ್ತಿರ ಚಪ್ಪಡಿ–"

"ಚಪ್ಪಡಿ ಏನು ಸ್ವಾಮಿ? ಹಿತ್ತಾಳಿ ಎಲ್ಲವೂ ಕ್ಷಣಮಾತ್ರದಲ್ಲಿ ಹೊರಗೆ ಬೀಳುತ್ತೆ."

"ಅದೇನು ಕಳೆದ ಸಾರಿ ಏನಾಯಿತು?"

"ಅದೆಲ್ಲ ನಾಚಿಕೆಗೇಡಿನ ವಿಷಯ. ಅದರಲ್ಲಿ ಇಂಥಿಂಥವರೇ ಶ್ಯಾಮಯ್ಯನವರ ಹಂಗಿಕರು, ಇಂಥಿಂಥವರೇ ಶೇಷಪ್ಪಯ್ಯನವರ ಹಂಗಿಕರು, ಇಂಥಿಂಥವರೇ ಉದ್ದ ಕಾಲಿನ

ಗಣಪಯ್ಯನವರ ಹಂಗಿಕರು ಎಂದು ಹೀಗೆಲ್ಲ ವಿವರಗಳಿದ್ದವು. ಪಟ್ಟಿಯಲ್ಲಿ ಇಂಥಿಂಥ ತರಗತಿಗಳೇ ಉಂಟೆಂದು ಹೇಳಿ ಹೆಸರುಗಳನ್ನು ಓದಲಿಕ್ಕೆ ಪ್ರಾರಂಭಿಸುವಷ್ಟರಲ್ಲಿ ಕುಂಭಾಂಡರಾಯರು ತನಗೆ ಮೈಯಲ್ಲಿ ಸ್ವಲ್ಪ ಅಸ್ವಸ್ಥವಿದೆ, ಈ ಸಭೆಯು ಇನ್ನೊಂದು ಆದಿತ್ಯವಾರ ಕೂಡಲೆಂದು ಹೇಳಿ ಎದ್ದು ಹೋಗಿಬಿಟ್ಟರು."

"ಹಾಗಾದರೆ ಈ ನಿರೂಪಪತ್ರದಲ್ಲಿ ಕಾಣುವ ಪ್ರಕರಣ ಬಗೆ ಹರಿಯಬೇಡವೇ?"

"ಅದಕ್ಕೊಂದು ಸುಲಭವಾದ ಉಪಾಯವಿದೆ. ಭಾಸ್ಕರನು ಇಲ್ಲಿಲ್ಲವಷ್ಟೆ? ಅವನನ್ನು ವಿಚಾರಿಸದೆ ಅವನ ಪರೋಕ್ಷದಲ್ಲಿ ಯಾವುದೊಂದೂ ವ್ಯವಹರಣೆ ನಡೆಸುವುದು ಆಯುಕ್ತವೆಂದು ತೋರುವುದಾಗಿ ಒಂದು ಬಿನ್ನಹ ಪತ್ರ ಬರೆದು ಹಾಕಿಬಿಟ್ಟರೆ, ಕೆಲಸ ತೀರಿತು. ಭಾಸ್ಕರನು ಇನ್ನು ಹೇಗೂ ಮೂರು ವರ್ಷಗಳ ಪರಿಯಂತರ ಬರುವಂಥಾದ್ದಿಲ್ಲ. ಅಷ್ಟರೊಳಗೆ ಯಾರ ಗತಿಯೇನೋ? ಯಾರು ಬಲ್ಲ? ಹೇಗೆ ಈ ಆರೋಪಣೆ? ತನ್ನ ಕಾಲಡಿಯಲ್ಲಿದ್ದ ಕುಂಬಳಕಾಯಿಗಳನ್ನು ಬಿಟ್ಟು, ಪರರ ಕಾಲಡಿಯಲ್ಲಿದ್ದ ಸಾಸಿವೇಕಾಳುಗಳನ್ನು ಹುಡುಕ ಹೋಗುವಾಗ ಹಿಂದೆ ಮುಂದೆ ಆಲೋಚಿಸುವುದು ಯೋಗ್ಯ. ಹೌದೋ, ಅಲ್ಲವೋ?"

"ಭಾಸ್ಕರನೀಗೆಲ್ಲಿ?"

"ಓಹೋ! ತಾವರಿಯಲಿಲ್ಲವೇ? ಅದು ಇನ್ನಷ್ಟು ಚೆನ್ನಾಯಿತು. ಮೊನ್ನೆ ಇತ್ತಲಾಗಿ ವಿಲಾಯತಿಗೆ ಹೋದನು. ಸಿ. ಎಸ್ಸೋ, ಪೀ. ಎಸ್ಸೋ, ಎಂಥಾ ಸುಡುಗಾಡಿನ ಎಸ್ಸೋ, ಏನೋ ಒಂದು ಪರೀಕ್ಷೆ ಕೂಡುವುದಕ್ಕಂತೆ. ಒಂದು ವೇಳೆಗೆ ತಿರಿಗಿ ಬಂದರೂ ಜಾತಿ ಎಲ್ಲಿ?"

"ಹಾಗೋ, ಠೀಕಾಯಿತು. ಬೀಳುವ ಮರಕ್ಕೆ ನಾವೇಕೆ ಕೊಡಲಿ ಹಾಕಬೇಕು? ಅವನ ಬಾಳುವೆ ಹೇಗೂ ತೀರಿದಂತೆಯೇ. ನಮ್ಮ ಅಂಬಾಬಾಯಿಯು ಆತನು ಅಲ್ಪಾಯುಷಿ ಎಂದು ಹೇಳಿದ್ದು ಸಟೆಯಲ್ಲ!" ಎಂದು ಖೋ ಖೋ ನಕ್ಕು, ಅಂಬಾಬಾಯಿಯನ್ನು ಕರೆದು "ಕೇಳಿದ್ದೆಯೇನೆ, ಆ ಹುಡುಗನ ಮಾತು? ನೀನು ಹೇಳಿದ ಹಾಗೆ ತಾನೇ ಆಯಿತಷ್ಟೆ?"

"ಯಾವ ಹುಡುಗ?"

"ಭಾಸ್ಕರ."

"ಏನಾಯಿತು?"

"ವಿಲಾಯತಿಗೆ ಹೋದನಂತೆ."

"ಓಹೋ! ತಮಗೆ ಅರ್ಧ ರಾಜ್ಯದ ಸುದ್ದಿ ಇಲ್ಲ. ನಾನು ಮೊನ್ನೆಯೇ ಕೇಳಿದ್ದೇನೆ. ಅಲ್ಪಾಯುಷಿ ಎಂದು ನಾನು ಮೊದಲೇ ಹೇಳಲಿಲ್ಲವೇ?"

"ಹಾಗಾದರೆ ಈ ಬಿನ್ನಹ ಪತ್ರದ ರಗಳೆ ಇನ್ನೇಕೆ?"

"ಇನ್ನು ಅದು ಅವಶ್ಯವೆಂದು ನನಗೂ ಕಾಣುವುದಿಲ್ಲ. ಏಕೆಂದರೆ ಬೇರೆ ವಿಷಯಗಳು ಹೇಗಿದ್ದರೂ, ನಮ್ಮ ಗುಮಾಸ್ತನು ಮಾತನಾಡಿದ ಕೆಲವು ಸಂಗತಿಗಳು ನನ್ನ ಕಿವಿಯ ಮೇಲಿನಿಂದ ಹೋದವು. ಅವನು ಸೂಚಿಸಿದ ಪ್ರಕಾರ ಒಂದು ಬಿನ್ನಹ ಪತ್ರ ಬರೆದು ಕಳುಹಿಸಿದರೆ ಸಾಕು. ಮೊದಲೇ ನಮ್ಮ ಮೇಲೆ ಒಂದು ಸುಳ್ಳು ಅಪವಾದವಿದೆ. ಹುಡುಗ ಇನ್ನು ಬಂದಾಗ ನೋಡಿಕೊಳ್ಳಬಹುದಷ್ಟೆ?"

“ಸರಿ, ಸರಿ, ದೇವರಾಯರೇ, ಹಾಗೆಯೇ ಒಂದು ಬಿನ್ನಹಪತ್ರವನ್ನು ಬರೆದುಬಿಡಿರಿ.”

“ಆಗಬಹುದು.”

“ಬಿನ್ನಹಪತ್ರ ಬರೆಯುವಾಗ ಜೋಕೆ ನೋಡಿಕೊಳ್ಳಿ. ಶ್ರೀ ಪಾದಂಗಳವರ ಗುಣ ನಾಮಗಳನ್ನೆಲ್ಲ ಪೂರ್ಣವಾಗಿಯೂ ಸ್ಪಷ್ಟವಾಗಿಯೂ ಬರೆಯಬೇಕು.”

“ಗುಣನಾಮಗಳೆಂದರೆ, ಮೊದಲು ಕುಂಭಾಂಡರಾಯರ ಕಾಲದಲ್ಲಿ ಬಿನ್ನಹ ಪತ್ರಗಳು–”

“ಗುಣನಾಮಗಳೆಂದರೆ:–ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಶ್ರೀಮದಾಚಾರ್ಯಾಣಾಮ್ ಕರಕಮಲಸಂಜಾತ ಚತುರ್ವೇದ ವೇದ್ಯ ಯಮ ನಿಯಮಾದ್ಯಷ್ಟಾಂಗ ಯೋಗ–”

“ಸರಿ, ಸರಿ, ಸಾಕು ಗೊತ್ತಾಯಿತು. ಇತ್ತಲಾಗಿ ಬರುವ ನಿರೂಪಗಳಲ್ಲಿ ತೋರುವ ಹಾಗಲ್ಲವೇ?”

“ಹಾಗೆ ತಾನೇ.”

ಗುಮಾಸ್ತನು ಹೋಗಿ ಕ್ರಮಕ್ಕನುಸಾರವಾಗಿ ಬಿನ್ನಹ ಪತ್ರವನ್ನು ಬರೆದು ಭೀಮರಾಯನ ಸಹಿ ಮಾಡಿಸಿ ಕಳುಹಿಸಿದನು.

## ೨೯

ಇತ್ತಲಾಗಿ ವಿಠಲರಾಯನು ಯೌವನವೂ ಪ್ರಾಯವೂ ತುಂಬಿದವನಾಗಿ ಆಗಾಗ್ಗೆ ತಂದೆಯ ಸಂಗಡ ವ್ಯಾಪಾರದ ಭಂಡಸಾಲೆಗೆ ಹೋಗುತ್ತಿದ್ದು, ವ್ಯಾಪಾರ ನಡೆಯಿಸುವುದಕ್ಕೆ ಬೇಕಾದ ಯುಕ್ತಿಗಳನ್ನು ಕಲಿಯುತ್ತಾ, ಆಗಾಗ್ಗೆ ಭೀಮರಾಯನಲ್ಲಿಗೆ ಬರುತ್ತಾ ಹೋಗುತ್ತಾ ಇರುವಾಗ ಪೊಕ್ಕು ಸೆಟ್ಟಿಯ ಬಳಕೆಯಾಯಿತು. ತ್ರಿಯಂಬಕರಾಯನಿಗೆ ವೃದ್ಧಾಪ್ಯ ಪ್ರಾರಂಭಿಸಿತು. ವ್ಯಾಪಾರದ ಆಡಳಿತೆಗಳನ್ನೆಲ್ಲ ಮಗನಿಗೆ ಒಪ್ಪಿಸಿಕೊಟ್ಟು, ತಾನು ಹೆಚ್ಚಾಗಿ ಮನೆಯಲ್ಲೇ ಇರುವ ಹಾಗಾದನು. ದೀಪಾವಳೀ ಹಬ್ಬ ಬಂತು. ಆಗ ಮೂರು ದಿವಸಗಳ ಪರ್ಯಂತರ ಪ್ರತಿ ರಾತ್ರಿಯೂ ಊರಿನಲ್ಲಿದ್ದ ನರ್ತನಸ್ತ್ರೀಯರ ಮೇಳದವರೆಲ್ಲರೂ ಸಾವಕಾರ ಜನರ ಭಂಡಸಾಲೆಗಳಿಗೆ ಬಂದು ಗಾಯನ, ನರ್ತನ ಮುಂತಾದ ವಿನೋದಗಳನ್ನು ಮಾಡುವ ಕ್ರಮದಂತೆ ವಿಠಲರಾಯನಲ್ಲೂ ಬಹಳ ವಿನೋದಗಳು ನಡೆದವು. ಆ ಸ್ತ್ರೀಯರಲ್ಲಿ ಗುಲಾಬಿ ಎಂಬವಳು ಗಾಯನ ನರ್ತನ, ಅಂದಚಂದ, ಹಾವಭಾವ, ರೂಪಲಾವಣ್ಯಗಳಲ್ಲಿ ಅತಿ ಯೋಗ್ಯಳೆಂದು ಕಂಡುಕೊಂಡು, ವಿಠಲರಾಯನು ಮೋಹಿತನಾಗಿ ತನ್ನ ಉಪಪತ್ನಿಯಾಗಿ ನಿಲ್ಲಿಸಿಕೊಳ್ಳಲಾಲೋಚಿಸಿದನು. ಆದರೆ ಈ ವಿದ್ಯಮಾನ ತಂದೆಗೆ ಗೊತ್ತಾದರೆ ಏನಾದೀತೋ ಎಂದು ಭಯಪಟ್ಟು, ಹಗಲಿರುಳಲ್ಲಿಯೂ ಅವಳನ್ನೇ ನೆನಸುತ್ತಾ, ತನ್ನ ಮನಸಾಭೀಷ್ಟ ಸಿದ್ಧಿಯಾಗದೆ ತಲ್ಲಣಿಸಿ ವ್ಯಾಕುಲಪಟ್ಟು, ದಿನ ಹೋಗುತ್ತಾ ಹೋಗುತ್ತಾ ಮೈಯಲ್ಲಿ ಬಚ್ಚುತ್ತಾ ಬಂದನು. ಈ ರೀತಿಯಲ್ಲಿ ಸ್ವಲ್ಪ ದಿವಸ ಕಳೆಯುವಾಗ ತ್ರಿಯಂಬಕರಾಯನು ಮಗನ

ದೇಹಸ್ಥಿತಿಯನ್ನು ಕಂಡು, ಬೆದರಿ, ಅದರ ಕಾರಣವೇನೆಂದು ತಿಳಿಯದೆ ತುಂಬಾ ಯೋಚನೆಪಟ್ಟು ಬೀಗನಾದ ಭೀಮರಾಯನನ್ನು ಕರೆಯಿಸಿ, ಅವನ ಹತ್ತಿರ ಆಲೋಚಿಸಿದ್ದಲ್ಲಿ ಏನೊಂದೂ ಗೊತ್ತುಹರಿಯದೆ, ಒಂದಾನೊಂದು ದಿವಸ ಅವರಿಬ್ಬರೂ ಕೂಡಿ ಹುಡುಗನ ವಿಷಯವನ್ನು ಮಾತನಾಡುತ್ತಿರುವಾಗ ಪೊಕ್ಕು ಸೆಟ್ಟಿಯು ಮಧ್ಯ ಪ್ರವೇಶಿಸಿ, "ಸ್ವಾಮಿ, ಇಂತಹ ಎಷ್ಟೋ ಸಂಗತಿಗಳನ್ನು ನಾನು ಈ ಮೊದಲು ಕಂಡಿದ್ದೇನೆ. ಅವುಗಳ ಪರಿಹಾರವನ್ನು ನಾನು ಚೆನ್ನಾಗಿ ಬಲ್ಲೆ. ತಾವುಗಳು ಯೋಚನೆಪಡಬೇಡಿರಿ. ವಿಠಲರಾಯರ ಹತ್ತಿರ ಮಾತನಾಡಿ ಎಲ್ಲಾ ಸಂಗತಿಗಳನ್ನು ತಿಳಿದುಕೊಂಡು ಉಪಾಯವೆಲ್ಲವನ್ನು ಒಂದು ಗಂಟೆಯೊಳಗೆ ತಿಳಿಸುತ್ತೇನೆ" ಎಂದು ಹೇಳಲಾಗಿ, ಅವರು ಹಾಗಾಗಲೆಂದು ಹೇಳಿ ಭೀಮರಾಯನು ಮನೆಗೆ ಹೋದನು. ಅದೇ ದಿವಸ ರಾತ್ರಿ ಪೊಕ್ಕು ಸೆಟ್ಟಿಯು ವಿಠಲರಾಯನ ಬಳಿಗೆ ಹೋಗಿ, ಅವನ ಮನಸ್ಸಿಗೆ ಬೇಕಾದ ಹಾಗೆ ಉಪಾಯಗಳಿಂದ ಮಾತನಾಡಿ, ಕಡೆಗೆ–

"ರಾಯರೇ, ತಮ್ಮ ಗುಟ್ಟೆಲ್ಲ ನನಗೆ ಗೊತ್ತಾಗಿದೆ. ತಮ್ಮ ಮುಖ, ದೇಹಸ್ಥಿತಿ ನೋಡುವಾಗಲೇ ಸ್ಪಷ್ಟವಾಯಿತು. ಇಷ್ಟು ಸಣ್ಣ ಮಾತಿಗೇತರ ಯೋಚನೆ? ಅವಳ್ಯಾರೆಂದು ತುಸಾ ಹೇಳಿಬಿಡಿರಿ, ಕ್ಷಣಮಾತ್ರದಲ್ಲಿ ತಮ್ಮ ದಾಸಿಯಾಗಮಾಡುವ ವಿದ್ಯ ನನ್ನಲ್ಲಿಲ್ಲವೆ?– ಹೇಳಿರಿ."

"ನಿನ್ನ ಮಾತೆಲ್ಲ ಕಟ್ಟಿಡಬಾರದೇ? ತಂದೆಯವರಿಗೆ ಗೊತ್ತಾದರೆ ರಗಳೆಗೆ ಕಾರಣವಾಗುವುದು."

"ರಾಯರೇ, ಇಂತಹ ಸಾವಿರಾರು ವಿಷಯಗಳೆಲ್ಲ ನನ್ನ ಕಂಕುಳಲ್ಲಿವೆ. ಅವಳ ಹೆಸರು ಮಾತ್ರ ಹೇಳಿಬಿಡಿರಿ. ಈ ಹೊತ್ತೇ ರಾತ್ರಿ ಆಕೆಯು ತಮ್ಮ ಉಪಪತ್ನಿಯಾಗುವ ಸರಿಯನ್ನು ನೋಡಬಾರದೇ? ಹಾಗಾಗದಿದ್ದರೆ, ನಾಳೆ ಬೆಳಿಗ್ಗೆ ತಮ್ಮ ಪಾಪಾಸು ತೆಗೆದುಕೊಂಡು ನನ್ನ ದವಡೆಯ ಹಲ್ಲುಗಳೆಲ್ಲವನ್ನು ಉದುರಿಸಿಬಿಡಿರಿ. ಹೇಗೆ?"

"ದವಡೆಯ ಹಲ್ಲುದುರಿಸುವುದೇನು? ಕಾರ್ಯ ಕೈಗೂಡಿದರೆ, ನಿನಗೆ ರೂಪಾಯಿ ನೂರು ಒಂದೇ ಗಂಟಿಗೆ ಕೊಟ್ಟೆನೆಂದು ತಿಳಿದುಕೊ."

"ದಿಟವಷ್ಟೆ?"

"ದಿಟವೇ." (ಕಿವಿಯಲ್ಲೇ ಗುಟ್ಟನ್ನು ಹೇಳಿದನು.)

"ಹೂಂ, ಗೊತ್ತಾಯಿತು, ಕೆಲಸವಾದಮೇಲೆ ಮತ್ತೆ–"

"ಛೀ! ಎಂತಹ ಮಾತು? ಈಗಲೇ ಬೇಕೇನು? ಇಕೋ, ನನ್ನ ವಜ್ರದುಂಗುರ, ಅಡವು."

"ದಮ್ಮಯ್ಯ! ದಮ್ಮಯ್ಯ! ಬೇಡ. ದೃಢವಾಗಿ ನಂಬಿಕೊಳ್ಳಿರಿ. ಇಲ್ಲೇ ಇರ್‍ರಿ; ಒಂದೇ ಗಳಿಗೆಯಲ್ಲಿ ತಿರಿಗಿ ಬರುತ್ತೇನೆ. ಪಂಥೀರು ಮಿಠಾಯಿ ಹೇಗೂ ಇದೆಯಷ್ಟೆ?"

"ಛೀ! ಅದೇನು ದೊಡ್ಡ ಮಾತು! ಬುಟ್ಟಿ ತುಂಬಾ ಲಡ್ಡುಗಳನ್ನು ನಿನ್ನ ತಲೆಯ ಮೇಲೆ ಸುರಿಸುವೆನು."

"ಅದೆಲ್ಲ ಹೌದು, ಹೊಂತಗಾರರನೇಕರು ಹೀಗೆಯೇ ಮೊದಲು ಹೇಳಿದ್ದರು."

"ಇಗೋ ಈಗಲೇ ರೂಪಾಯಿ" ಎಂದು ಹೇಳಿ ಕೈಯಲ್ಲಿ ಕೊಟ್ಟನು. ಅವುಗಳನ್ನು ತೆಗೆದುಕೊಂಡು ಸೊಂಟದಲ್ಲಿ ಸಿಕ್ಕಿಸಿ ಪೊಕ್ಕು ಸೆಟ್ಟಿಯು ತ್ರಿಯಂಬಕರಾಯನ ಬಳಿಗೆ ಹೋಗಿ,

"ಸ್ವಾಮಿ, ನಾನು ಮೊದಲೇ ಹೇಳಲಿಲ್ಲವೇ? ಅಸ್ವಸ್ಥದ ಕಾರಣವು ಒಂದು ನಿಮಿಷದಲ್ಲಿ ಗೊತ್ತಾಯಿತು."

"ಏನಪ್ಪಾ, ಏನು? ಹುಡುಗ ಹೇಗೆ ಬಚ್ಚಿದ್ದಾನೆ!"

"ಬಚ್ಚಿದ್ದಾನೆ! ಚೋದ್ಯವೇ! ಮಗನ ವಿಷಯದಲ್ಲಿ ಇಷ್ಟಲಕ್ಷವೇ? ನಾನು ಈ ಹೊತ್ತು ನೋಡದಿದ್ದರೆ–"

"ಏನಪ್ಪಾ? ಏನಾಗಿದೆ?"

ಪೊಕ್ಕುಸೆಟ್ಟಿಯು ಕಿವಿಯಲ್ಲೇ ಅಸ್ವಸ್ಥದ ಕಾರಣವನ್ನು ತಿಳುಹಿಸಿದನು.

"ಅದಕ್ಕೇನಪ್ಪಾ ಪರಿಹಾರ ಹೇಳು! ಕ್ಷಣಮಾತ್ರದಲ್ಲಿ ಮಾಡಬಹುದಷ್ಟೆ, ಏನು ಖರ್ಚಾದರೂ ಚಿಂತಿಲ್ಲ!"

"ತಾವೀಗ ಸುಮ್ಮನೆ ರಾಮಕುಟ್ಟಿ ಪಂಡಿತ, ತಕ್ಕಡಿ ವೆಂಕಟರಾಯನೆಂದು ಹೀಗೆಲ್ಲ ರಗಳೆ ಹಚ್ಚಿಕೊಳ್ಳಬೇಡಿರಿ. ಸ್ವಲ್ಪ ಹಣ ವೆಚ್ಚವಾದರೂ ಚಿಂತೆ ಇಲ್ಲ. ಬಹು ಸುಲಭದ ಒಂದುಪಾಯ ಹೇಳಿಬಿಡುತ್ತೇನೆ, ನಾಳಿಗೆ ಅಸ್ವಸ್ಥವೆಲ್ಲಿ?"

"ಹೇಳಪ್ಪಾ, ವೆಚ್ಚದ ಮಾತಂತಿರಲಿ, ಹುಡುಗನ ದೇಹಾರೋಗ್ಯಕ್ಕಿಂತ ದೊಡ್ಡ ಮಾತು ಯಾವುದು? ಇಗೋ, ನಿನಗೆ ಮುಂಗಡವಾಗಿ ಐವತ್ತು ರೂಪಾಯಿ!" ಎಂದು ಹೇಳಿ ಚೀಲ ಸುರಿದು ಕೊಡಲು, ಅದನ್ನು ಬಗಲಿಗೆ ಹಾಕಿಕೊಂಡು,

"ಸ್ವಾಮಿ, ತಾವು ಲೇಶಮಾತ್ರ ಯೋಚಿಸಬೇಡಿರಿ. ಈ ರೋಗಕ್ಕೆ ಮದ್ದೇನು ಬಲ್ಲಿರಾ? ಈಗೇಕೆ ಹೇಳುವುದು? ನಾಳೆಯೇ ತಿಳಿಯುವುದು. ನಾನು ಮಾಡುವ ಕೆಲಸಕ್ಕೆ ತಮ್ಮ ಪೂರ್ಣವಾದ ಸಮ್ಮತವಿದೆಯಷ್ಟೆ?"

"ನನ್ನ ಪೂರ್ಣ ಸಮ್ಮತವೇ. ಬೇಕಾದ್ದನ್ನು ಮಾಡು. ಹುಡುಗ ಬಚಾವಾಗಬೇಕಾದ್ದೇ ಮುಖ್ಯ ವಿಷಯ."

"ಹಾಗಾಗಲಿ" ಎಂದು ಕೂಡಲೇ ಗುಲಾಬಿ ಇದ್ದಲ್ಲಿಗೆ ಹೋಗಿ, ಅವಳನ್ನು ಕಂಡು–

"ಏನೇ? ನಿನ್ನ ದವ್‌ಲತ್ತು ಬಡಾಯಿಸುತ್ತೆಂದು ಕಾಣುತ್ತೆ. ಏನು ಸುದ್ದಿ?"

"ನೀನೇನೋ ಒಂದು ಠಕ್ಕು ತೆಗೆದುಕೊಂಡು ಬಂದಿದ್ದೀಯಾ? ನನಗೇತರ ಸುದ್ದಿಯೂ ಇಲ್ಲ."

"ನಿನ್ನನ್ನು ಒಬ್ಬ ದೊಡ್ಡ ಯೌವನಸ್ಥನು ತಿಂಗಳಿಗೆ ಐವತ್ತು ರೂಪಾಯಿ ಮುಂಗಡ ಸಂಬಳ, ವರ್ಷಕ್ಕೆ ಐನೂರು ರೂಪಾಯಿಯ ಆಭರಣ, ಇನ್ನೂರೈವತ್ತು ರೂಪಾಯಿಯ ಸೀರೆ ಕಂಚುಕಗಳನ್ನು ಸಹಾ ಕೊಡುವ ನಿರ್ಣಯದ ಮೇಲೆ ಈ ಹೊತ್ತಿನಿಂದಲೇ ಉಪಪತ್ನಿಯಾಗಿಟ್ಟುಕೊಂಡರೆ ನನಗೇನು ಕೊಡುತ್ತೀ?"

"ಈ ಹೊತ್ತು ಸಿಕ್ಕುವ ಐವತ್ತು ರೂಪಾಯಿ ತತ್‍ಕ್ಷಣವೇ ನಿನಗೆ ಕೊಡುವುದಲ್ಲದೆ ಅದರ ಪರೋಕ್ಷದಲ್ಲಿ ನಿನ್ನ ದಲಾಲಿಯ ಮೇಲೆ ನಾನು ಸಂಪಾದಿಸುವ ಹಣದಲ್ಲಿ ಸೇಕಡಾ ಹತ್ತರಂತೆ ನಿನಗೆ ಕೊಡುತ್ತಾ ಬರುವೆನು."

"ಓಹೋ! ಹೋ! ಹೋ! ಮೊದಲು ಹೀಗೆಯೇ ಅನೇಕರು ಹೇಳಿ, ಆ ಮೇಲೆ–"

"ಆ ಮೇಲೇನು?"

"ಆ ಮೇಲೆ, 'ನಿನಗೂ ಫೆಂಪೆ, ನಿನ್ನಜ್ಜಗೂ ಫೆಂಪೆ' ಎಂದಿದ್ದಾರೆ; ತಿರುಪತಿ ವೆಂಕಟರಮಣ ದೇವರಾಣೆ ಕೊಡು."

"ತಿರುಪತಿ ವೆಂಕಟರಮಣ ದೇವರಾಣೆ; ನಾನು ಈಗ ಕೊಟ್ಟ ಮಾತು ನಡೆಯಿಸುತ್ತೇನೆ."

"ಹಾಗಾದರೆ ಈಗಲೇ ಹೊರಡು" ಎಂದು ಹೇಳಲು, ಆಕೆಯು ಬೇಕಾದ ಹಾಗೆ ಶೃಂಗಾರ ಮಾಡಿಕೊಂಡು ಅವನ ಸಂಗಡ ಬರಲು, ಅವಳನ್ನು ಮಾಳಿಗೆಗೆ ಕರೆದುಕೊಂಡು ಹೋಗಿ, ವಿಠಲರಾಯನಿದ್ದಲ್ಲಿ ಬಿಟ್ಟು, "ಎಲ್ಲಿ ಸ್ವಾಮಿ, ಹೇಳಿದ್ದು?" ಎಂದು ಕೇಳಲಾಗಿ, ವಿಠಲರಾಯನು ಮೊದಲೇ ಸಿದ್ಧಮಾಡಿಟ್ಟ ನೂರು ರೂಪಾಯಿಯ ಗಂಟನ್ನು ತೆಗೆದುಕೊಟ್ಟನು. ಅದನ್ನು ತೆಗೆದುಕೊಂಡು ಗುಲಾಬಿಯ ಮನೆಯಲ್ಲಿ ಮಾತನಾಡಿದ ನಿಶ್ಚಯಗಳನ್ನೆಲ್ಲ ಮಾಡಿಸಿ, ಅವಳಿಗೆ ಐವತ್ತು ರೂಪಾಯಿ ಮುಂಗಡ ಕೊಡಿಸಿ, ಅದನ್ನವಳಿಂದ ಪಡೆದುಕೊಂಡು ವಿಠಲರಾಯನನ್ನು ಕುರಿತು, "ಹೇಗೆ ರಾಯರೇ, ನನ್ನ ಮಾತು?" ಎಂದು ಕೇಳಲು, ಅವನು "ನೀನು ವೀರಾಧಿವೀರನೇ ಸರಿ" ಎಂದು ಹೊಗಳಿದನು. ಆ ಮೇಲೆ ಪೊಕ್ಕು ಸೆಟ್ಟಿಯು ಸಿಕ್ಕಿದ ರೂಪಾಯಿಗಳನ್ನು ತೆಗೆದುಕೊಂಡು ಮನೆಗೆ ಹೋಗುತ್ತಾ ತ್ರಿಯಂಬಕರಾಯನಿಗೆ ವಿದ್ಯಮಾನಗಳನ್ನು ತಿಳುಹಿಸಿ: "ಎರಡೇ ದಿವಸಗಳಲ್ಲಿ ಅಸ್ವಸ್ಥವು ಪರಿಣಮಿಸದಿದ್ದರೆ ನಾನಿನ್ನು ತಮ್ಮ ಮನೆಯ ಮೆಟ್ಟು ಹತ್ತುವ ಋಣ ತೀರಿತು" ಎಂದು ಹೇಳಿ ಹೋದನು.

## ೨೦

ಚಿಂತೆಯಿಂದ ಬಚ್ಚಿಹೋದ ವಿಠಲರಾಯನು ಕೆಲವು ದಿವಸದಲ್ಲಿ ಯಥಾಪೂರ್ವ ಮೈತುಂಬಿದವನಾಗಿ, ವ್ಯಾಪಾರದ ವಿಷಯಕ್ಕೆ ಮನಸ್ಸು ಕೊಡದೆ ಸಮಯವನ್ನೆಲ್ಲ ಗುಲಾಬಿಯೊಡನೆ ವಿನೋದಕ್ರೀಡೆಯಲ್ಲಿ ಕಳೆದು ಕಾಲಕ್ಷೇಪ ಮಾಡುತ್ತಾ ಇದ್ದರೂ, ಜೀವನಕ್ಕೆ ಬೇಕಾದ್ದಕ್ಕಿಂತ ಹೆಚ್ಚು ಐಶ್ವರ್ಯವಿದ್ದುದರಿಂದ ಅವನ ತಂದೆಯಾಗಲಿ, ಹೆಣ್ಣುಕೊಟ್ಟ ಮಾವ ಭೀಮರಾಯನಾಗಲಿ ಅವನ ನಡತೆಯನ್ನು ಕುರಿತು ಆಕ್ಷೇಪಿಸದೆ, ಹುಡುಗನು ಹೇಗೂ ಸುಕ್ಷೇಮಿಯಾಗಿರಬೇಕಾದ್ದೇ ಮುಖ್ಯವೆಂದು ಗ್ರಹಿಸಿ, ಅವನನ್ನು ಮನಸ್ವಿಯಾಗಿ ನಡೆದುಕೊಳ್ಳುವುದಕ್ಕೆ ಬಿಟ್ಟರು. ಈ ಸ್ಥಿತಿಯಲ್ಲಿ ಕೆಲವು ತಿಂಗಳು ಕಳೆದ ನಂತರ ವಿಠಲರಾಯನು ಗೋಕುಳಿಯೆಂಬ ಇನ್ನೊಬ್ಬಾಕೆಯನ್ನು ಇಟ್ಟುಕೊಂಡು, ಬೇಕಾದ ದ್ರವ್ಯವನ್ನು ಅವಳಿಗೂ, ಅವಳ ಮೇಲೆ ಮತ್ಸರಪಡದಂತೆ ಇಮ್ಮಡಿಯಾಗಿ ಗುಲಾಬಿಗೂ ಕೊಡುತ್ತಾ, ಜೋಡು ಕುದುರೆಯ ಸಾರೋಟು, ಪೈಗುಟಾಕಣಗಳು,

ಬಾಯ್ಸಿಕಲ್ ಎಂಬ ಗಾಡಿಗಳು ಇವೇ ಮುಂತಾದ ವಾಹನಗಳ ಮೇಲೆ ಸವಾರಿ ಮಾಡುತ್ತಾ, ಭರ್ಜರಿಯ ಶಾಲುಗಳೂ, ಬನಾತ್, ಮಖಮಲ್, ಪೂನಾ, ನಾಗಪುರ ಮುಂತಾದ ದೇಶಗಳ ಧೋತ್ರಗಳೂ, ಹೀಗೆಲ್ಲ ಬಗೆ ಬಗೆಯ ವಸ್ತ್ರಾಲಂಕಾರಗಳನ್ನು ಧರಿಸಿಕೊಳ್ಳುತ್ತಾ ಸೊಂಟಕ್ಕೆ ಜೋಡುನೇವಳ, ಕೈಬೆರಳುಗಳಿಗೆ ನವರತ್ನದುಂಗುರಗಳು, ಕಿವಿಗಳಲ್ಲಿ ವಲ್ಲಂದಿ ವಜ್ರದ ವಂಟಿಯ ಜೋಡಿಗಳು, ಇವೆ ಮುಂತಾದ ಅಮೂಲ್ಯವಾದ ಆಭರಣಗಳನ್ನು ಧರಿಸುತ್ತಾ, ದಶಾವತಾರದ ಆಟಗಳು, ಗಾಯನ ನಾಟ್ಯಗಳು, ಡೊಂಬರ ಆಟಗಳು, ಜಟ್ಟಿಕಾಳಗಗಳು ಇವೇ ಮುಂತಾದ ತಮಾಷೆಗಳನ್ನು ಮಾಡಿಸುತ್ತಾ, ನಗರದಲ್ಲಿ ಸೆಕೆದಿವಸಗಳಲ್ಲಿ ಉಂಟಾಗುವ ಸಂಕಟವನ್ನು ಸೈರಿಸಕೂಡದೆ ನಗರದ ಹೊರಗೆ ನದಿಯ ತೀರದಲ್ಲಿ ತಾನಿರುವುದಕ್ಕೆ ಒಂದು ಬಂಗಲಾ, ಗುಲಾಬಿ–ಗೋಕುಳಿ ಇವರಿಗೆ ಬೇರೆ ಬೇರೆ ಬಂಗಲಾಗಳನ್ನು ಸಹ ಕಟ್ಟಿಸಿ ಅವುಗಳಿಗೆ ಬೇಕಾದ ಸಕಲ ಸಾಹಿತ್ಯ ಸೇವಕರನ್ನು ಒದಗಿಸಿ, ಸೆಕೆಗಾಲದಲ್ಲಿ ನಾಲ್ಕು ತಿಂಗಳು ಪರ್ಯಂತರ ಆ ಬಂಗಲಾಗಳಲ್ಲಿ ವಾಸಮಾಡುತ್ತಾ, ಹೀಗೆಲ್ಲ ಅನೇಕ ವೈಭವಗಳನ್ನನುಭವಿಸುತ್ತಾ ಇರುವಾಗ ಇಂದಿರೆಯು ಪುಷ್ಪವತಿಯಾದಳು. ಅಂಬಾಬಾಯಿಯು ಅನೇಕ ಸ್ತ್ರೀಯರ ಸಮೇತ ಜಯಭೇರಿ ನಗಾರಿ ಮುಂತಾದ ವಾದ್ಯಘೋಷಗಳಿಂದ ಬಹು ಸಂಭ್ರಮದೊಡನೆ ತ್ರಿಯಂಬಕರಾಯನಲ್ಲಿಗೆ ಒಸಗೆಯನ್ನು ತಂದು ಮುಟ್ಟಿಸಿದಳು. ನಾಲ್ಕು ದಿವಸ ಪರ್ಯಂತರ ನೆಂಟರಿಷ್ಟರಲ್ಲಿಂದ ಸ್ತ್ರೀಯರು ಇಂದಿರೆಯನ್ನು ಬಗೆ ಬಗೆಯ ಭಕ್ಷ್ಯಗಳಿಂದಲೂ ಪುಷ್ಪ ಪರಿಮಳ ದ್ರವ್ಯಗಳಿಂದಲೂ ಉಪಚರಿಸಿದರು. ಐದನೆಯ ದಿವಸವೇ ಶೋಭನಪ್ರಸ್ತವನ್ನು ಬೆಳೆಯಿಸಬೇಕೆಂದು ಭೀಮರಾಯನು ಆಲೋಚಿಸಿರುವುದನ್ನು ವಿಠಲರಾಯನು ಕೇಳಿ, ಅಪರಿಮಿತ ಸಂತೋಷಪಟ್ಟು, ಈ ವರ್ತಮಾನವನ್ನು ಗೋಕುಳಿ, ಗುಲಾಬಿ ಇವರನು ತಾನಿದ್ದಲ್ಲಿಗೆ ಕರೆಯಿಸಿ ಅತ್ಯುಲ್ಲಾಸದಿಂದ ತಿಳಿಸಲು, ಅವರಿಬ್ಬರೂ ಮಹಾ ಸಂತಾಪಪಟ್ಟು, ಒಬ್ಬಳು "ನಾನು ನಿಮಗಿನ್ನೇಕೆ? ನಾನು ಈ ಹೊತ್ತೇ ರಾತ್ರಿ ಈ ಬಂಗಲಾದಲ್ಲಿ ಪಾಷಾಣವನ್ನು ತಿಂದು ಆತ್ಮಹತ್ಯ ಮಾಡಿಕೊಳ್ಳುತ್ತೇನೆ. ನೀವೇ ಗತಿಯೆಂದು ಈ ವರೆಗೆ ನಂಬಿ ಅನ್ಯ ಗೃಹಸ್ಥರ ಮುಖವನ್ನು ಸ್ವಪ್ನೇಪಿನೋಡದೆ, ಅನೇಕ ಗೃಹಸ್ಥರ ಕೋಪಕ್ಕೆ ಗುರಿಯಾದೆನು. ಇನ್ನು ಈ ಜೀವವನ್ನಿಟ್ಟುಕೊಂಡಿರುವುದು ಏತರ ಸಂಭ್ರಮಕ್ಕೆ?" ಎಂದು 'ಕುಯ್ಯೋ' ಎಂದು ಕೂಗಿ ತಲೆಯಲ್ಲಿದ್ದ ಹೂವನ್ನು ಕಿತ್ತು ನೆಲಕ್ಕೆ ಬಿಸಾಡಿ, ಬಿಕ್ಕಿ ಬಿಕ್ಕಿ ಅಳುತ್ತಾ, ಬೇಗನೇ ಮಾಲುತ್ತಾ ಮಾಲುತ್ತಾ ಹೋಗಿ ಮಂಚದ ಮೇಲೆ ಹಾಸಿಗೆಯಲ್ಲಿ ಧಡ್ಡೆಂದು ಬಿದ್ದಳು. 'ಅಯ್ಯೋ! ಇದೇನಪ್ಪಾ!' ಎಂದು ವಿಠಲರಾಯನು ಅವಳನ್ನು ಸಂತೈಸುವುದಕ್ಕೆಂದು ಹೋಗುವಷ್ಟರಲ್ಲಿ, ಇನ್ನೊಬ್ಬಾಕೆಯು ನಿಂತಲ್ಲೇ ಕಣ್ಣು ತಿರಿಗಿಸಿದ ಹಾಗೆಮಾಡಿ ನೆಲಕ್ಕೆ ಬಿದ್ದಳು. ವಿಠಲರಾಯನು, 'ಅಯ್ಯೋ! ಇದು ದೊಡ್ಡ ಪೀಕಲಾಟವಾಯಿತಷ್ಟೇ' ಎಂದು ಮರುಗುತ್ತಾ ಬೇಗನೇ ಹೋಗಿ ಸ್ವಲ್ಪ ತಣ್ಣೀರನ್ನು ತಂದು ಅವಳ ಕಣ್ಣುಗಳಿಗೂ ಎದೆಗುಂಡಿಗೆಗೂ ಮುಟ್ಟಿಸಿ ಮುಖದ ಮೇಲೂ ಸ್ವಲ್ಪ ಚಿಮಿಕಿಸಿದ ನಂತರ ಅವಳು ಒಂದೆರಡು ನಿಮಿಷದಲ್ಲಿ ಎಚ್ಚತ್ತು, "ಸ್ವಾಮೀ, ಗರತಿಯರಲ್ಲಿ ಕೆಲವರು

ಪತಿವ್ರತೆಗಳೆಂದೆನ್ನಿಸಿಕೊಳ್ಳುತ್ತಾರೆ, ಆದರೆ ಅದೆಲ್ಲ ಸುಮ್ಮಗೆ; ಯಥಾರ್ಥದಲ್ಲಿ ನನ್ನಂತಹ ಪತಿವ್ರತೆಯೆಲ್ಲಿದ್ದಾಳೆ? ಈ ವರೆಗೆ ನನ್ನ ನಡತೆಯಲ್ಲಿ ತಿಲಮಾತ್ರ ಆಕ್ಷೇಪವೇನಾದರೂ ತಾವು ಕಂಡಿದ್ದೀರಾ? ಅಥವಾ ಕೇಳಾಕೇಳಿಯಿಂದಾದರೂ ತಮ್ಮ ತಿಳುವಳಿಕೆಗೆ ಬಂದಿದೆಯೇ? ಪೊಕ್ಕು ಸೆಟ್ಟಿಯನ್ನು ಈಗಲೇ ಕರೆಯಿಸಿ ನನ್ನ ನಡತೆಯನ್ನು ಕುರಿತು ಅವನ ಸಾಕ್ಷ್ಯವನ್ನು ತೆಗೆದುಕೊಂಡರೆ, ತಮಗೆ ಇನ್ನಷ್ಟು ಸಮಾಧಾನವಾಗುವುದು. ತಾವು ಬಿಟ್ಟ ಮೇಲೆ ನಾನೇಕೆ ಜೀವಿಸಿರಲಿ? ನಾನು ಈ ಹೊತ್ತೇ ರಾತ್ರಿ ಯಾವ ವಿಧದಿಂದಾದರೂ ಸಾಯದೆ ಇರಲಾರೆ. ಆಮೇಲೆ ತಾವು ಹೆಂಡತಿಯನ್ನು ಸಂಗಡ ತೆಗೆದುಕೊಂಡು ಸುಖ ಸಂತೋಷದಿಂದ ಬಾಳಿ ಇರ್ರಿ. ಸಾಕು, ತಮ್ಮನ್ನು ನಂಬಿದ್ದಕ್ಕೆ ಸಾರ್ಥಕವಾಯಿತು" ಎಂದು ಪುನಃ ಕಣ್ಣು ತಿರಿಗಿಸಿ ಬೋಧಕ್ಷಯದ ಚಿನ್ಹೆಗಳನ್ನು ತೋರಿಸುತ್ತಿರುವಾಗ ವಿಠಲರಾಯನು ಮನಸ್ಸಿನಲ್ಲೇ 'ಅಯ್ಯೋ! 'ಎರಡು ಹೆಂಡರ ಕಾಟ' ಎಂಬ ಗಾದೆಯಂತೇ ನನಗೆ ಸಂಭವಿಸಿತಷ್ಟೆ' ಎಂದು ತಿಳಿದುಕೊಂಡು, ಮರುಗುತ್ತಾ ಪುನಃ ಅವಳಿಗೆ ಶುಶ್ರೂಷೆಮಾಡಿದನು. ಆ ಮೇಲೆ ಅವಳನ್ನು ಆ ಮತ್ತೊಬ್ಬಳು ಇದ್ದ ಮಂಚಕ್ಕೆ ಕರೆದುಕೊಂಡುಹೋಗಿ, ಇಬ್ಬರನ್ನೂ ಕುಳ್ಳಿರಿಸಿ, ನಾನಾ ಪ್ರಕಾರಗಳಲ್ಲಿ ಸಂತೈಸಿದರೂ, ಅವರು ತೃಪ್ತಿಪಡದೆ, ತಾವು ಈ ಹೊತ್ತೇ ಸಾಯುವೆವೆಂದು ಒಂದೇ ಛಲಹಿಡಿದರು. ಅಗ ವಿಠಲರಾಯನು ಕಂಗೆಟ್ಟು, "ಹಾಗಾದರೆ ನಾನು ಸಹಾ ಈ ಹೊತ್ತೇ ಸಾಯುತ್ತೇನೆ" ಎಂದು ಹೇಳಿ, ತುಂಬಾ ವ್ಯಸನದಿಂದ ಕಣತಲೆಯ ಮೇಲೆ ಮುಷ್ಟಿಯಿಟ್ಟು ಆಲೋಚಿಸುತ್ತಿರುವಾಗ, ದೈವವಶಾತ್ ವಕೀಲ ಸೂರಪ್ಪಯ್ಯನು ಅಲ್ಲಿಗೆ ಬಂದುಮುಟ್ಟಿದನು. ವಿಠಲರಾಯನು ಅವನನ್ನು ಒಳಗೆ ಕರೆದುತಂದು ಕುಳ್ಳಿರಿಸಿ, ನಡೆದ ಸಂಗತಿಗಳೆಲ್ಲವನ್ನು ಅವನೊಡನೆ ಹೇಳಿ, ಈ ಕಾರ್ಯದಲ್ಲಿ ಮುಂದೆ ಹೇಗೆ ಪ್ರವರ್ತಿಸಬೇಕೆಂದು ಕೇಳಲು–

"ರಾಯರೇ, ನಿಮ್ಮ ಹೆಂಡತಿಗೆ ಪ್ರಾಯವೇನು?"

"ಹನ್ನೊಂದು ಕಳೆದು ಹನ್ನೆರಡನೇ ವರ್ಷದಲ್ಲಿ, ಕೆಲವು ತಿಂಗಳು ಸಂದವು."

"ಸರಿ, ಬಿಡಿ, ನಿಮ್ಮ ಕೆಲಸ ಚಲೋದಾಯಿತು. ಹನ್ನೆರಡನೇ ವರ್ಷ ಕಳೆಯುವ ಮೊದಲು ಶೋಭನಪ್ರಸ್ತ ಮಾಡಿದರೆ, ಪೆನೆಲ್‌ಕೋಡ್ ಪ್ರಕಾರ ಶಿಕ್ಷೆ ಇದೆ."

"ಹೌದೇ?"

"ಮೈನ್ಸ್ ಕಮೆಂಟರಿ ನೋಡುತ್ತೀರಾ?" ಎಂದು ಕಂಕುಳಲ್ಲಿದ್ದ ಪುಸ್ತಕ ತೆರೆಯುವಷ್ಟರಲ್ಲಿ, ವಿಠಲರಾಯನು,

"ಬೇಡಿರಯ್ಯಾ, ನಿಮ್ಮ ಮಾತೇ ಸಾಕು, –ಆದರೆ ತಂದೆಯವರಿಗೂ ಭೀಮರಾಯರಿಗೂ ನೀವು ಹೇಳುವ ಸಂಗತಿ ಗೊತ್ತಿಲ್ಲ. ಅವರು ಮುಂದುವರಿಸಿದರೆ ಸಿಕ್ಕಿಬೀಳುವರಷ್ಟೆ."

"ಸಂಶಯವೇನು? ಭೀಮರಾಯರನ್ನು ಮೊದಲೇ ಪೋಲೀಸಿನವರು ಕಾಯುತ್ತಿದ್ದಾರೆ."

"ನೀವೇನಾದರೂ ಉಪಾಯ ಮಾಡಿ ಶೋಭನಪ್ರಸ್ತ ಒಂದೆರಡು ವರ್ಷಗಳಿಗೆ ಮುಂದಿಡಿಸುವಿರಾ?"

"ನೋಡೋಣ."

"ನೋಡೋಣವೆಂದರಾಗದಷ್ಟೆ, ನೀವು ಹಾಗೆ ಮಾಡಿಸಲೇಬೇಕು. ಇಕ್ಕೊಳ್ಳಿ!" ಎಂದು ಇಪ್ಪತ್ತು ರೂಪಾಯಿಯ ಒಂದು ನೋಟನ್ನು ಅಂಗಿಯ ಜೇಬಿನಿಂದ ತೆಗೆದುಕೊಡಲು, ಬಗಲಿಗೆ ಹಾಕಿಕೊಂಡು, ಅಲ್ಲಿಂದೆದ್ದು ಭೀಮರಾಯನ ಬಳಿಗೆ ಬಂದು, "ಮೈನ್ಸ್ ಕಮೆಂಟರಿ" ಎಂಬ ಪುಸ್ತಕವನ್ನು ತೆರೆದು, ಕೆಲವು ಹಾಳೆಗಳನ್ನು ಅತ್ತಲಾಗಿತ್ತಲಾಗಿ ಹಾರಿಸಿ, ಒಂದೆರಡು ನಿಮಿಷ ಓದಿದ ಹಾಗೆ ಮಾಡಿ, "ರಾಯರೇ, ಹನ್ನೆರಡು ವರ್ಷ ಪ್ರಾಯ ತುಂಬುವ ಮೊದಲು ಶೋಭನಪ್ರಸ್ತ ಮಾಡಿದರೆ, – ಮುಂಚಿನ ಮೊಕದ್ದಮೆಯ ಸಂಗತಿಗಳನ್ನು ಮರೆಯಲಿಲ್ಲವಷ್ಟೆ? ಮೊದಲೇ ಪೋಲೀಸಿನವರು ತಮ್ಮನ್ನು ಕಾಯುತ್ತಿದ್ದಾರೆ, ಜೋಕೆ ನೋಡಿಕೊಳ್ಳಿರಿ!" ಎಂದು ಬೆದರಿಸಲು, ಭೀಮರಾಯನು ಹಾಗುಂಟೇ? ಹಾಗಾದರೆ ಮುಂದಿನ ವರ್ಷದಲ್ಲಿ ನೋಡೋಣವೆಂದು ಹೇಳಿ, ಹೆಂಡತಿಗೂ ಈ ಅಂತರಂಗವನ್ನು ತಿಳುಹಿಸಿದ್ದಲ್ಲದೆ ತ್ರಿಯಂಬಕರಾಯ, ವಿಠಲರಾಯ ಇವರ ಹತ್ತಿರ ಸಹ ಮಾತನಾಡಿ, ಶೋಭನಪ್ರಸ್ತ ಮುಂದಿನ ವರ್ಷ ಬೆಳೆಯಿಸುವುದೆಂದು ನಿಶ್ಚಯಿಸಿದನು. ವಿಠಲರಾಯನು ಈ ಸಂಗತಿಯನ್ನು ಗುಲಾಬಿ, ಗೋಕುಳಿ ಇವರಿಗೆ ತಿಳುಹಿಸಲಾಗಿ ಅವರು, ಒಂದು ವರ್ಷದ ನಂತರವಷ್ಟೆ, ಆಗ ನೋಡಿಕೊಳ್ಳಬಹುದೆಂದಾಲೋಚಿಸಿ ಸುಮ್ಮಗಾದರು.

## ೩೧

ಕೆಲವು ತಿಂಗಳು ಕಳೆದವು. ಇಂದಿರೆಯು ತನ್ನ ಗಂಡನ ನಡತೆಯನ್ನು ಕುರಿತು ಒಂದೊಂದು ಸಮಯದಲ್ಲಿ ಆಲೋಚಿಸುವಷ್ಟು ಬುದ್ಧಿಶಕ್ತಿಯನ್ನು ಪಡೆದಳು. ಅವಳ ಸರಿ ಪ್ರಾಯದ ಹುಡುಗಿಯರು ಅವಳನ್ನು ಕಂಡಲ್ಲೆಲ್ಲ ಅವಳ ಮನಸ್ಸಿಗೆ ವೇದನೆಯುಂಟಾಗುವ ಹಾಗೆ "ಇಂದಿರೇ, ಕೃಷ್ಣನಿಗೆ ಹೆಂಡರೆಷ್ಟು? ಕೃಷ್ಣನು ಗೋಕುಲದಲ್ಲಿ ಹುಟ್ಟಿದವನಾದುದರಿಂದ ಅವನಿಗೆ "ಗೋಕುಳಿ" ಎನ್ನುತ್ತಾರೆಯೇ? ಅಲ್ಲ, ಅದು ಅವನ ಹೆಂಡರಲ್ಲಿ ಒಬ್ಬಾಕೆಯ ಹೆಸರೇ? ಕೃಷ್ಣನಿಗೆ ಗುಲಾಬಿಯ ಹೂವಿನ ಮೇಲೆ ಹೆಚ್ಚು ಪ್ರೀತಿಯೆ? ಅಲ್ಲ; ಗುಲಾಬಿಯೆಂಬುದು ಅವನ ಮತ್ತೊಂದು ಹೆಂಡತಿಯ ಹೆಸರೇ?" ಎಂದು ಹೀಗೆಲ್ಲ ಹಾಸ್ಯಮಾಡತೊಡಗಿದರು. ಅದಕ್ಕವಳು ಮನಸ್ಸಿನಲ್ಲಿ ಬಹು ಸಂಕಟಪಟ್ಟು ಉತ್ತರವೇನೂ ಕೊಡದೆ, ಒಂದು ದಿವಸ ತಾಯಿಯೊಡನೆ, "ಅವ್ವಾ, ಹುಡುಗಿಯರೆಲ್ಲ ನನ್ನನ್ನು ಅನೇಕ ತರವಾಗಿ ಅಣಕಿಸುತ್ತಾರಷ್ಟೆ. ಹೇಗೆ ಸೈಸಲಿ? ಏನಾದರೂ ಒಂದೊಂದು ನೆವನ ಮಾಡಿ 'ಗೋಕುಳಿ' 'ಗುಲಾಬಿ' ಎಂಬ ಹೆಸರುಗಳನ್ನು ಕುರಿತು ನನ್ನ ಹತ್ತಿರ ಪ್ರಶ್ನೆಗಳನ್ನು ಮಾಡುತ್ತಿದ್ದಾರೆ, ನನಗೆ ಉತ್ತರವೇನೂ ಸೂಚಿಸದೆ ಅತ್ತಿತ್ತ ನೋಡುವಾಗ ಅವರ ಮುಖದ ಮೇಲೆ ಸೀರೆಯ ಸೆರಗನ್ನು ಹಿಡಿದು, ಮುಖ ತಿರುಗಿಸಿ ನಗುತ್ತಿದ್ದಾರೆ. ಇದನ್ನೆಲ್ಲ ಸಹಿಸಕೂಡದಷ್ಟೆ!" ಎಂದು ದೂರು ಹೇಳಿದಾಗ ತಾಯಿಯು–"ಸುಮ್ಮನಿರು, ಊರಲ್ಲಿ ತಮತಮಗೆ ಕಂಡ ಹಾಗೆ ಏನಾದರೂ ಮಾತನಾಡುವರು.

ಅದಕ್ಕೆಲ್ಲ ನಾವು ಕಿವಿಕೊಡಬಾರದು. ನಾಯಿ ಬೊಗಳಿದರೆ ದೇವಲೋಕ ಹಾಳಾದೀತೇ? ನೀನಿನ್ನು ಮುಂದೆ ಅಂತಹ ಹುಡುಗಿಯರ ಸಂಗಡ ಸೇರಲೇ ಬೇಡ. ಮನೆಯಲ್ಲಿ ತಾನೇ ಇದ್ದು ಏನಾದರೂ ಗೀತೆಗಳೊ, ಅಭಂಗಗಳೊ, ಸ್ತುತಿಗಳೊ, ಸ್ತೋತ್ರಗಳೊ ಇಂಥಾದ್ದೇನಾದರೂ ಕಲಿಯುತ್ತಾ ಇರು. ನಿನ್ನ ಗಂಡನೆಂದರೆ ತಾಯಿಗೊಬ್ಬ ಮಗ. ದೇವರ ದಯದಿಂದ ಉಣ್ಣುವುದಕ್ಕೂ ತಿನ್ನುವುದಕ್ಕೂ ಬೇಕಾದಷ್ಟಿದೆ. ಅವನು ಸುಕ್ಷೇಮಿಯಾಗಿ ಸಂತೋಷದಲ್ಲಿದ್ದರೆ ಸಾಕು. ಒಂದೆರಡು ವರ್ಷಗಳು ಕಳೆದವೆಂದರೆ ತನ್ನಂತೆಯೇ ಬುದ್ಧಿ ಬರುವುದು. ನೀನು ಅದನ್ನು ಮನಸ್ಸಿಗೆ ತೆಗೆದುಕೊಳ್ಳಬೇಡ" ಎಂದು ಮಗಳನ್ನು ಸಂತೈಸುವಳು. ಆದರೆ ಇಂದಿರೆಯು ಚಿಕ್ಕ ಪ್ರಾಯದವಳಾದರೂ, ಗಂಡನ ನಡತೆಯಲ್ಲಿ ಅವಳಿಗೆಷ್ಟು ಹೇಳಿದರೂ ಸಮಾಧಾನವಾಗದೆ, ಒಂದೊಂದು ಸಾರಿ ರಾತ್ರಿ ಮಲಗಿರುವಾಗ ಅದೇ ವಿಷಯವನ್ನು ಕುರಿತು ಚಿಂತಿಸುತ್ತಾ ಮನಸ್ಸಿನಲ್ಲಿಯೇ–'ದೇವರೇ, ಪತಿಗೆ ಒಳ್ಳೇ ಬುದ್ಧಿಯನ್ನು ಕೊಟ್ಟು, ಮುಂದಿನ ಕಷ್ಟಗಳನ್ನು ತಪ್ಪಿಸು!' ಎಂದು ಪ್ರಾರ್ಥಿಸುತ್ತಾ ಇರುವಳು. ತಥಾಪಿ ಆಗಾಗ್ಗೆ ಅದೇ ವಿಷಯ ನೆನಪಿಗೆ ಬಂದು ಮನೋವೇದನೆಯುಂಟಾಗುತ್ತಲೇ ಇರುತ್ತಿದ್ದುದರಿಂದ ಕನ್ಯಾಸ್ತ್ರೀಯರ ಶಾಲೆಯಲ್ಲಿ ಕಲಿಯುತ್ತಿದ್ದ ನೆರೆಮನೆ ರಾಮರಾಯನ ಮಗಳ ಶಾರದೆಯೆಂಬ ಹುಡುಗಿ ಇದ್ದಲ್ಲಿಗೆ ಹೋಗಿ, "ಸ್ತ್ರೀ ಧರ್ಮ ನೀತಿ", "ಏಸೋಫನ ನೀತಿ ಕಥೆಗಳು", "ಪಂಚತಂತ್ರ", "ಸತ್ಯವತೀ ಚರಿತ್ರೆ", ಇವೇ ಮುಂತಾದ ಪುಸ್ತಕಗಳನ್ನು ಓದುತ್ತಾ ಹೇಗೂ ಸಮಯ ಕಳೆಯುತ್ತಾ ಇರುವಲ್ಲಿ ಈ ವಿದ್ಯಮಾನವು ಭೀಮರಾಯನಿಗೂ ಅಂಬಾಬಾಯಿಗೂ ಗೊತ್ತಾಗಿ, "ಓಹೋ! ಜಾತಿ ಕೆಡಿಸುವುದಕ್ಕೋಸ್ಕರ ಮ್ಲೇಂಛರಾದ ಪಾದ್ರಿಗಳು ಛಾಪಿಸಿದ ಪುಸ್ತಕಗಳನ್ನು ಓದುತ್ತಾಳಷ್ಟೆ! ಇನ್ನು ಇದರಿಂದ ಕೇಡಿದೆ" ಎಂದಾಲೋಚಿಸಿ, ಒಂದು ದಿವಸ ಅಂಬಾಬಾಯಿಯು ಮಗಳನ್ನು ತಾನು ಮಲಗಿಕೊಳ್ಳುವ ಕೋಣೆಗೆ ಕರೆದು,

"ಇಂದಿರೇ, ನೀನು ಶಾರದೆ ಇದ್ದಲ್ಲಿಗೆ ಆಗಾಗ್ಗೆ ಹೋಗುತ್ತಿರುವೆಯಷ್ಟೆ. ಪರರ ಮನೆಗೆ ಹಾಗೆ ಹೋಗುತ್ತಿರುವುದು ಸರಿಯೇ?"

"ಅವ್ವಾ, ಶಾರದೆಯು ಪ್ರತ್ಯೇಕ ಒಂದು ಕೋಣೆಯಲ್ಲಿ ಕುಳಿತು ಓದುತ್ತಾ ಬರೆಯುತ್ತಾ ಇರುತ್ತಾಳೆ. ಆಗ ನಾನು ಯಾವುದಾದರೂ ಒಂದು ಪುಸ್ತಕ ತೆಗೆದುಕೊಂಡು ಓದುತ್ತಿರುತ್ತೇನೆ. ನಾವು ಇರುವಲ್ಲಿಗೆ ಯಾರೂ ಬರುವುದಿಲ್ಲ; ನಾವು ಕೋಣೆ ಬಿಟ್ಟು ಹೊರಗೆ ಹೋಗುವುದೂ ಇಲ್ಲ. ಬಾಗಿಲು ಮುಚ್ಚಿ ಕುಳಿತುಕೊಳ್ಳುತ್ತೇವೆ."

"ಊರ ಜನರು ಏನಾದರೂ ಹೇಳುವರಷ್ಟೆ?"

"ಊರ ಜನರ ಮಾತಿಗೆ ಕಿವಿ ಕೊಡಬಾರದೆಂದು ನೀನಲ್ಲವೇ ನನಗೆ ಹೇಳಿದ್ದು?"

"ನೀನು ಓದುವ ಪುಸ್ತಕವೆಂಥಾದ್ದು?"

"ನಾನು ನಿನ್ನೆಯವರೆಗೆ 'ಸ್ತ್ರೀ ಧರ್ಮ ನೀತಿ' ಎಂಬ ಪುಸ್ತಕ ಓದಿದೆ. ಈ ಹೊತ್ತು 'ಏಸೋಫನ ನೀತಿ ಕಥೆಗಳು' ಎಂಬ ಪುಸ್ತಕ ಓದತೊಡಗಿದ್ದೇನೆ."

"ಅವುಗಳೆಲ್ಲ ಪಾದ್ರಿಗಳು ಛಾಪಿಸಿದ ಪುಸ್ತಕಗಳಲ್ಲವೇ?"

"ಅದೇನೋ ನಾನರಿಯೆ."

"ಅವುಗಳು ಜಾತಿ ಕೆಡಿಸುವುದಕ್ಕೆ ಛಾಪಿಸಿದ ಪುಸ್ತಕಗಳು."

"ನಾನು ಓದಿದ ಪುಸ್ತಕದಲ್ಲಿ ಜಾತಿ ಕೆಡುವ ಸಂಗತಿ ಯಾವುದೂ ಇರಲಿಲ್ಲ. ಪುಸ್ತಕ ಓದಿದ ಮಾತ್ರದಿಂದಲೇ ಜಾತಿ ಹೋಗುವುದುಂಟೇ?"

"ಅವುಗಳಲ್ಲಿ ನಮ್ಮ ಜಾತಿಗೆ ವಿರೋಧವಾದ ಸಂಗತಿಗಳಿವೆ."

"ನಾನು ಓದಿದ ಪುಸ್ತಕದಲ್ಲಿಲ್ಲ. ಅದರಲ್ಲಿ ಸ್ತ್ರೀಯರು ಹೆತ್ತವರ ಕಡೆಗೂ ಪತಿಗಳ ಕಡೆಗೂ ಬೇರೆಯವರ ಕಡೆಗೂ ಹೇಗೆ ನಡೆದುಕೊಳ್ಳಬೇಕೆಂಬ ಬಹು ಚಲೋದಾದ ಕ್ರಮಗಳೆಲ್ಲ ಹೇಳಲ್ಪಟ್ಟಿವೆ."

"ಅದನ್ನೆಲ್ಲ ನೀನು ಇಲ್ಲೇ ಮನೆಯಲ್ಲಿದ್ದು ಕಲಿಯಬಹುದಷ್ಟೆ? ಅನ್ಯರಲ್ಲೇಕೆ?"

"ಅದು ಬಹು ಯೋಗ್ಯವಾದದ್ದೇ. ಆದರೆ ಮನೆಯಲ್ಲಿ ನನಗೆ ಅಂತಹ ವಿಷಯಗಳನ್ನು ಕಲಿಸಿದ್ದೂ ಇಲ್ಲ, ನಾನು ಕಲಿತದ್ದೂ ಇಲ್ಲ. ಇನ್ನಾದರೂ ನನಗೆ ಶಾರದೆಯ ಹತ್ತಿರವಿರುವಂತಹ ಪುಸ್ತಕಗಳನ್ನು ತರಿಸಿಕೊಡುವಿಯಾ?"

"ನಿನಗೆ ಆ ಮ್ಲೇಂಛರ ಪುಸ್ತಕಗಳೇಕೆ? ಇಲ್ಲಿ ಶ್ರೀಕೃಷ್ಣನ ಬಾಲಲೀಲೆ, ರಾಧಾವಿಲಾಸ, ಇವೇ ಮುಂತಾದ ಪುಸ್ತಕಗಳಿವೆ. ಅವುಗಳನ್ನು ಓದಿದರೆ ಸಾರ್ಥಕವಿದೆ."

"ಬಾಲಲೀಲೆಗಳನ್ನು ಓದಿದ್ದರಿಂದ ಸಾರ್ಥಕವೇನು?"

"ಕ್ಷಣೇ ಕ್ಷಣೇ ಶ್ರೀಕೃಷ್ಣನ ಹೆಸರನ್ನು ತೆಗೆದ ಹಾಗೆ ಆಗುತ್ತೆ. ಅದೊಂದು ವಿಧದ ನಾಮಸ್ಮರಣೆ, ಅದರಿಂದ ಹೆಚ್ಚು ಪುಣ್ಯವಿದೆ."

"ಬಾಲಲೀಲೆಯನ್ನು ಓದದೆ ಶ್ರೀ ಕೃಷ್ಣನ ಹೆಸರು ತೆಗೆಯಲಿಕ್ಕೇನಾತಂಕವಿದೆ? ಶಾರದೆಯ ಹತ್ತಿರವಿದ್ದ ಪುಸ್ತಕಗಳನ್ನು ಓದುತ್ತಾ ಇರುವಾಗ ಶ್ರೀ ಕೃಷ್ಣನ ಹೆಸರು ಆಗಾಗ್ಗೆ ತೆಗೆದರೆ, ಎರಡು ಕೆಲಸಗಳೂ ಒಂದೇ ಕಾಲದಲ್ಲಿ ಆಗುವುವು. ಏವಂಚ ನನ್ನ ಮನಸ್ಸಿನ ಬೇಸರು ಹೋಗುವ ಹಾಗೂ, ಸಮಯ ವೃಥಾ ನಷ್ಟವಾಗದ ಹಾಗೂ ಏನಾದರೂ ಉಪಾಯವನ್ನು ಹೇಳು. ಅದನ್ನನುಸರಿಸಿ ನಡೆದುಕೊಳ್ಳುವೆನು.

"ನಾನು ಮೊದಲೇ ಹೇಳಿದ್ದೇನೆ; ತಿರಿಗಿ ಏನು ಹೇಳಲಿ?" ಎಂದು ದುಃಖದಿಂದ ಕಣ್ಣೀರು ಸುರಿಸಿದಳು. ಅಂಬಾಬಾಯಿಯು ಅವಳ ಕಣ್ಣುಗಳನ್ನೊರಸಿ, "ಛೀ! ಏಕೆ ಅಳುತ್ತೀ! ತುಂಬಿದ ಶುಕ್ರವಾರ! ನಿನಗೆ ಇಲ್ಲ್ಯಾಗಲೀ ಗಂಡನಲ್ಲ್ಯಾಗಲೀ ಕಡಿಮೆ ಏನಿದೆ? ಸರ್ವಾಂಗ ಚಿನ್ನದ ಕವಚವೇ ಬೇಕೇ? ಕ್ಷಣದಲ್ಲಿ ಮಾಡಿಸಿಕೊಡುವೆನು. ನಿನಗ್ಯಾವ ತರದ ಉಡಿಗೆಗಳು ಬೇಕೋ ಅವುಗಳನ್ನು ತರಿಸಿಕೊಡುವೆನು."

"ವಸ್ತ್ರಾಭರಣವೆ ಮುಂತಾದ ಅಲಂಕಾರಗಳು ಎಷ್ಟಿದ್ದರೇನು? ಸ್ತ್ರೀಯರಿಗೆ ಬೇಕಾದ ಮುಖ್ಯವಾದ ಅಲಂಕಾರ ಯಾವುದೆಂದು ನೀನು ಬಲ್ಲೆಯಷ್ಟೆ?"

"ಬಲ್ಲೆನು; ಕುಂಕುಮ, ಕಾಡಿಗೆ, ಇವೆರಡಲ್ಲವೆ? ಅವುಗಳಿಗೇನು ಕಡಿಮೆ?"

"ಕುಂಕುಮ, ಕಾಡಿಗೆ! ಅಯ್ಯೋ! ಏಕವ್ವಾ ಹೀಗೆ ಮಾತನಾಡುವೆ? ನಾನು

ಚಿಕ್ಕಪ್ರಾಯದವಳು ದಿಟವೇ. ಆದರೂ ಸ್ವಲ್ಪವಾದರೂ ಬುದ್ಧಿಯಿಲ್ಲವೆಂದು ಗ್ರಹಿಸುತ್ತೀಯಾ? ಕೊಳಕು ಬಿಡಿಸೂಳೆಗೆ ಕುಂಕುಮ ಕಾಡಿಗೆ ಇಲ್ಲವೇ? ಸ್ತ್ರೀಯರಿಗೆ ಮುಖ್ಯವಾದ ಅಲಂಕಾರವೆಂದರೆ, ಯೋಗ್ಯರಾದ ಪತಿಗಳಲ್ಲವೇ? ಇದು ನೀನು ತಿಳಿಯದೆ ಇದ್ದ ವಿಷಯವಲ್ಲ. ಬೇಕೆಂದು ತಿಳಿಯದವಳಂತೆ ಮಾತನಾಡುತ್ತಿಯೇನೋ, ನನ್ನ"–ಎನ್ನುವಷ್ಟರಲ್ಲಿ ಗಂಡನ ನಡತೆಯ ವಿಷಯವು ನೆನಪಿಗೆ ಬಂದು, ದುಃಖದಿಂದ ಹೆಚ್ಚು ಮಾತನಾಡಕೂಡದೆ ಪುನಃ ಕಂಬನಿ ಇಕ್ಕಿದಳು. ಆಗ ಅಂಬಾಬಾಯಿಯು– "ತುಂಬಿದ ಶುಕ್ರವಾರ ಸಾಯಂಕಾಲದ ಕತ್ರಿಯಲ್ಲಿ ಕಣ್ಣೀರು ಮಿಡಿಯುತ್ತೀಯಾ? ನಿನ್ನ ಮನೋಭಿಪ್ರಾಯವೇನೆಂದು ಗೊತ್ತಾಯಿತು. ಚಿನ್ನಾ, ಅಳಬೇಡ, ನಿನ್ನ ಗಂಡನ ನಡತೆಯನ್ನು ನೆಟ್ಟಗೆಪಡಿಸುವ ವಿಷಯದಲ್ಲಿ ಮಾಡಬೇಕಾದ್ದನ್ನೆಲ್ಲ ಮಾಡಿಸುತ್ತೇನೆ. ಯೋಚಿಸಬೇಡ, ಯಜಮಾನರು ಈಗ ಬರುವರು. ಬಂದ ಕ್ಷಣದಲ್ಲೇ ಈ ವಿಷಯವನ್ನು ಅವರೊಡನೆ ಮಾತನಾಡಿ ನಿನ್ನ ಮನಸ್ಸಿನಲ್ಲಿದ್ದಂತೇ ಬೇಕಾದ್ದನ್ನು ಮಾಡಿಸಿಕೊಡುವೆನು, ದುಃಖಿಸಬೇಡ" ಎಂದು ಮಗಳನ್ನು ಸಂತೈಸಿ, ಭೀಮರಾಯನು ಮನೆಗೆ ಬರೋಣವೇ ಎಲ್ಲಾ ಸಂಗತಿಗಳನ್ನು ಅವನೊಡನೆ ಹೇಳಲು, ಅವನು–"ಅವಶ್ಯವಾಗಿ ನಾಳಿನ ದಿವಸವೇ ತ್ರಿಯಂಬಕರಾಯರ ಸಂಗಡ ಮಾತನಾಡಿ, ಹುಡುಗನು ಸರಿಯಾದ ಮಾರ್ಗಕ್ಕೆ ಬರುವ ಹಾಗೆ ಮಾಡಬೇಕಾದ ಉಪಾಯಗಳೆಲ್ಲವನ್ನೂ ಮಾಡಿಸುತ್ತೇನೆ" ಎಂದನು.

## ೩೨

ಮರುದಿವಸ ಭೀಮರಾಯನು ತ್ರಿಯಂಬಕ ರಾಯನಲ್ಲಿಗೆ ಹೋಗಿ ವಾಡಿಕೆಯಂತೆ ಕ್ಷೇಮಸಮಾಚಾರದ ಮಾತುಗಳಾದ ಮೇಲೆ ಕುಳಿತುಕೊಂಡು, ಪ್ರಸ್ತಾವತ್ವೇನ ವಿಠಲರಾಯನ ವಿಷಯವನ್ನು ಮಾತನಾಡುವುದಕ್ಕೆ ಪ್ರಾರಂಭಿಸುವಾಗ ವಿಠಲರಾಯನ ಬಂಗಲಾದಿಂದ ಊಳಿಗದ ತಿಮ್ಮನು ಓಡುತ್ತಾ ಬಂದು, ತ್ರಿಯಂಬಕರಾಯನೊಡನೆ,

| | |
|---|---|
| "ಸ್ವಾಮಿ, ರಾಯೆರೆಗ್ ಜರೊ, ಕೋಡೆಡ್ಡಿಂಚಿ ಜೆತ್ತಿನವುಳೇ." | "ಸ್ವಾಮಿ, ರಾಯರಿಗೆ ಜ್ವರ, ನಿನ್ನೆಯಿಂದ ಮಲಗಿದ್ದಲ್ಲೇ." |
| "ಕೊಡೆನೇ ಬತ್ತ್‌ದ್ ದಾಯೆ ಪಂಡಿಜ್ಜಾ. ಕೌಂತಿನಾಯಾ?" | "ನಿನ್ನೆಯೇ ಬಂದು ಏಕೆ ಹೇಳಲಿಲ್ಲ. ಹೂಳಲ್ಪಟ್ಟವನೇ?" |
| "ಸುದ್ದಿ ಮಳ್ಪಡ ಅಂದ್‌ದ್ ರಾಯೆರ್ ಪಂಡೆರ್." | "ಸುದ್ದಿ ಮಾಡಬೇಡವೆಂದು ರಾಯರು ಹೇಳಿದರು." |
| "ಯೇರ್‌ಲಾ ಮರ್ದ್ ಕೊರ್ಪೆರೋ?" | "ಯಾರಾದರೂ ಔಷಧ ಕೊಡುತ್ತಾರೆಯೇ?" |

"ಯೇ, ಯಾನ್ ತೂತಿಜ್ಜಿ. ಪಂಡಿತರೆನೋ, ದಾಕ್‌ದಾರೆರೆನೋ ಲೆಪ್ಪೊಡೇ? ಅಂದ್‌ದ್ ಯಾನ್ ಕೇಂಡೆ; ಒಂಜಿಲಾ ಪಂಡ್‌ಜೆರ್."

"ಲಕ್ಕ್‌ದ್ ಕುಳ್ಳುವೆನಾ? ಯೆಡ್ಡೆನೇ ಪಾತೆರ್ವೆನಾ?"

"ಯೇ, ಯಾನ್ ಪೋಡಿದ್ ದೆಂಗ್‌ದ್ ಬತ್ತ್‌ದ್ ಅತ್ತೆ ಸುದ್ದಿ ಕೊರಿನಿ?"

"ಯೇ, ನಾನು ನೋಡಲಿಲ್ಲ. ಪಂಡಿತರನ್ನೋ, ಡಾಕ್ತರರನ್ನೋ ಕರಿಯಬೇಕೇ? ಎಂದು ನಾನು ಕೇಳಿದೆ. ಒಂದೂ ಹೇಳಲಿಲ್ಲ."

"ಎದ್ದು ಕುಳಿತುಕೊಳ್ಳುತ್ತಾನೆಯೇ? ಚೆನ್ನಾಗಿ ಮಾತನಾಡುತ್ತಾನೆಯೇ?"

"ಯೇ, ನಾನು ಬೆದರಿ ಅಡಗಿ ಬಂದಲ್ಲವೇ ಸುದ್ದಿ ಕೊಟ್ಟದ್ದು?"

ಈ ಮಾತುಗಳನ್ನು ಕೇಳಲಾಗಿ ತ್ರಿಯಂಬಕರಾಯ, ಭೀಮರಾಯ ಮತ್ತು ಮನೆಯವರೆಲ್ಲರೂ ಬಹಳ ಕಳವಳ ಪಟ್ಟು, ತ್ರಿಯಂಬಕರಾಯನು ಭೀಮರಾಯನೊಡನೆ,

"ರಾಯರೇ, ಮುಂದೇನು ಮಾಡೋಣ? ನನಗೆ ಕಣ್ಣು ಕಟ್ಟಿದ ಹಾಗಾಗುತ್ತೆ. ಬ್ರಹ್ಮನು ಷಷ್ಠಿಯ ದಿವಸ ರಾತ್ರಿ ಹಣೆಯಲ್ಲಿ ಬರೆದಂತೆ ಆಗದೆ ಇರದಾದರೂ, ನಮ್ಮ ನಮ್ಮ ಪ್ರಾಪ್ತ್ಯಾನುಸಾರ–"

"ರಾಯರೇ, ಇಂತಹ ಸಮಯದಲ್ಲಿ, ತಾವು ಕಂಗೆಡುವುದು ತರವಲ್ಲ. ಕಷ್ಟಬಂದಾಗ ಧೈರ್ಯವೇ ಮುಖ್ಯ. ಆ ಪ್ರಸಂಗ ತಾವು ಕೇಳಿದ್ದೀರಷ್ಟೆ? ಬರೇ ಹೆಣ್ಣುಹೆಂಗಸಾದ ಆ ಪ್ರಮೀಳೆಯು ಮೂರು ಲೋಕಕ್ಕೂ ಗಂಡನೆನ್ನಿಸಿದ ದ್ವಾದಶನಾಮಧಾರಿಯಾದ ಧನಂಜಯನೊಡನೆ ಕಡಾಕಡಿ ಯುದ್ಧಮಾಡಿ ಅವನ ಸೈನ್ಯವೆಲ್ಲವನ್ನು ಕ್ಷಣಮಾತ್ರದಲ್ಲಿ ಮಣ್ಣಿಗೆ ಮಣ್ಣು ಕೂಡಿಸಲಿಲ್ಲವೇ? ಅದರ ಗುಟ್ಟೇನು? ಬರೇ ಧೈರ್ಯವೇ. ಅಷ್ಟೆಲ್ಲ ಏಕೆ? ನನ್ನ ಮೇಲೆ ಬಂದ ಗಂಡದಿಂದ ನಾನು ಹೇಗೆ ಪಾರಾದೆ? ಧೈರ್ಯದಿಂದಲ್ಲವೇ? ಈಗ ಪ್ರಥಮತಃ ನಾವು ಪೊಕ್ಕು ಸೆಟ್ಟಿಯನ್ನು ಕರೆಯಿಸಿ, ಅವನೊಡನೆ ಆಲೋಚಿಸಿ, ಕಾಲವಿಳಂಬವಿಲ್ಲದೆ ಹುಡುಗನಿಗೆ ಔಷಧೋಪಚಾರಗಳನ್ನು ಮಾಡುವ ಪ್ರಕರಣವನ್ನು ನೋಡಿಕೊಳ್ಳಬೇಕು. ಆದರೆ ಸ್ವಲ್ಪ ತಡೆಯಿರಿ, ಹುಡುಗನಿಗೂ ನಮ್ಮ ಇಂದಿರೆಗೂ ಈ ಹೊತ್ತು ಚಂದ್ರ ತಾರಾಬಲ ಹೇಗುಂಟೆಂದು ಪ್ರಥಮತಃ ನೋಡಿಕೊಳ್ಳಬೇಕು. ಏಕೆಂದರೆ, ರಾಯರೇ, "ನಮ್ಮ ಈ ಪ್ರಪಂಚದಲ್ಲಿ ಸರ್ವ ಸುಖದುಃಖಗಳಿಗೂ ಗ್ರಹಚಾರವೇ ದ್ಯೋತಕವಾದ ಕಾರಣ" ಎಂದು ಹೇಳಿ, ತಿಮ್ಮನನ್ನು ಕರೆದು, ಬೇಗನೆ ಹೋಗಿ ಸೀತಾರಾಮ ಜೋಯಿಸನನ್ನು ಕರೆದು ತರುವುದಕ್ಕೂ, ಸೋಮಯ್ಯನನ್ನು ಕರೆದು, ಅಂಬಾಬಾಯಿ, ಇಂದಿರೆ ಇವರನ್ನು ಕರೆದು ತರುವುದಕ್ಕೂ ಕಳುಹಿಸಿಕೊಟ್ಟು, "ರಾಯರೇ, ಇತ್ತ ಕೇಳಿರಿ" ಎಂದು ತ್ರಿಯಂಬಕರಾಯನೊಡನೆ ಪುನಃ ಏನೋ ಮಾತನಾಡುವುದಕ್ಕೆ ಪ್ರಾರಂಭಿಸುವಷ್ಟರಲ್ಲಿ ಪೊಕ್ಕು ಸೆಟ್ಟಿಯು ತಾನಾಗಿ ಅಲ್ಲಿಗೆ ಬಂದು ಮುಟ್ಟಿ, 'ಸ್ವಾಮಿ, ಸ್ವಾಮಿ' ಎಂದಿಬ್ಬರಿಗೂ ನಮಸ್ಕರಿಸಲು, ಭೀಮರಾಯನು "ಎಲಾ

ನಮ್ಮ ಪೊಕ್ಕು ಸೆಟ್ಟಿಯು ದೀರ್ಘಾಯುಷಿ! ಪ್ರಸ್ತಾವ ತೆಗೆಯುವಷ್ಟರಲ್ಲೇ ಬಂದು ಮುಟ್ಟಿದನು! ಹೇಗೆ ರಾಯರೇ? ಪ್ರಥಮತಃ ಈತನನ್ನು ಕಳುಹಿಸಿ ಹುಡುಗನ ಸ್ಥಿತಿಗತಿಗಳನ್ನೂ ಅಸ್ವಸ್ಥದ ಕಾರಣವನ್ನೂ ಗೊತ್ತುಮಾಡಿಕೊಂಡು, ಗ್ರಹ ಬಲಾಬಲಿಕೆಗಳನ್ನು ತಿಳಿದ ಮೇಲೆ ಅಲ್ಲವೇ ಯಾವ ವಿಷಯದಲ್ಲಾದರೂ ಪ್ರವರ್ತಿಸುವುದು ಯೋಗ್ಯ?" ಎಂದು ತ್ರಿಯಂಬಕರಾಯರೊಡನೆ ಕೇಳಲು, ಅವನು– "ವಾಸ್ತವವೇ" ಅಂದನು. ಭೀಮರಾಯನು ಕೂಡಲೇ ಪೊಕ್ಕು ಸೆಟ್ಟಿಯೊಡನೆ ವಿವರಗಳನ್ನೆಲ್ಲ ಹೇಳಿ, ಅವನನ್ನು ವಿಠಲರಾಯನ ಬಳಿಗೆ ಕಳುಹಿಸಿದನು. ಪೊಕ್ಕು ಸೆಟ್ಟಿಯು ಹೊರಟುಹೋದ ಕೆಲವು ನಿಮಿಷಗಳಲ್ಲಿ ಅಂಬಾಬಾಯಿ, ಇಂದಿರೆ ಸಹ ಬಂದು ಮುಟ್ಟಿದರು. ತಿಮ್ಮನು ಸೀತಾರಾಮ ಜೋಯಿಸರನ್ನು ಕರೆದುಕೊಂಡು ಬಂದನು. ಭೀಮರಾಯನು "ಜೋಯಿಸರೇ, ಕುಳ್ಳಿರಿ" ಎನಲು, ತಿವಾಸಿಯ ಮೇಲೆ ಕುಳಿತು, "ರಾಯರೇ, ಈಗ ತಾವಾಡಿದ ಶಬ್ದಗಳಲ್ಲಿ ಪ್ರಥಮ ಶಬ್ದದ ಪ್ರಥಮಾಕ್ಷರವು 'ಜ' ಎಂಬ ವ್ಯಂಜನವಾಗಿದೆ. ಅದಕ್ಕೆ ವ್ಯಂಜನಮಾಲೆಯಲ್ಲಿ ಅಷ್ಟಮ ಸ್ಥಾನವಿದೆ. ಅಷ್ಟಮ ಸ್ಥಾನವು ಕಷ್ಟಕರವಾದ್ದು. ತಮ್ಮಲ್ಲಿ ಏನೋ ಒಂದು ಕಷ್ಟಪ್ರಾಪ್ತಿಯಾಗಿರುವುದಾಗಿ ತೋರುತ್ತೆ. ಹೌದೋ ಅಲ್ಲವೋ ಹೇಳಿರಿ" ಎಂದು ಡಬ್ಬಿಯಿಂದ ದೊಡ್ಡ ಒಂದು ಜಿವುಟು ನಸ್ಯ ತೆಗೆದು ಸೊರ್ ಎಂದು ಸೇದಿ, ಒಂದೆರಡು ಶೀನು ತೆಗೆದು ಮುಖ ಒರಸಿಕೊಂಡಾಗ, ಭೀಮರಾಯನು ಜೋಯಿಸನ ಜ್ಯೋತಿಷ ಜ್ಞಾನಕ್ಕೆ ಮೆಚ್ಚಿ, "ಶಾಭಾಸ್" "ಶಾಭಾಸ್" ಎಂದುತ್ತರಕೊಟ್ಟು, ವಿಠಲರಾಯ ಇಂದಿರೆ ಇವರ ಜಾತಕಗಳನ್ನು ತ್ರಿಯಂಬಕರಾಯನಿಂದ ತರಿಸಿಕೊಂಡು, ಜೋಯಿಸನ ಕೈಯಲ್ಲಿ ಕೊಟ್ಟು, "ಜೋಯಿಸರೇ, ಈ ಎರಡು ಜಾತಕಗಳನ್ನು ನೋಡಿ, ಈಗಿನ ಗ್ರಹ ಬಲಾಬಲಿಕೆ ಹೇಗೆಂದು ಹೇಳಿರಿ" ಎನಲು, ಅವನು ಕೂಡಲೇ ಒಂದು ಮಣೆಯ ಮೇಲೆ ಜೇಡಿಯಿಂದ ಒಂದು ನವಗ್ರಹ ಕುಂಡಲವನ್ನು ಬರೆದು, ಕವಡೀಚೀಲದಿಂದ ಕೆಲವು ಕವಡಿಗಳನ್ನು ತೆಗೆದು, ಆ ಕುಂಡಲದ ಕೋಣಗಳಲ್ಲಿ ಅಲ್ಲಲ್ಲಿಟ್ಟು ಗಣಿತಮಾಡಿ, ಕ್ಷಣೇ ಕ್ಷಣೇ ಜಾತಕಗಳನ್ನು ನೋಡುತ್ತಾ, ಎಂಟು ಹತ್ತು ಶ್ಲೋಕಗಳನ್ನು ಹೇಳಿ, ಒಂದೆರಡು ನಿಮಿಷಗಳವರೆಗೆ ಕಣ್ಣುಗಳನ್ನು ಮುಚ್ಚಿ, ಆ ಮೇಲೆ ತೆರೆದು, "ಹೂಸ್!" ಎಂದು ಒಂದು ಶ್ವಾಸಬಿಟ್ಟನು. ಆಗ ಭೀಮರಾಯನು "ಏನು ಜೋಯಿಸರೇ, ಗ್ರಹಬಲ ಹೇಗೆ? ನೀವು ಅವಲಕ್ಷಣದ ಕುರುಹು ಕಾಣಿಸುತ್ತಿರೇನು?" ಎಂದು ಕೇಳಲು, ಇನ್ನೊಮ್ಮೆ ಒಂದು ಶ್ವಾಸಬಿಟ್ಟು "ರಾಯರೇ, ನಾನು ಆ ದಿವಸವೇ ಹೇಳಿದ್ದೇನಷ್ಟೆ? ಹುಡುಗನಿಗೆ ಕುಜರಾಹುಗಳ ಸಂಧಿ ಇದೆ. ಆದರೆ ತಾವು ಗಾಬರಿಯಾಗಬೇಡಿರಿ, ಯೋಗ ಮಾತ್ರವೆ. ಅದಕ್ಕೆ ತಕ್ಕ ಪರಿಹಾರ ಸಹ ನಾನು ಮೊದಲೇ ಹೇಳಿದ್ದೇನಷ್ಟೆ? ಪುರೋಹಿತನಿಗೆ ಒಂದು ಸುವರ್ಣ ಸವತ್ಸಗೋದಾನವನ್ನೀಗಲೇ ಕೊಟ್ಟು ಬಿಡಬೇಕು. ಸುವರ್ಣ ಗೋದಾನವೆಂದರೆ ಬರೇ ಒಂದು ಸಣ್ಣ ಚಿನ್ನದ ತಗಡಿನ ಮೇಲೆ ಗೋವಿನ ಚಿತ್ರವನ್ನು ಬರೆದು, ಅದನ್ನು ದಾನಮಾಡಿದರೆ ಸಾಲದು. ಹಣದ ಮುಖ ನೋಡುವ ಸಮಯವು ಇದಲ್ಲ. ಕನಿಷ್ಟಪಕ್ಷಕ್ಕೆ ಮೂವತ್ತು ವರಹಾ ತೂಕದ ಗಟ್ಟಿ ಚಿನ್ನದಿಂದ ಗೋವಿನ ಪ್ರತಿಮೆ, ಹತ್ತು ವರಹಾ ತೂಕದ ವತ್ಸಪ್ರತಿಮೆ ಸಹ ಮಾಡಿಸಿ, ಅದರ ಸಂಗಡ

ಸ್ವಲ್ಪ, – ಅಂದರೆ ಐದು ವರಹ ಸಾಕು, – ಹಿರಣ್ಯ ಸಹ ಕೂಡಿಸಿ ದಾನಕೊಡಬೇಕು. ಆಗ ಹುಡುಗನ ಜೀವಕ್ಕೇನೂ ಭಯವಿಲ್ಲ. ಹುಡುಗಿಯ ಜಾತಕ ಚೆಲೋದಿದೆ. ಬಲವಾದ ಸೌಮಾಂಗಲ್ಯಯೋಗವಿದೆ. ಸಂಶಯಬೇಡ. ಮತ್ತೇನು ನನ್ನಿಂದಾಗಬೇಕಾದ್ದು? ತೋಕೂರು ಗಂಗಾಧರ ರಾಯರಲ್ಲಿಂದ ನನಗೆ ಜನ ಬಂದಿತ್ತು, ಹೋಗಲೇ?" ಎಂದು ಕೇಳಲು, ತ್ರಿಯಂಬಕರಾಯನು ಅವನಿಗೆ ಎರಡು ರೂಪಾಯಿ ದಕ್ಷಿಣೆ ಕೊಟ್ಟು ಹೋಗಬಹುದೆಂದು ಹೇಳಿದನು. ಜೋಯಿಸನು ಕೂಡಲೇ ಎದ್ದು, ಪುರೋಹಿತ ಕಾಶೀನಾಥ ಭಟ್ಟನ ಬಳಿಗೆ ಹೋಗಿ, "ವೇದ ಮೂರ್ತಿಗಳೇ, ತಮಗೆ ಹೊಟ್ಟೆ ತುಂಬಾ ಬಗೆಮಾಡಿ ಬಂದಿದ್ದೇನೆ. ನನ್ನನ್ನು ಮಾತ್ರ ಮರೆಯಬೇಡಿರಿ" ಎಂದನು. ಆಗ ಕಾಶೀನಾಥ ಭಟ್ಟನು "ತಮ್ಮನ್ನು ಮರೆಯುವ ಕಾಲ ಉಂಟೇ? ಪ್ರಕರಣವೆಂಥಾದ್ದು ಹೇಳಿರಿ" ಎನಲು "ತ್ರಿಯಂಬಕರಾಯನಲ್ಲಿ ತಮಗೆ ನಾಲ್ವತ್ತು ವರಹಾ ತೂಕದ ಗಟ್ಟಿಚಿನ್ನದ ಸವತ್ಸ ಗೋದಾನ, ನಗದು ಇಪ್ಪತ್ತು ರೂಪಾಯಿ ಸಹ ಸಿಕ್ಕುವುದು" ಎಂದು ಜೋಯಿಸನು ಹೇಳಿದಾಗ, ಶಾನೆ ಸಂತೋಷಪಟ್ಟು, "ಸ್ವಾಮಿ ಜೋಯಿಸರೇ, ಇಲ್ಲೇ ಕುಳಿತುಕೊಳ್ಳಿರಿ. ವತ್ಸದ ಪ್ರತಿಮೆಯೂ ಐದು ವರಹಗಳೂ ತಮಗೆ, ಗೋವಿನ ಪ್ರತಿಮೆ ನನಗೆ, ಹೇಗೆ?" ಎಂದು ಹೇಳಿ ಜನ ಬರುತ್ತಿದೆಯೋ ಎಂದು ದಾರಿ ನೋಡುತ್ತಿರುವಾಗ ಊಳಿಗದ ತಿಮ್ಮನು ಓಡುತ್ತಾ ಬರುವುದನ್ನು ಕಂಡು, ಜೋಯಿಸನು ಒಳಗೆಹೋದನು. ತಿಮ್ಮನು ಬಂದು, "ಸಾಮಿ, ಬಟ್ಟೆರೇ, ಇತ್ತೆನೇಬರೋಡ್‌ಗೆ" (ಸ್ವಾಮಿ, ಭಟ್ಟರೇ ಈಗಲೇ ಬರಬೇಕಂತೆ) ಎಂದು ಹೇಳಲು, ಕಾಶೀನಾಥ ಭಟ್ಟನು ಕೂಡಲೇ ತ್ರಿಯಂಬಕರಾಯನಲ್ಲಿಗೆ ಬಂದು ಮುಟ್ಟಿದನು. ಅಷ್ಟರಲ್ಲಿ ವೆಂಕಪ್ಪಾಚಾರಿಯು ಎರಕ ಹೊಯಿದು ಮಾಡಿದ ಪ್ರತಿಮೆಗಳನ್ನು ತಂದುಕೊಟ್ಟನು. ದಾನ ಕೊಡಲಿಕ್ಕೆ ಹುಡುಗ ಬೇಕಿತ್ತೆಂಬ ಪ್ರಸ್ತಾಪ ಬರಲು, ಕಾಶೀನಾಥ ಭಟ್ಟನು, "ಅವಶ್ಯವಿಲ್ಲ, ಹುಡುಗನ ಹೆಂಡತಿಯು ಕೊಡುವುದು ಬಹಳ ಉತ್ತಮ" ಎಂದು ಹೇಳಿದುದರಿಂದ, ತ್ರಿಯಂಬಕರಾಯನು ಇಂದಿರೆಯ ಕೈಯಿಂದ ದಾನವನ್ನು ಕೊಡಿಸಿದನು. ಕಾಶೀನಾಥ ಭಟ್ಟನು ಆಶೀರ್ವಾದ ಕೊಟ್ಟು, ತನ್ನ ಮನೆಗೆ ತಿರಿಗಿ ಬಂದು, ಜೋಯಿಸನಿಗೆ ಮಾಡಿದ ವಾಗ್ದಾನದಂತೆ ವತ್ಸಪ್ರತಿಮೆ, ಐದು ವರಹ ಸಹ ಆತನಿಗೆ ಕೊಟ್ಟು, "ಜೋಯಿಸರೇ, ಇನ್ನೆಲ್ಲ್ಯಾದರೂ ಹೀಗೆಯೇ ಏನಾದರೂ ಬಗೆಮಾಡಬೇಕು. ತಮ್ಮನ್ನು ಮರೆಯಲಾರೆ" ಎಂದನು. "ಹಾಗಾಗಲಿ, ಸ್ವಾಮಿ" ಎಂದು ಹೇಳಿ ಜೋಯಿಸನು ಮನೆಗೆ ಹೋದನು.

## ೩೩

ಪೊಕ್ಕು ಸೆಟ್ಟಿಯು ವಿಠಲರಾಯನಿದ್ದ ಬಂಗಲಾವಿಗೆ ಮುಟ್ಟಿ ಒಳಗೆ ಹೋಗಿ ನೋಡುವಾಗ, ವಿಠಲರಾಯನು ಮಂಚದ ಮೇಲೆ ಹಾಸಿಗೆಯಲ್ಲಿ ಮಲಗಿದ್ದನು. ಗೋಕುಳಿಯು ತಲೆಯ ಹತ್ತಿರವೂ ಗುಲಾಬಿಯು ಕಾಲುಗಳ ಹತ್ತಿರವೂ ಕುಳಿತುಕೊಂಡಿದ್ದರು. ಪೊಕ್ಕು

ಸೆಟ್ಟಿಯನ್ನು ಕಂಡು ಗುಲಾಬಿಯು "ಇತ್ತ ಬಾರಪ್ಪಾ, ಇದೇನೆಂದು ನೋಡು. ಇವರ ಹೆಂಡತಿಯು ಮೈನೆರದಾಗಲೇ ನಾವಿಬ್ಬರೂ ಸಾಯುವುದಕ್ಕೆ ಹೊರಟಾಗ ಇವರೇ ನಮ್ಮನ್ನು ತಡೆದರು. ಅಂದೇ ನಾವು ಸತ್ತಿದ್ದರೆ ಲೇಸಾಗುತ್ತಿತ್ತು. ಈಗ ನೋಡು, ಎಂತಹ ಭವಣೆ ಬಂದೊದಗಿದೆ! ಇವರ ತಂದೆ, ಮಾವ, ಇವರೆಲ್ಲರೆಲ್ಲಿ? ನಾವು ಹೆಣ್ಣು ಹೆಂಗಸರು. ನಮ್ಮಿಂದೇನಾಗುವುದು? ವೈದ್ಯರನ್ನಾದರೂ ಕರೆಯಿಸಬಹುದೆಂದರೆ ನಮಗೆ ಅಂತು ಗೊತ್ತಿಲ್ಲ. ಒಂದು ವೇಳೆ ಏನಾದರೂ ಔಷಧೋಪಚಾರ ಮಾಡಿಸಿದ್ದಲ್ಲಿ ಅವುಗಳು ಸಫಲವಾಗದಿದ್ದರೆ, ನಾವೇ ಏನಾದರೂ ಮಾಡಿದೆವೆಂದು ಅಪವಾದ ಉಂಟಾಗದಿರುವುದೇ? ನಾವು ಮೊದಲೇ ಕೆಟ್ಟ ಹೆಸರಿನವರು. ಇದಕ್ಕೇನಾದರೂ ದಾರಿ ಇದ್ದರೆ ಹೇಳಪ್ಪಾ. ನಮಗೇಕೆ ಈ ಗೋಳು ಬೇಕಿತ್ತು? ನಾವೇನಾದರೂ ಇವರ ಕಾಲು ಹಿಡಿದು ದಮ್ಮಯ್ಯ ದಕ್ಕಯ್ಯವೆಂದು ಹೇಳಿ ಬಂದವರಲ್ಲ. ಇವರು ತಾನೇ ನಮ್ಮನ್ನು ಕರೆಯಿಸಿಕೊಂಡದ್ದು. ಆ ವಿದ್ಯಮಾನವನ್ನು ನೀನೆಂತೂ ಬಲ್ಲೆಯಷ್ಟೆ? ಊರಲ್ಲೆಲ್ಲರಿಗೂ ಗೊತ್ತಿದೆ. ಸುಮ್ಮಗೆ ಇವರ ಹೆಂಡತಿ ಮುಂತಾದವರಿಂದ ಶಪಿಸಿಕೊಳ್ಳುವುದಕ್ಕೆ ಮಾತ್ರ ನಾವು ಗುರಿಯಾದೆವೆಂದು ಕಾಣುತ್ತೆ. ಇವರು ಹೇಗಾದರೂ ಒಮ್ಮೆ ಈ ಸಂಕಷ್ಟದಿಂದ ಪಾರಾದರೆ ಸಾಕು; ಆ ಮೇಲೆ ನಮಗಿವರ ಸಂಗತಿಯೇ ಬೇಡ. ಒಮ್ಮೆ ಬಂದು ನೋಡಪ್ಪಾ!" ಎಂದು ಬಹಳ ವ್ಯಾಕುಲಪಟ್ಟವಳಂತೆ ಮಾತನಾಡಿ ಹತ್ತಿರಕ್ಕೆ ಕರೆದಳು. ಅವನು ಹತ್ತಿರಕ್ಕೆ ಬಂದು, "ರಾಯರೇ, ರಾಯರೇ" ಎಂದೆರಡು ಸಾರಿ ಕರೆಯಲು, ವಿಠಲರಾಯನು ಕಣ್ಣುತೆರೆದು ನೋಡಿ, ಪುನಃ ಕಣ್ಣು ಮುಚ್ಚಿದನು. ಪೊಕ್ಕು ಸೆಟ್ಟಿಯು ಅವನ ತಲೆ ಕೈಕಾಲು ಮೊದಲಾದವಯವಗಳನ್ನು ಮುಟ್ಟಿ ನೋಡಿ, ಕಠಿನ ಜ್ವರದ ಚಿಹ್ನೆಗಳನ್ನು ಕಂಡುಕೊಂಡು, "ವಿಧಿಯೆ! ಎಂತಹ ಕೊಡುಗೈಯುಳ್ಳವರು!" ಎಂದೆರಡು ಮೂರು ಸಾರಿ ಹಣೆಯ ಮೇಲೆ ಕೈಯಿಂದ ತಟ್ಟಿಕೊಂಡು, "ಗುಲಾಬಿ! ನಿನ್ನ ಮಾತುಗಳೆಲ್ಲ ಹಾಗಿರಲಿ, ನಾನು ಹೋಗಿ ಕ್ಷಣಮಾತ್ರದಲ್ಲಿ ಇವರ ತಂದೆ ಮಾವ ಮುಂತಾದವರನ್ನು ಕರೆದುಕೊಂಡು ಬರುತ್ತೇನೆ; ಮುಂದಿನ್ನು ಇವರ ಔದಾರ್ಯತೆಯ ಗುಣಾನುಭವವನ್ನು ಅನುಭವಿಸುವುದು ನಮ್ಮಗಳ ಯೋಗ್ಯತೆಯಲ್ಲಿದ್ದರೆ, ಈ ಗಂಡದಿಂದ ಪಾರಾಗುವರು. ಅಲ್ಲವಾದರೆ ಇವರಂತಹರು ಈ ನಗರದಲ್ಲಿ–ಹೂಂ, ಅದನ್ನೆಲ್ಲ ಈಗೇಕೆ ಮಾತನಾಡುವುದು? ಅವರೆಲ್ಲರ ಸಮೇತ ನಾನು ಬಂದು ಮುಟ್ಟುವ ವರೆಗೆ ನೀವಿಬ್ಬರೂ ಇವರನ್ನು ಚೆನ್ನಾಗಿ ನೋಡಿಕೊಳ್ಳಿರಿ, ಅತ್ತಿತ್ತ ಹೋಗಬೇಡಿರಿ" ಎಂದು ಹೇಳಿ, ಕೂಡಲೇ ಅಲ್ಲಿಂದ ಓಡುತ್ತಾ ತ್ರಿಯಂಬಕರಾಯನಲ್ಲಿಗೆ ಬಂದು,

"ಸ್ವಾಮಿ, ತಾವೆಲ್ಲ ಇನ್ನೂ ಇಲ್ಲಿಯೇ ಏನು ಮಾಡುತ್ತಿದ್ದೀರಿ? ಕೂಡಲೇ ವೈದ್ಯರನ್ನು ಕರೆಯಿಸಿಕೊಂಡು ಬಂಗಲಾವಿಗೆ ಹೋಗಬೇಕು. ಕಾಲಹರಣದಿಂದ ಕೇಡಿದೆ" ಎನಲು ಭೀಮರಾಯನು–

"ಏನೆಲೋ? ವಿದ್ಯಮಾನಗಳನ್ನು ಹೇಳು, ಅಸ್ವಸ್ಥವೆಂತಾದ್ದು?"

"ಅತಿ ಕಠಿನ ಜ್ವರ–"

"ಮಾತನಾಡುತ್ತಾನೆಯೇ?"

"ನಾನು ಎರಡು ಮೂರು ಸಾರಿ 'ರಾಯರೇ ರಾಯರೇ' ಎಂದು ಕರೆಯಲಾಗಿ ಒಮ್ಮೆ ಕಣ್ಣುತೆರೆದು ನೋಡಿದರು. ಆದರೆ ಮಾತನಾಡಲಿಲ್ಲ. ಪುನಃ ಕಣ್ಣುಮುಚ್ಚಿದರು. ಮಾತನಾಡುವಷ್ಟು ಸುಬೋಧವಿದೆಯೆಂದು ನಾನು ಗ್ರಹಿಸುವುದಿಲ್ಲ."

ಇದನ್ನು ಕೇಳುತ್ತಲೆ ತಾಯಿಯ ಹತ್ತಿರ ಜಗಲಿಯಲ್ಲಿ ಕುಳಿತುಕೊಂಡಿದ್ದ ಇಂದಿರೆಯು– "ಅಯ್ಯೋ! ವಿಧಿಯೇ! ನಾನೇಕಿನ್ನು ಬದುಕಿರುವುದು" ಎಂದು ಕೂಗಿ ಕಳವಳಿಸಿ ಬಿದ್ದಳು. ಒಡನೆ ತಾಯಿ ಮುಂತಾದ ಅಲ್ಲಿದ್ದ ಸ್ತ್ರೀಯರು ಅವಳನ್ನೆಬ್ಬಿಸಿ ಕುಳ್ಳಿರಿಸಿ, "ಅವ್ವಾ, ದುಃಖಪಡಬೇಡ. ಈಗಲೇ ಸವತ್ಸಗೋದಾನ ಕೊಟ್ಟಿದೆಯಷ್ಟೆ? ಜೋಯಿಸರು ಹೇಳಿದ್ದನ್ನು ನೀನು ಕೇಳಿದೆಯಷ್ಟೆ? ಬೇಕಾದ ಔಷಧೋಪಚಾರಗಳನ್ನು ಮಾಡಿಸಿ, ಹುಡುಗನ ತಲೆಯ ಮೇಲಿನ ಹೂವು ಬಾಡದಂತೆ ಜಾಗ್ರತೆ ನೋಡಿಕೊಳ್ಳುವೆವು, ಬೆದರಬೇಡ" ಎಂದು ಅಂಬಾಬಾಯಿಯು ಅವಳನ್ನು ಸಂತೈಸುವಷ್ಟರಲ್ಲಿ ಭೀಮರಾಯನು ಅಲ್ಲಿಗೆ ಬಂದು, "ಮಗುವೇ, ಕನ್ಯಾಶಿಖಾಮಣಿಯೇ, ಕಳವಳಿಸಬೇಡ, ಸಾವಿರಕಟ್ಲೆಯಿಂದಾದರೂ ಖರ್ಚುಮುಟ್ಟಿಸಿ ನಿನ್ನ ಗಂಡನನ್ನು ಈ ಸಂಕಷ್ಟದಿಂದ ಪಾರುಮಾಡಿಸುವೆನು; ಧೈರ್ಯವೇ ಜಯ; ಪ್ರಮೀಳೆಯ ಪ್ರಸಂಗ ಕೇಳಿದ್ದೆಯಷ್ಟೆ? ವೃಥಾ ಕಂಗೆಡಬೇಡ, ಧೈರ್ಯದಿಂದಲೂ ಸಂತೋಷದಿಂದಲೂ ಇರು" ಎಂದು ಬೆನ್ನಿನ ಮೇಲೆ ಕೈಯಿಂದ ಒಂದೆರಡು ತಟ್ಟಿ, ತ್ರಿಯಂಬಕರಾಯನೊಡನೆ,

"ಕೇಳಲಿಲ್ಲವಲ್ಲ, ನಾವು ಇನ್ನು ಇಲ್ಲಿ ಸಮಯ ಕಳೆಯುವುದು ತರವಲ್ಲ. ವೈದ್ಯರನ್ನೀಗಲೇ ಕರೆಯಿಸೋಣಾಗಲಿ."

"ರಾಯರೇ, ಯಾವ ವೈದ್ಯನಾಗಬಹುದು? ತಕ್ಕಡಿ ವೆಂಕಟರಾಯನೋ, ರಾಮಕುಟ್ಟಿ ಪಂಡಿತನೋ?"

"ಇದಕ್ಕೆ ತಕ್ಕಡಿ ವೆಂಕಟರಾಯನೇ ಬೇಕೆಂದು ಕಾಣುತ್ತೆ; ಏಕೆಂದರೆ ಕಳೆದ ವರುಷ ಹನುಮಂತರಾಯನಲ್ಲಿ ಅವನ ಅಡಿಗೇಭಟ್ಟನಿಗೆ ಹೀಗೆಯೇ ಆಗಿತ್ತು. ವೆಂಕಟರಾಯನ ಔಷಧಿಯಿಂದಲೇ ಗುಣವಾಯಿತು; ನಾಡಿ ಪರೀಕ್ಷೆಯಲ್ಲಿ ಬಹು ಪ್ರವೀಣನು. ನಾಡಿಹಿಡಿದು ನೋಡಿದ ಕ್ಷಣದಲ್ಲೇ ರೋಗವಿಂಥಾದ್ದೆಂದು ನಿಶ್ಚಯಿಸಿಬಿಡುವನು; ಅಷ್ಟಾಂಗ ಹೃದಯವೆಂಬುದು ಆತಗೆ ಕರತಳಾಮಲಕವಲ್ಲವೇ?"

"ಇತ್ತಲಾಗಿ ಇಲ್ಲೊಬ್ಬ ಹೊಸ ಪಂಡಿತ ಬಂದಿದ್ದಾನಂತೆ. ಅವನ ಹತ್ತಿರ ಥರ್ಮಮೇಸ್ತ್ರಿ ಎಂಬ ಒಂದು ಗಾಜಿನ ನಳಿಗೆ ಇದೆಯಂತೆ. ಅದರಲ್ಲಿ ಪಾದರಸವೊ ಸಿದ್ಧರಸವೊ ಏನೋ ಇದೆಯಂತೆ. ಆ ನಳಿಗೆಯನ್ನು ರೋಗಿಯ ಬಾಯಿಯಲ್ಲಿ ಅಥವಾ ಕಂಕುಳಲ್ಲಿ ಕೆಲವು ನಿಮಿಷಗಳ ವರೆಗೆ ಇಟ್ಟು ಆ ಮೇಲೆ ತೆಗೆದುನೋಡಿ, ಜ್ವರ ಇಂತಿಷ್ಟೇ ಇದೆ ಎಂದು ನಿಶ್ಚಯಿಸಿಬಿಡುತ್ತಾನಂತೆ."

"ಅಯ್ಯೋ! ಬೇಡ; ರಾಯರೇ, ಅವನನ್ನು ಕರೆಯಿಸುವುದು ಬೇಡ! ಆ ನಳಿಗೆಯೆಂದರೇನೆಂದು ನಾನು ತಿಳಿಯದ್ದೇ? ಜಾತಿ ಕೆಡಿಸುವುದಕ್ಕೆ ಪಾದ್ರಿಗಳು ಮಾಡಿದ

ಕುಯುಕ್ತಿಯಲ್ಲದೆ ಬೇರೇನಲ್ಲ. ಮ್ಲೇಂಛರ ಬಾಯಿಯಲ್ಲಿಟ್ಟ ನಳಿಗೆಯನ್ನು ನಮ್ಮ ಬಾಯಿಯಲ್ಲಿಯೂ ಇಟ್ಟಮೇಲೆ ಜಾತಿಯೆಲ್ಲಿ? ಅದಲ್ಲದೆ ಅದರೊಳಗಿರುವುದೆಂಬ ರಸವು ಪಾದರಸವೂ ಅಲ್ಲ, ಸಿದ್ಧರಸವೂ ಅಲ್ಲ, ಬರೇ ಗೋಮಾಂಸದ ಸತ್ವವಲ್ಲವೇ? ಅದನ್ನು ಮೆಲ್ಲಗೆ ನಮ್ಮ ಬಾಯಿಯಲ್ಲಿ ಹಾಕಬೇಕೆಂದು ಮಾಡಿದ ಕುಯುಕ್ತಿ ತಾನೇ. ಅಯ್ಯೋ! ಈ ಪಾದ್ರಿಗಳಿಗೆ ದೇವರು ಯಾವ ಸ್ಥಳವನ್ನು ನಿಶ್ಚಯಿಸಿಟ್ಟಿದ್ದಾನಪ್ಪಾ!"

"ಹೌದೆ! ಏನೇನೆಲ್ಲ ಕುಯುಕ್ತಿಗಳು! ಆ ವೈದ್ಯನ ಹತ್ತಿರ ಸೆಟ್ಟಿಯ ಕೋಪವೆಂಬ ಚೀನೀ ಬಜಂತರಿಯಂತೆ ಕಾಣಿಸುವ ಮತ್ತೊಂದು ಸಾಧನವಿದೆಯಂತೆ. ಅದರ ಗುಟ್ಟೇನು ಬಲ್ಲಿರಾ?"

"ಅದೋ? ಅದು ಮಂಕುಬೂದಿ ಹಚ್ಚುವ ಪಾದ್ರಿಗಳ ಮತ್ತೊಂದು ಕುಯುಕ್ತಿ. ಏನಾದರೂ ಅಸ್ವಸ್ಥವೆಂದಾಗ ಅದನ್ನು – ಅಯ್ಯೋ! ಆ ಕರ್ಮವನ್ನು ಬಾಯಿಂದುಚ್ಚರಿಸುವುದೇ ಅಧರ್ಮ! ಹೇಗೂ ಆಗಲಿ, ಅಂತಹರ ತಳ್ಳಿಯೇ ನಮಗೆ ಬೇಡ."

"ಹಾಗಾದರೆ ತಕ್ಕಡಿ ವೆಂಕಟರಾಯನನ್ನೇ ಕರೆದುತರುವುದಕ್ಕೆ ಜನ ಬಿಡಲೇ?"

"ಬಿಟ್ಟುಬಿಡಿರಿ" ಎನಲು, ತ್ರಿಯಂಬಕರಾಯನು ತಿಮ್ಮನನ್ನು ಕೂಡಲೇ ಕಳುಹಿಸಿದನು. ವೆಂಕಟರಾಯನು ಒಡನೆ ಬಂದು ಮುಟ್ಟಿದನು. ಭೀಮರಾಯನು ವೈದ್ಯನನ್ನು ನೋಡಿ, "ಬನ್ನಿರೈಯಾ, ಅನುಪತ್ಯಕ್ಕೆ ಬೇಕಾದ ಔಷಧಿಗಳನ್ನೆಲ್ಲ ತಂದಿದ್ದೀರಷ್ಟೆ?" ಎಂದು ಕೇಳಲು, ಅವನು,

"ಅಂಜನ, ಚೂರ್ಣ, ಭಸ್ಮ, ಮಾತ್ರೆ, ರಸಾಯನ, ಘೃತ, ಕರ್ತಗುಳಿಗೆ, ಮರ್ಮ ಗುಳಿಗೆ, ಪಾಷಾಣ ದ್ರಾವಕ, ಜ್ವರಾಂತಕ ತೈಲ, ಇವೆ ಮುಂತಾದ ಅಷ್ಟಾಂಗ ಹೃದಯದಲ್ಲಿ ಹೇಳಿರುವ ಸಕಲ ಔಷಧಿಗಳನ್ನು ತಂದಿದ್ದೇನೆ. ರೋಗಿಯೆಲ್ಲಿ?"

"ಹೇಳುತ್ತೇನೆ ಕೇಳಿರಿ, ಕುಳಿತುಕೊಳ್ಳಿರಿ."

ತ್ರಿಯಂಬಕರಾಯನನ್ನು ಕುರಿತು, "ರಾಯರೇ, ಇನ್ನು ನಾವು ಬಂಗಲಾವಿಗೆ ಹೋಗೋಣ, ಹೇಗೆ?"

"ಹಾಗಾಗಲಿ, ಸಮಯವು ನಿಲ್ಲುವುದಿಲ್ಲವಷ್ಟೆ?"

ಆ ಮೇಲೆ ಭೀಮರಾಯ, ತ್ರಿಯಂಬಕರಾಯ, ವೆಂಕಟರಾಯ, ಪೊಕ್ಕು ಸೆಟ್ಟಿ ಇವರು ನೆಲ್ಲೂರ ಎತ್ತುಗಳ ಸಾರೋಟಿನಲ್ಲಿ, ಅಂಬಾಬಾಯಿ, ಚಂದ್ರಭಾಗಿ, ಇಂದಿರೆ ಇವರು ಮತ್ತೊಂದು ಸಾರೋಟಿನಲ್ಲಿ ಸಹ ಕುಳಿತುಕೊಂಡು, ವಿಠಲರಾಯನಿದ್ದ ಬಂಗಲಾವಿಗೆ ಹೋಗುವುದಕ್ಕೆ ಸಾರೋಟುಗಳನ್ನು ತಿರಿಗಿಸಿ ಹೆಬ್ಬಾಗಿಲ ಬಳಿಯ ಮುಟ್ಟುವಾಗ, ವಿದ್ಯಮಾನಾನುಸಾರವಾಗಿ ಚೂರ್ಣಭಾಂಡವೆಂಬಂಕಿತ ನಾಮವನ್ನು ಧರಿಸಿದ ಪಾರ್ವತಿ ಎಂಬ ವಿಧವೆಯು ತಲೆಯ ಮೇಲೆ ಸೀರೆಯ ಸೆರಗಿಲ್ಲದೆ ಅಭಿಮುಖವಾಗಿ ಬರಲು ಭೀಮರಾಯನು, "ಅಯ್ಯೋ! ಈ ಅವಲಕ್ಷಣದ ಮುಂಡೆ ಎಲ್ಲಿಂದ ಬಂದಳಪ್ಪಾ! ಯಾವುದೊಂದು ಕೆಲಸಕ್ಕಾದರೂ ಹೊರಟುಹೋಗುವಾಗ ಈಕೆ ಎದಿರಾಗಿ ಬಂದರೆ, ಆ ಕೆಲಸ ಕೈಗೂಡುವುದಂಟೇನಪ್ಪಾ! ಹಿಂತಿರಿಗಿ ಮನೆಗೆ ಹೋಗಿ, ತುಸು ಕುಳಿತುಕೊಂಡು, ಪುನಃ

ಹೊರಡುವುದೇ ಇದರ ನಿವೃತ್ತಿ" ಎಂದು ಹೇಳಲಾಗಿ, ಎಲ್ಲರೂ ಮರಳಿ ಮನೆಗೆ ಬಂದು ಐದು ನಿಮಿಷ ಪರ್ಯಂತರ ಕುಳಿತಿರುವಾಗ ಭೀಮರಾಯನು ಆ ಅವಲಕ್ಷಣದ ಸ್ತ್ರೀಗೆ ಕಂಡಾಬಟ್ಟೆ ಬೈದು ಆಮೇಲೆಲ್ಲರೂ ಪುನಃ ಎದ್ದು ಸಾರೋಟು ಹತ್ತಿ ಬಂಗಲಾವಿಗೆ ಬಂದು ಮುಟ್ಟಿದರು.

## ೩೪

ಭೀಮರಾಯನೇ ಮೊದಲಾದ ಗಂಡಸರೂ ಹೆಂಗಸರೂ ಸಾರೋಟಿನಿಂದ ಕೆಳಗಿಳಿದು ಬಂಗಲಾದೊಳಗೆ ಬರುತ್ತಿರುವುದನ್ನು ಗುಲಾಬಿ, ಗೋಕುಳಿ ಇವರು ಕಂಡು, ವಿಠಲರಾಯನನ್ನು ಮಂಚದಲ್ಲಿ ಬಿಟ್ಟು ಕೆಳಗಿಳಿದು ಅಂಬಾಬಾಯಿ ಇದ್ದಲ್ಲಿಗೆ ಹೋಗಿ, ಗುಲಾಬಿಯು, "ಅಮ್ಮಾ, ನಮ್ಮ ಜನ್ಮವೇ ನಿಮ್ಮಂತಹರಿಂದ ಶಪಿಸಿಕೊಳ್ಳುವುದಕ್ಕಿದ್ದದ್ದು. ಪರರ ಶಾಪಗಳಲ್ಲಿ ತಾನೇ ನಮ್ಮ ಜೀವವಿರುವುದು. ಹೇಗೂ ಇಷ್ಟು ದಿವಸ ಅವರ ಆಶ್ರಯದಲ್ಲಿ ಜೀವಿಸಿದೆವು. ಮುಂದೆ ದೇವರು ನಮಗೆ ಯಾವ ಗತಿಯನ್ನು ನಿಶ್ಚಯಿಸಿದ್ದಾನೋ ತಿಳಿಯದು. ಅವರಿಗೆ ಈ ಜ್ವರ ಪ್ರಾಪ್ತಿಯಾದಂದಿನಿಂದ ಈ ವರೆಗೆ ನಾವು ನಿರಾಹಾರಿಗಳಾಗಿದ್ದೇವೆ. ಅವರಿಗಂತೂ ಇಷ್ಟು ನೀರನ್ನಾದರೂ ಕೊಡಲಿಲ್ಲ; ಏಕೆಂದು ಕೇಳುತ್ತೀರಾ? ಕೆಟ್ಟದ್ದು ಮುಂದಾಗಿ ಒಳ್ಳೇದು ಹಿಂದಾಗಿ ಬರುವುದೆಂದು ಹಿರಿಯರ ಮಾತಿದೆ. ನಾವು ಮಾಡಿದ ವೈದ್ಯ ಅಥವಾ ಕೊಡಿಸಿದ ಆಹಾರ ಸಫಲವಾಗದಿದ್ದ ಪಕ್ಷದಲ್ಲಿ– ಮೊದಲೇ ನಾವು ಹಿಂಗು ಕಟ್ಟಿದ ಬಟ್ಟೆಗಳಷ್ಟೆ– ನಾವೇ ಕೊಂದುಬಿಟ್ಟೆವೆಂದು ಲೋಕಾಪವಾದ ಬರುವುದೆಂದು ಹೆದರಿ, ಯಾವ ಕೆಲಸಕ್ಕೂ ನಾವು ಹೋಗಲಿಲ್ಲ. ಈಗ ನೀವೆಲ್ಲರೂ ಬಂದಿರಷ್ಟೆ? ಇನ್ನು ನಿಮ್ಮ ಒಡವೆ ನಿಮ್ಮ ಹತ್ತಿರ" ಎಂದು ಹೇಳಿ, ಯಾವುದೊಂದೂ ಉತ್ತರ ಸಿಕ್ಕುವ ಮೊದಲೇ ಸುಟುಸುಟೆಂದು ನಡೆದು ತಂತಮ್ಮ ಮನೆಗಳಿಗೆ ಹೋದರು. ಇಂದಿರೆಯು ಈ ಮಾತುಗಳನ್ನು ಕೇಳಿ ನಿಟ್ಟುಸಿರಿಡುತ್ತಾ, ಮುಂದುವರಿಸಿ ಹೋಗಿ, ಮಂಚವೇರಿ ಗಂಡನ ಕಾಲಡಿಗಳ ಕೆಳಗೆ ತನ್ನ ತಲೆಯನ್ನಿಟ್ಟು ಮಲಗಿಕೊಂಡಳು. ಭೀಮರಾಯ, ಅಂಬಾಬಾಯಿ ಸಹ ಎಷ್ಟು ಹೇಳಿದರೂ ಕೇಳದೆ, ಅಲ್ಲೇ ಬಿದ್ದುಕೊಂಡಳು. ತ್ರಿಯಂಬಕರಾಯನು ಹುಡುಗನನ್ನು ನೋಡಿ, "ವಿಠಲಾ! ವಿಠಲಾ!" ಎಂದನೇಕಸಾರಿ ಕರೆದರೂ ಆತನು ಉತ್ತರವೇನೂ ಕೊಡದೆ, ಒಂದು ಸಾರಿ ಮಾತ್ರ ಕಣ್ಣು ತೆರೆದುನೋಡಿ, ಪುನಃ ಮುಚ್ಚಿದನು. ಭೀಮರಾಯನು "ವೈದ್ಯರೇ, ಸಮಯ ಕಳೆಯಬೇಡಿರಿ. ಚೆನ್ನಾಗಿ ಪರೀಕ್ಷೆಮಾಡಿ ಸಂಜೀವನದಂತಿರುವ ಔಷಧಿಯನ್ನು ಕೊಡಿರಿ" ಎನ್ನಲು, ಆತನು ಹುಡುಗನ ಮೈಮುಟ್ಟಿ ನೋಡಿ, ನಾಡಿಯನ್ನು ಹಿಡಿದು ಐದು ನಿಮಿಷದವರೆಗೆ ಪರೀಕ್ಷಿಸಿ ಕೋಸುಗಣ್ಣಿನಿಂದ ತುಸು ಆಲೋಚಿಸಿ, "ರಾಯರೇ, ರೋಗದ ಮರ್ಮವೆಲ್ಲ ಗೊತ್ತಾಯಿತು. ಇದು ಕಾಲಜ್ವರ. ಪ್ರಥಮತಃ ಒಂದಷ್ಟು ಸ್ವರ್ಗಾಂಜನವನ್ನು ಕಣ್ಣುಗಳಿಗೆ ಹಚ್ಚುತ್ತಲೆ ಮೈಕೈ ಅಲ್ಲಾಡಿಸಿ ತೆಪ್ಪಗಾಗಿ ಕರೆದರೆ ಮಾತನಾಡುವನು. ಆ ಮೇಲೆ ಜ್ವರಾಂತಕ ತೈಲವನ್ನು ಸ್ವಲ್ಪ

ಹೊಟ್ಟೆಯಲ್ಲಿ ಕೊಟ್ಟು ಸ್ವಲ್ಪ ತಲೆಗೂ ಇಡಬೇಕು. ಎರಡು ಗಳಿಗೆಯೊಳಗೆ ಎಲ್ಲಾ ನೆಟ್ಟಗಾಗುವುದು. ಬೇಗನೆ ಒಂದಿಷ್ಟು ಹಸಿಶುಂಠಿಯ ರಸವನ್ನು ಮಾಡಿಸಿಕೊಡಿರಿ" ಎಂದನು.

ಇದನ್ನು ಕೇಳಿ ಇಂದಿರೆಯು ತಂದೆಯನ್ನು ಕರೆದು, ಕಣ್ಣೀರು ಸುರಿಸುತ್ತಾ, "ಅಪ್ಪಯ್ಯಾ, ಇವರಿಗೆ ಎರಡು ಮೂರು ದಿವಸಗಳಿಂದ ಅನ್ನಪಾನವಿಲ್ಲದ ಅಶಕ್ತಿಯೊಂದು, ಕಠಿನ ಜ್ವರದ ಅಶಕ್ತಿಯೊಂದು ಹೀಗೆ ಅಪರಿಮಿತ ಅಶಕ್ತಿಯಲ್ಲಿರುವಾಗ ಬಹು ಕಠಿನವಾದ ಅಂಜನ ಹಾಕುವುದೂ, ಸರ್ವಾಂಗವೂ ಕಾದುಹೋಗಿ ಅನ್ನಕೋಶದಲ್ಲಿ ಏನೂ ಇಲ್ಲದಿರುವಾಗ ಎಣ್ಣೆ ಕೊಡುವುದೂ ಯೋಗ್ಯವೆಂದು ವೈದ್ಯರಿಗೆ ಕಾಣುತ್ತಿದೆಯೋ ಏನೋ, ನನ್ನ ಬುದ್ಧಿಗೆ ಹಾಗೆ ಕಾಣುವುದಿಲ್ಲ. ಒಂದು ವೇಳೆ ನನ್ನ ಗ್ರಹಿಕೆ ತಪ್ಪಾಗಿರಬಹುದು. ಅದು ಹೇಗಿದ್ದರೂ ಡಾಕ್ತರ್ ದೊರೆಯನ್ನು ಕರೆಯಿಸಿ, ಅವರ ಆಲೋಚನೆ ಸಹ ತೆಗೆದುಕೊಂಡು ಮುಂದುವರಿಸುವುದು ಯೋಗ್ಯವೆಂದು ನಾನಭಿಪ್ರಾಯಪಡುತ್ತೇನೆ. ಹಾಗೆ ಮಾಡಿದರಾಗದೇ ಅಪ್ಪಯ್ಯಾ? ಈ ವೈದ್ಯರು ಬೇಕಾದರೆ, ಇಲ್ಲೇ ಇರಲಿ. ಇವರ ಸಹಾಯವು ಬೇಕಾದರೆ ಪಡೆಯಬಹುದಷ್ಟೆ" ಎಂದು ವ್ಯಾಕುಲತೆಯಿಂದ ಹೇಳಿಕೊಳ್ಳಲು ಭೀಮರಾಯನು–"ಅಮ್ಮಣ್ಣೀ, ನೀನು ಚಿಕ್ಕಪ್ರಾಯದವಳು. ನಿನಗಿಂತಹ ಕಾರ್ಯಗಳ ಗೊತ್ತೆಲ್ಲಿನದು? ಮ್ಲೇಂಛನಾದ ಸರದಾರನು ಶಾನೆ ಸಂಬಳ ತಿಂದು 'ದೊರೆ' ಎಂದೆನ್ನಿಸಿದೊಡನೆ ವೈದ್ಯನಾದಾನೇ? ಹೊಟ್ಟೆ ಬೆಳೆದರೆ ಗೌಡನಾದಾನೇ? ನೀನು ಬಾಲತನದ ಬುದ್ಧಿಯಿಂದ ಮಾತನಾಡುವೆ. ಒಂದೆರಡು ಗಳಿಗೆಯೊಳಗೆ ಜ್ವರ ನಿಲ್ಲಿಸಿ, ಸ್ವಸ್ಥ ಮಾಡಿಕೊಡುವುದಾಗಿ ವೈದ್ಯರು ಹೇಳುತ್ತಾರೆ. ಇಂಗ್ರೇಜಿಯವರ ವೈದ್ಯದಿಂದ ಪ್ರಯೋಜನವೇನೂ ಇಲ್ಲ. ನಾವೆಲ್ಲ ನೋಡಿದ್ದೇ ಅಲ್ಲವೇ? ಅಮ್ಮಣ್ಣೀ, ನೀನು ಛಲಹಿಡಿಯಬಾರದಷ್ಟೆ. ನಿನ್ನ ಎದಿರಿನಲ್ಲೇ ಈಗ ಔಷಧಿಗಳನ್ನು ಕೊಟ್ಟು ಗುಣಮಾಡಿಸುವ ಬಗೆಯನ್ನು ನೋಡು" ಎಂದನು. ಆದರೂ ಇಂದಿರೆಗೆ ಮನಸ್ಸಿಗೆ ಸಮಾಧಾನವಾಗದೆ, ತನ್ನಲ್ಲಿ ತಾನೇ ಆಲೋಚಿಸುತ್ತಿರುವಾಗ, ವೆಂಕಟರಾಯನು ಭೀಮರಾಯನೊಡನೆ, "ರಾಯರೇ, ಈ ಕಾರ್ಯದಲ್ಲಿ ಉತ್ತರವಾದವು ಅಪರಿಮಿತವಿದೆ. ಇಂತಹ ಸಂಗತಿಗಳಲ್ಲಿ ನಾನು ಇದಕ್ಕೆ ಮುಂಚೆ ಅನೇಕ ಕಡೆಯಲ್ಲಿ ಔಷಧಿಗಳನ್ನು ಕೊಟ್ಟು ಗುಣಪಡಿಸಿದ್ದೇನೆ. ಮತ್ತೊಂದು ಸಂಗತಿ ಇದೆ, ನೋಡಿರಿ, ಯಾವ ರೋಗವಾದರೂ ಔಷಧೋಪಚಾರಗಳಿಂದ ಗುಣವಾಗುತ್ತದೆಂದು ಹೇಳುವುದು ಸುಳ್ಳುಮಾತು. ಗುಣಾಂಶ ಸಿಕ್ಕುವುದೇ ಹಸ್ತಲಕ್ಷಣದಿಂದಾಗಿರುತ್ತೆ. ಇಕ್ಕೊಳ್ಳಿರಿ, ಇತ್ತ ಬರ್ರಿ, ನನ್ನ ಈ ಬಲದ ಅಂಗೈಯಲ್ಲಿ ಮಣಿಕಟ್ಟಿನ ಮಧ್ಯದಿಂದ ಹೊರಟು ಅಂಗುಷ್ಟದ ವರೆಗೆ ಹೋದ ರೇಖೆಯು ಮಧ್ಯದಲ್ಲೆಲ್ಲಿಯೂ ತುಂಡಾಗದೆಯೂ ಅದರ ಉಭಯ ಕಡೆಗಳಲ್ಲಿಯೂ ಸಮೀಪದಲ್ಲಿಯೂ ಬೇರೆ ರೇಖೆಗಳಿಲ್ಲದೆಯೂ ಸ್ವಮೇಧಿಯಾಗಿಹೋಗಿದೆ. ಈ ರೇಖೆಗೆ ಧನ್ವಂತರಿ ಎಂಬ ಹೆಸರಿದೆ. ಈ ರೇಖೆಯಿಂದುಂಟಾಗುವ ಅದ್ಭುತ ಕಾರ್ಯಗಳ ವಿಷಯವು ಹಸ್ತಸಾಮುದ್ರಿಕೆ ಎಂಬ ಶಾಸ್ತ್ರದಲ್ಲಿ ಸವಿಸ್ತಾರವಾಗಿ ಹೇಳಲ್ಪಟ್ಟಿದೆ. ವಿವರಿಸಿ ಹೇಳಲೀಗ ಸಮಯವಿಲ್ಲ. ಈ ರೇಖೆಯುಳ್ಳ ಕೈಯಿಂದ ರೋಗಿಯ ಹೊಟ್ಟೆಯಲ್ಲಿ ಪಾಷಾಣವನ್ನೇ ಬೇಕಾದರೆ ಕೊಡಲಿ,

ಅದು ಅಮೃತ ಸಂಜೀವನವಾಗುವುದು. ಈಗ ರೋಗಿಗೆ ನನ್ನ ವೈದ್ಯವನ್ನೇ ಮಾಡಿಸಬೇಕೆಂಬುದರಿಂದ ನಾನು ಹೀಗೆಲ್ಲ ಹೇಳುವುದೆಂದು ತಿಳುಕೊಳ್ಳಬೇಡಿರಿ. ತಮ್ಮ ಮನಸ್ಸು ಇದ್ದಂತೆ ಪ್ರವರ್ತಿಸುವಲ್ಲಿ ನನ್ನ ಆಕ್ಷೇಪವೇನೂ ಇಲ್ಲ. ರಾಯರೇ, ನನಗೆ ಸದಾಶಿವರಾಯರಲ್ಲಿಂದ ಜನ ಬಂದಿತ್ತು. ಹೋಗಲೇ?'' ಎಂದು ಕೇಳಿ ಔಷಧಿಗಳಿದ್ದ ಚೀಲವನ್ನು ಎತ್ತಿ ಹೆಗಲ ಮೇಲಿಟ್ಟುಕೊಂಡನು. ಆಗ ಭೀಮರಾಯನು, ``ವೈದ್ಯರೇ, ಚಿಕ್ಕ ಹುಡುಗಿಯ ಮಾತುಗಳನ್ನು ಕೇಳಿ ನೀವು ಏನೇನೆಲ್ಲ ಮಾತನಾಡುವುದು ಸರಿಯೇ? ಈ ಕಾರ್ಯವು ನಿಮ್ಮಿಂದಲೇ ಆಗಬೇಕು'' ಎಂದುತ್ತರ ಕೊಡಲು ಇಂದಿರೆಯು ``ಅಪ್ಪಯ್ಯಾ, ಇರಲಿ! ನನ್ನ ಒಂದು ಮಾತು ನಡಿಸಿಕೊಡಬಾರದೇ? ಡಾಕ್ತರ್ ದೊರೆಯನ್ನು ಕರೆಯಿಸಿಕೋ. ನಾನು ಜೀವಿಸಿದ್ದರೆ ನನ್ನಿಂದೇನಾದರೂ ಪ್ರಯೋಜನವಾಗದೇ? ನಾನು ಎಷ್ಟು ಹೇಳಿಕೊಂಡರೂ ನಿನ್ನ ಮನಸ್ಸು ಕರಗುವುದಿಲ್ಲವೇಕೆ? ಡಾಕ್ತರ್ ದೊರೆಯನ್ನು ಕರೆಯಿಸಿ ವೈದ್ಯಮಾಡಿಸಿ, ಹೇಗೂ ನನ್ನ ಕುಂಕುಮದ ಭಾಗ್ಯವನ್ನುಳಿಸಿಕೊಡು. ಸೆರಗೊಡ್ಡಿ ಬೇಡುತ್ತೇನೆ'' ಎಂದು ಪ್ರಳಾಪಿಸಿದಳು. ಆಗ ಭೀಮರಾಯನು ತ್ರಿಯಂಬಕರಾಯನೊಡನೆ ಆಲೋಚಿಸಿ ಡಾಕ್ತರ್ ದೊರೆಯನ್ನು ಕರೆದುತರುವುದಕ್ಕೆ ನೆಲ್ಲೂರ ಎತ್ತಿನ ಸಾರೋಟನ್ನು ಕಳುಹಿಸಿ, ``ವೈದ್ಯರೇ, ನೀವು ಹೋಗಬಾರದು. ಡಾಕ್ತರ್ ಸಾಹೇಬರು ಬಂದು ವೈದ್ಯಮಾಡಿದರೂ ನೀವು ಬೇಕೇ ಬೇಕು'' ಎಂದು ಹೇಳಿ ಕುಳ್ಳಿರಿಸಿದನು. ಡಾಕ್ತರ್ ದೊರೆಯು ಆ ಸಮಯದಲ್ಲಿ ಒಬ್ಬ ಹೆಂಗಸಿನ ಗರ್ಭದಲ್ಲೇ ಮೃತವಾದ ಮಗುವನ್ನು ಹೊರಗೆ ತೆಗೆಯುವ ಅತ್ಯವಸರವಿದ್ದ ಕೆಲಸದ ಮೇಲಿದ್ದುದರಿಂದ ತಾನು ನಾಲ್ಕು ತಾಸುಗಳ ನಂತರ ಅವಶ್ಯವಾಗಿ ಬರುವೆನು, ಈಗಲೇ ಸಂದರ್ಭವಿಲ್ಲವೆಂದು ಹೇಳಿಕಳುಹಿಸಿದನು. ಆಗ ಭೀಮರಾಯನು, ``ಇನ್ನು ಹೆಂಗಸರೆಲ್ಲ ಇಲ್ಲಿದ್ದು ಪ್ರಯೋಜನವಿಲ್ಲ. ಮನೆಗೆ ಹೋಗಿ ಊಟ ತೀರಿಸಿ ಸ್ವಸ್ಥವಾಗಿದ್ದುಕೊಂಡಿರಲಿ. ಇಂದಿರೇ, ನಿನ್ನಪೇಕ್ಷೆ ಪ್ರಕಾರವೇ ಮಾಡಿಸುತ್ತೇನೆ. ಮನೆಗೆ ಹೋಗಮ್ಮಣ್ಣಿ'' ಎಂದು, ಅವರೆಲ್ಲರನ್ನು ಮನೆಗೆ ಕಳುಹಿಸಿಕೊಟ್ಟನು. ಆದರೂ ಇಂದಿರೆಯು ಸ್ವಸ್ಥ ಮನಸ್ಸಿಲ್ಲದೆ, ತಾಯಿಯು ಎಷ್ಟು ಸಮಜಾಯಿಸಿದರೂ ಕೇಳದೆ, ಊಟ ಬಿಟ್ಟು, ಶಾನೆ ಚಿಂತೆಯಿಂದ ಒಂದು ಕೋಣೆಗೆ ಹೋಗಿ ನೆಲದಲ್ಲಿ ಮಲಗಿಕೊಂಡಳು.

## ೩೫

ಸ್ತ್ರೀಯರು ಮನೆಗೆ ಹೋದ ತರುವಾಯ ಭೀಮರಾಯ, ತ್ರಿಯಂಬಕರಾಯ, ಪೊಕ್ಕು ಸೆಟ್ಟಿ, ವೆಂಕಟರಾಯ ಇವರೆಲ್ಲರೂ ಒಟ್ಟಾಗಿ ಸೇರಿ, ಭೀಮರಾಯನು ತ್ರಿಯಂಬಕರಾಯನೊಡನೆ–

``ಈಗ ಹೇಗೆ ರಾಯರೇ? ಮಾತುಗಳಲ್ಲಿಯೂ ತರ್ಕಗಳಲ್ಲಿಯೂ ಸಮಯ ಕಳೆದರೆ ಏಕಾದೀತು? ಹುಡುಗನ ಸ್ಥಿತಿಯನ್ನು ಆಲೋಚಿಸಿರಿ. ಡಾಕ್ತರ್ ಸಾಹೇಬರಂತೂ ಇನ್ನು ನಾಲ್ಕು ತಾಸುಗಳವರೆಗೆ ಬರುವಹಾಗಿಲ್ಲ. ಆ ಮೇಲೆ ಬಂದರೂ ಅವರು ಹೇಳುವುದು ನಮಗೆ ತಿಳಿಯದು. ನಾವು ಹೇಳುವುದು ಅವರಿಗೆ ತಿಳಿಯದು. `ಎರಡು ದೇವರ ನಂಬಿ ಕುರುಡ

ದಾಸ ಕೆಟ್ಟ' ಎಂಬ ಗಾದೆಯಂತೆ ಡಾಕ್ತರ್ ಸಾಹೇಬರು ಬೇಗನೆ ಬರುವ ಹಾಗೂ ಇಲ್ಲ, ವೆಂಕಟರಾಯರ ವೈದ್ಯಮಾಡಿಸಲಿಕ್ಕೂ ಉಪಾಯವಿಲ್ಲ. ಮುಂದೇನು ಮಾಡೋಣ?"

ತ್ರಿಯಂಬಕರಾಯ– "ರಾಯರೇ, ನನ್ನ ವಿಷಯವನ್ನು ನಾನು ಮೊದಲೇ ತಮಗರಿಕೆ ಮಾಡಿದ್ದೇನಷ್ಟೆ. ನನಗಿದೆಲ್ಲ ಕಗ್ಗಂಟಿನಂತಾಗಿ ಬುದ್ಧಿಗೆ ಏನೊಂದೂ ಸೂಚಿಸುವುದಿಲ್ಲ. ನಾಳೆ ಶುಕ್ರವಾರ ದಿವಸ ಮಾರಮ್ಮನ ಗುಡಿಯಲ್ಲಿ ಹತ್ತು ಕೋಣಗಳನ್ನು ಬಲಿ ಕೊಡಿಸುವುದೆಂದು ಹರಿಕೆ ಹೇಳಿಕೊಂಡಿದ್ದೇನೆ. ಆ ಪ್ರಕಾರ ಕೊಡಿಸುತ್ತೇನೆ, ದಿಟವೇ. ಹುಡುಗನಿಗೆ ಇತ್ತಲಾಗಿ ಬಂದ ದುರ್ಬುದ್ಧಿ, ಈಗ ಸಂಭವಿಸಿದ ಕಷ್ಟ ಸಹ ನೋಡಿ ಆಲೋಚಿಸಿದರೆ, ನಮ್ಮ ಶತ್ರುಗಳು ಯಾರೋ ನಮಗೆ ಮಾಟ ಮಾಡಿದ್ದಾರೆಂದು ಗ್ರಹಿಸುತ್ತೇನೆ. ನಾಳೆ ಬಲಿ ಅರ್ಪಿಸಿದ ನಂತರ ದರ್ಶನೆಯಲ್ಲಿ ಆ ಮಹಾದೇವಿಯ ಹತ್ತರ ಕೇಳದೆ ಇದ್ದೇನೇ? ವೈದ್ಯೋಪಚಾರಗಳು ನಡೆಯುವುದು ನಡೆಯಲಿ."

"ಅದಲ್ಲ ರಾಯರೇ, ಎರಡು ವೈದ್ಯರೆಂತ ಮಾಡಿಕೊಂಡು ತತ್ಕಾಲಕ್ಕೆ ಒಬ್ಬನ ವೈದ್ಯವಾದರೂ ಇಲ್ಲದೆ ಕಾಲಕಳೆಯುತ್ತೇವಷ್ಟೆ? ಈ ವಿಷಯವನ್ನೀಗ ಮಾತನಾಡಿದ್ದು."

"ನಾನೇನು ಹೇಳಲಿ? ನನಗೆ ಒಂದೂ ಸೂಚಿಸುವುದಿಲ್ಲ. ಕಣ್ಣುಕಟ್ಟಿ ಕಾಡಿನಲ್ಲಿ ಬಿಟ್ಟಂತಾಗಿದೆ."

ವೆಂಕಟರಾಯ– "ರಾಯರೇ, ತಾವು ಎರಡು ದೋಣಿಗಳಲ್ಲಿ ಕಾಲಿಟ್ಟಿದ್ದೀರಿ–ಹೂಂ, ನನಗೇಕೆ?"

ಪೊಕ್ಕು ಸೆಟ್ಟಿ– "ಸ್ವಾಮಿ, ಚಿಕ್ಕ ಹುಡುಗಿಯ ಮಾತು ಕೇಳಿ ತಾವೇ ಈ ಪೀಕಲಾಟ ಮಾಡಿಕೊಂಡು ಈಗ ಕಂಡವರ ಆಲೋಚನೆ ಕೇಳುತ್ತೀರಾ?"

ಭೀಮರಾಯ– "ನೀನೇನು ಮಾತನಾಡುತ್ತೀಯಾ? ಒಬ್ಬನಿಗೆ ಕಷ್ಟ ಬಂದಾಗ ಎಷ್ಟು ಧೈರ್ಯವಿದ್ದರೂ, ಆಲೋಚನೆಗಳು ನೆಟ್ಟಗೆ ಹರಿಯುವುದಿಲ್ಲ. ನೀನು ಜಾಣನಷ್ಟೆ. ಈಗ ಹೇಗೆ ನಡೆದುಕೊಳ್ಳಬೇಕೆಂದು ಹೇಳು" ಎನಲು, ಪೊಕ್ಕು ಸೆಟ್ಟಿಯು ಕೋಸುಗಣ್ಣಿನಿಂದ ಆಲೋಚಿಸಿದ ಹಾಗೆ ಮಾಡುತ್ತಾ ಯಥಾರ್ಥದಲ್ಲಿ ವೆಂಕಟರಾಯನ ಕಡೆಗೆ ನೋಡಲು, ಅವನು ಎರಡು ವರಹ ಕೊಡುವುದಾಗಿ ಅರ್ಥವಾಗುವ ಹಾಗೆ ತನ್ನ ಬೆನ್ನು ಕಡೆಯಿಂದ ಕೈಸನ್ನೆ ಮಾಡಿದನು. ಆಗ ಪೊಕ್ಕು ಸೆಟ್ಟಿಯು "ಸ್ವಾಮಿ, ವೆಂಕಟರಾಯರೇನು ಸಾಮಾನ್ಯದ ವೈದ್ಯರೇ? ಇಂತಹ ಸಾವಿರಾರು ಕಾರ್ಯಗಳಲ್ಲಿ ಔಷಧಿಗಳನ್ನು ಕೊಟ್ಟು ಸಾಕ್ಷಾತ್ ಧನ್ವಂತರಿಯೇ ಎಂದೆನಿಸಿದವ ರಲ್ಲವೇ? 'ಹಾಸಿಗೆಯ ಮೇಲೆ ಬಂದವನನ್ನು ಬಿಟ್ಟು', ಎಂದಿಷ್ಟು ಮಾತನಾಡುವಷ್ಟರಲ್ಲಿ ವೆಂಕಟರಾಯ– "ಸೆಟ್ಟಿಯರೇ, ನಿಮಗೇಕಿಷ್ಟೆಲ್ಲ ಪ್ರಸಂಗ? ಆ ರಾಯರುಗಳೆಲ್ಲರು ಮಹಾನುಭಾವರುಗಳು. ಅವರಿಗೆ ನಮ್ಮಂತಹರು ಆಲೋಚನೆ ಹೇಳುವುದೇನಿದೆ? ಸುಮ್ಮಗಿರ್ರಿ" ಎಂದು ಹೇಳಿದನು. ಆಗ ಭೀಮರಾಯನು, "ವೈದ್ಯರೇ, ನಿಮ್ಮನ್ನು ನಾನು ಕರೆಯಿಸಿದ್ದು ಸುಮ್ಮಗೇ ಅಲ್ಲ, ನಿಮ್ಮ ಯೋಗ್ಯತೆಗಳು ಚೆನ್ನಾಗಿ ಗೊತ್ತಿದ್ದು ತಾನೇ–" ಎಂದು ಮುಂದರಿಸಿ ಮಾತನಾಡುವಷ್ಟರಲ್ಲಿ, ಮೊದಲೇ ಮಾತನಾಡಿಟ್ಟ ಕ್ರಮಕ್ಕನುಸಾರವಾಗಿ ವೆಂಕಟರಾಯನ

ಸೇವಕ ಬಸಪ್ಪನು ಓಡುತ್ತಾ ಬಂದು, “ಪಂಡಿತರೇ, ಅಗೋ, ನಿಮ್ಮನ್ನು ಯಾವಾಗ್ಗಿನಿಂದ ಕಾಯುತ್ತಿದ್ದಾರೆ, ನೀವೇನು ಅಲ್ಲಿ ಮಗು ಸತ್ತ ನಂತರವೇ ಹೋಗುವುದು?” ಎಂದು ಕೂಗಿದನು. ಅದನ್ನು ಕೇಳಿ, ವೆಂಕಟರಾಯನು, “ರಾಯರೇ, ಕೇಳಿದಿರಷ್ಟೆ. ಇನ್ನು ನನಗಿಲ್ಲಿರುವುದಕ್ಕುಪಾಯವಿಲ್ಲ, ಹೋಗುತ್ತೇನೆ” ಎಂದು ಹೇಳಿ ಚೀಲ ಹೆಗಲ ಮೇಲೆ ಹಾಕಲು, ಭೀಮರಾಯನು, “ಏನಿರಯ್ಯಾ? ಅದೆಲ್ಲ ಆಗದು. ನಿಮಗೈವತ್ತು ವರಹವಾದರೂ ಕೊಟ್ಟೇನು, ನೀವಿಲ್ಲಿಂದ ಸರ್ವಥಾ ಹೋಗಕೂಡದು. ಇಕ್ಕೊಳ್ಳಿ, ಈಗಲೇ ಇಪ್ಪತ್ತೈದು ವರಹ” ಎಂದು ಹೇಳಿ, ಅಂಗಿ ಜೇಬಿನಿಂದ ಎಂಟು ಪವನುಗಳನ್ನು ತೆಗೆದುಕೊಟ್ಟು, “ಪವನಿಗೆ ಈಗ ೧೨ ೧/೨ ರೂಪಾಯಿ ಕ್ರಯವಿದೆ, ಬಲ್ಲಿರಾ?” ಅಂದನು. ವೆಂಕಟರಾಯನು ಅವುಗಳನ್ನು ಚೀಲದಲ್ಲಿ ಹಾಕಿ, “ಸ್ವಾಮಿ, ಇದಕ್ಕಾಗಿ ಹೇಳಿದ್ದಲ್ಲ. ಅಲ್ಲಿ ಮಗುವಿಗೆ ಪ್ರಾಣಾಂತಿಕವಂತೆ. ಹೋಗದೆ ನಿರ್ವಾಹವಿಲ್ಲವೆಂಬುದರಿಂದ ಹೋಗುವುದಕ್ಕೆದ್ದೆನು. ಏನು ಮಾಡಲಿ, ತಮ್ಮ ಮಾತನ್ನು ತೆಗೆದುಹಾಕಕೂಡದಷ್ಟೆ? ಬಸಪ್ಪಾ, ನಾನೀಗಲೇ ಬಂದೆನೆಂದು ಹೇಳು, ಹೋಗು” ಎಂದು ಹೇಳಿ ಅವನನ್ನು ಕಳುಹಿಸಿ ಪುನಃ ಕುಳಿತುಕೊಂಡನು. ಭೀಮರಾಯನು, “ವೈದ್ಯರೇ, ಡಾಕ್ತರ್ ಸಾಹೇಬರು ಬರುವುದಕ್ಕೆ ಹೇಗೂ ಇನ್ನೂ ಬಹಳ ತಡವಿದೆ. ನಿಮ್ಮ ವೈದ್ಯ ಪ್ರಾರಂಭಿಸಲಿ” ಎಂದು ಹೇಳಿ ತ್ರಿಯಂಬಕರಾಯನೊಡನೆ, “ಹೇಗೆ ರಾಯರೆ? ‘ಶುಭಸ್ಯ ಶೀಘ್ರಂ’ ಎಂಬ ಶ್ರುತಿವಾಕ್ಯ ಬಲ್ಲಿರಷ್ಟೆ? ಕಾಲಹರಣ ಮಾಡುವುದು ಠೀಕಲ್ಲ. ಮುಂದರಿಸಬಹುದಷ್ಟೆ?” ಎಂದು ಕೇಳಲು, ಅವನು “ರಾಯರೇ, ನನ್ನ ಮಗುವೇ ತಮ್ಮ ಮಗುವು. ತಮ್ಮ ಮಗುವೇ ನನ್ನ ಮಗುವು. ನಮ್ಮೊಳಗೆ ಭೇದವೇನಿದೆ? ನನ್ನ ಹತ್ತಿರ ಕೇಳುವುದೇಕೆ? ತಾವು ಧೈರ್ಯಶಾಲಿಗಳೂ ಮಹಾನುಭಾವರೂ ಆಗಿದ್ದೀರಿ. ಮುಂದರಿಸಲಿ. ಈಶ್ವರೇಚ್ಛೆ ಇದ್ದಂತಾಗುವುದು” ಎಂದುತ್ತರಕೊಡಲು ಭೀಮರಾಯನು ಒಂದು ನಿಮಿಷದ ವರೆಗೆ ಆಲೋಚಿಸಿ, “ರಾಯರೇ, ಹೇಗೂ ನಮಗೆ ಇಷ್ಟೆಲ್ಲ ಖರ್ಚು ಮುಟ್ಟಿದೆ. ತಾವು ಹರಿಕೆಗಳನ್ನು ಹೇಳಿಕೊಂಡಿದ್ದೀರಿ. ನಾನು ಸಹ ಒಂದು ಹರಿಕೆ ಹೇಳಿಕೊಳ್ಳುತ್ತೇನೆ. ಏನೆಂದರೆ, ನಮ್ಮ ವಿಠಲರಾಯನು ಈ ಗಂಡದಿಂದ ತಪ್ಪಿ ಸುಕ್ಷೇಮಿಯಾದ ದಿವಸವೇ ಶ್ರೀಮಹಾಲಿಂಗೇಶ್ವರ ನಿಗೆ ಒಂದು ಮಹಾ ರುದ್ರಾಭಿಷೇಕ, ಸಹಸ್ರ ಬ್ರಾಹ್ಮಣರಿಗೊಂದು ಸಂತರ್ಪಣೆ ಸಹ ಮಾಡಿಸುವುದಲ್ಲದೆ ದೇವಸ್ಥಾನದ ಪಶ್ಚಿಮ ದಿಕ್ಕಿನ ಹೆಬ್ಬಾಗಿಲಲ್ಲಿ ಸಾಯಂಕಾಲ ಸಮಯದಲ್ಲಿ ಬಾರಿಸುವುದಕ್ಕೋಸ್ಕರ ಮೂರು ಮಣ ತಾಂಬ್ರದ ಕಳಸಿಗೆಯ ಒಂದು ನಗಾರಿಯನ್ನು ಮಾಡಿಸಿ, ಅದಕ್ಕೆ ‘ದೇವದುಂದುಭಿ’ ಎಂಬ ಹೆಸರನ್ನಿಟ್ಟು ಅದಕ್ಕೆ ಬೇಕಾದ ಬಂಡಿ ಸಮೇತ ಶ್ರೀಮಹಾಲಿಂಗೇಶ್ವರನ ಪಾದದಲ್ಲಿ ಒಪ್ಪಿಸುತ್ತೇನೆ. ‘ಮದ್ದು ಕೊಟ್ಟಾಕ್ಷಣವೆದ್ದು ನಿಲ್ಲಬೇಕು’, ಎಂಬ ಮಾತಿನಂತೆ, ಇಂದ್ರಜಿತು ವಧೆಯ ಪ್ರಸಂಗದಲ್ಲಿ ಲಕ್ಷ್ಮಣನು ಮೂರ್ಛಿತನಾಗಿ ಬಿದ್ದಾಗ ವಾಯುಪುತ್ರನಾದ ಹನುಮಂತನು ದ್ರೋಣಾಚಲ ಪರ್ವತವನ್ನು ಕಿತ್ತು ತಂದು ಅದರಲ್ಲಿದ್ದ ಔಷಧಿಯನ್ನು ಕೊಡಲು, ಲಕ್ಷ್ಮಣನು ಯಾವ ಪ್ರಕಾರದಲ್ಲಿ ಥಟ್ಟೆಂದೆದ್ದು ನಿಂತನೋ ತದೋಪಾದಿಯಲ್ಲಿ ನಮ್ಮ ವಿಠಲರಾಯನು ಕ್ಷಣಮಾತ್ರದಲ್ಲೆದ್ದು ನಿಲ್ಲಬೇಕು. ಹೇಗೆ ರಾಯರೇ?” ಎಂದು ಕೇಳಲು, ತ್ರಿಯಂಬಕರಾಯನು “ಸರಿ ಸರಿ” ಎಂದನು.

ಕೂಡಲೇ ವೆಂಕಟರಾಯನು ಭೀಮರಾಯನ ಅಪ್ಪಣೆಯ ಪ್ರಕಾರ ಔಷಧಿ ಚೀಲದಿಂದ 'ಸ್ವರ್ಗಾಂಜನ ಮಾತ್ರೆ'ಯನ್ನು ತೆಗೆದು, ವೃತ್ತಾಕಾರದ ಒಂದು ಸಾಣೆಕಲ್ಲಿನ ಮೇಲೆ ಹಸಿಶುಂಠಿಯ ರಸದಲ್ಲಿ ನೀಟಾಗಿ ತೇದು, ಒಂದು ತೊಗರೀ ಕಾಳಿನಷ್ಟು ತೆಗೆದು, ಅದರೆರಡು ಪಾಲುಮಾಡಿ, ಒಂದೊಂದು ಕೈಯ ತರ್ಜನಿಯ ತುದಿಯಲ್ಲಿರಿಸಿ, ಅಷ್ಟಾಂಗಹೃದಯದಿಂದೆರಡು ಶ್ಲೋಕಗಳನ್ನು ಹೇಳಿ, ಷುಃ! ಷುಃ! ಎಂದು ಬಾಯಿಂದೆರಡು ಸಾರಿ ಊದಿ, ಹುಡುಗನ ಕಣ್ಣುಗಳನ್ನು ತೆರೆದು ಆ ಅಂಜನವನ್ನು ಹಚ್ಚಲು ಹುಡುಗನು ಕೈಕಾಲುಗಳನ್ನು ಅಲ್ಲಾಡಿಸಿ ಬಡೆದು ಹೊರಳಿದಂತೆಮಾಡಿ ಕಣ್ಣುಗಳಿಂದ ಸರಸರೆಂದು ನೀರು ಧಾರೆಗಳನ್ನು ಸುರಿಸಲು, "ನೋಡಿದಿರಾ ಅಂಜನದ ಕರಾಮತ್ತು? ಒಂದು ತೊಗರಿಯ ಕಾಳಿನಷ್ಟಲ್ಲವೇ ಹಚ್ಚಿದ್ದು? ಮೂರ್ತಿ ಸಣ್ಣದಾದರೂ ಕೀರ್ತಿ ದೊಡ್ಡದು!" ಎಂದು ಭೀಮರಾಯ, ತ್ರಿಯಂಬಕರಾಯ ಇವರಿಗೆ ಮೆಚ್ಚಿಸಿ, ಅದೇ ಚೀಲದಿಂದ ಒಂದು ಗಾಜಿನ ಕುಪ್ಪಿಯನ್ನು ತೆಗೆದು ಅದರಲ್ಲಿದ್ದ ಎಣ್ಣೆಯಿಂದ ಅರ್ಧ ಚಮಚ ಎಣ್ಣೆ ತೆಗೆದು ಹುಡುಗನ ಬಾಯಿಯನ್ನು ತೆರೆಯಲಿಕ್ಕೆ ನೋಡುವಾಗ ಹನುಸ್ತಂಭವಾಗಿರಲು, ಒಂದು ಕಬ್ಬಿಣದ ಸೌಟಿನ ಹಿಡಿಯಿಂದ ಬಾಯಿಯನ್ನು ತೆರೆದು, ಎಣ್ಣೆ ಇದ್ದ ಚಮಚವನ್ನು ಗಂಟ್ಲಿನ ವರೆಗೆ ಸೇರಿಸಿ ಎಣ್ಣೆಯನ್ನು ಹೊಯಿದು, "ಈಗ, ರಾಯರುಗಳೇ, ನೀವು ಬೇರೆ ಒಂದು ಕೋಣೆಯಲ್ಲಿ ಸುಮ್ಮಗೆ ಕೂಡ್ರಿರಿ. ಇವನಿಗೆ ತೊಂದರೆ ಕೊಡಬೇಡಿರಿ. ಎರಡು ಗಳಿಗೆಯಲ್ಲಿ ಅವನು ತಾನೇ ನಿಮ್ಮನ್ನು ಕರೆಯುವನು. ನಡೆಯಿರಿ" ಎಂದು ಹೇಳಲು, ಅವರೆಲ್ಲರೂ ಮತ್ತೊಂದು ಕೋಣೆಗೆ ಹೋಗಿ ಕೂಡ್ರಿದರು. ವೆಂಕಟರಾಯನು, "ನಾನು ಆ ಮಗುವನ್ನು ನೋಡಿ ಈಗಲೇ ಬರಲೇ?" ಎಂದು ಕೇಳಿ ಭೀಮರಾಯನ ಅಪ್ಪಣೆ ಪಡೆದು ಹೊರಟುಹೋಗುತ್ತಾ ಪೊಕ್ಕು ಸೆಟ್ಟಿಗೆ ಕಣ್ಣಿನ ಸಂಜ್ಞೆಮಾಡಿ ಹೊರಗಿಳಿದು ತನ್ನ ಮನೆಗೆ ಹೋದನು.

## ೩೬

ಭೀಮರಾಯನೆ ಮುಂತಾಗಿ ಎಲ್ಲರೂ ವಿಠಲರಾಯನಿದ್ದ ಕೋಣೆಯನ್ನು ಬಿಟ್ಟು ಮತ್ತೊಂದು ಕೋಣೆಗೆ ಹೋಗಿ ಕುಳಿತುಕೊಂಡು ವೀಳ್ಯ ಹಾಕುತ್ತಿರುವಾಗ, ಭೀಮರಾಯನು ತ್ರಿಯಂಬಕರಾಯನೊಡನೆ,

"ಕೇಳಲಿಲ್ಲವಲ್ಲ, ಮಕ್ಕಳಿಗೆ ಸುಬುದ್ಧಿಯೋ ದುರ್ಬುದ್ಧಿಯೋ ಬರುವುದು ಹೆತ್ತವರ ಪ್ರಾಪ್ತ್ಯಾನುಸಾರವಾಗಿ ಎಂದು ನಾನು ತಿಳಿದುಕೊಂಡಿದ್ದೇನೆ."

"ವಾಸ್ತವವೇ. ಹಾಗಲ್ಲವಾದರೆ, ನಮ್ಮ ವಿಠಲನು ಈ ಸ್ಥಿತಿಗೇಕೆ ಬರುತ್ತಿದ್ದನು? ಮನೆಯಲ್ಲಿ ಉಣ್ಣುವುದಕ್ಕೂ ತಿನ್ನುವುದಕ್ಕೂ ಏನು ಕಡಿಮೆ ಇತ್ತು? ಹೇಗೆ ಬೇಕೋ ಹಾಗೆ ನಡೆದುಕೊಂಡಿದ್ದರೂ, ಹಾಂ ಹೂಂ ಎಂದ್ಯಾರಾದರೂ ಮಾತನಾಡುತ್ತಿದ್ದರೇ? ನನಗೇನಾದರೂ ಹತ್ತೆಂಟಿಲ್ಲ, ಇಡೀ ಸಂಸಾರಕ್ಕೊಂದು ಮಗ; ಅವನು ತೆಗೆದದ್ದು, ಅವನಿಟ್ಟದ್ದು. ಹೀಗಿರುತ್ತಾ

ಮನೆ ಬಿಟ್ಟು ಏತರ ಸಾಮ್ರಾಜ್ಯವನ್ನನುಭವಿಸುವುದಕ್ಕೆ ಇಲ್ಲಿಗೆ ಬಂದನೋ, ಶ್ರೀಲಕ್ಷ್ಮೀಪತಿ ನಾರಾಯಣನೇ ಬಲ್ಲ! ಇಲ್ಲಿ ಪಡೆಯುತ್ತಿದ್ದ ಸುಖವನ್ನೇ ಮನೆಯಲ್ಲಿ ಪಡೆಯಲಿಕ್ಕಾವ ಆತಂಕವೂ ಇರಲಿಲ್ಲ. ಮಾತ್ರವಲ್ಲ, ಇಲ್ಲಿಗಿಂತ ಹತ್ತು ಪಾಲಷ್ಟು ಹೆಚ್ಚಾಗಿ ಅಲ್ಲಿ ಸುಖಪಡೆಯಬಹುದಿತ್ತು. ಇಲ್ಲಿಗೆ ಬಂದು ಈ ಭವಣೆಯನ್ನನುಭವಿಸಲಿಕ್ಕಾದ್ದು ನನ್ನ ಪೂರ್ವಕರ್ಮದ ಫಲವಲ್ಲದೆ ಮತ್ತೇನು? ನನಗೆ ಪ್ರಾಯವಾಯಿತು. ದೇವರು ನನ್ನ ನೆನಪು ಏಕೆ ಮುಂದಾಗಿ ಮಾಡಲಿಲ್ಲವೋ? ಅದು ಸಹ ಕರ್ಮದ ಫಲವೇ."

"ವಿಹಿತವಾದ ಮಾತು. ನಾವು ಯಾವುದೊಂದು ಕಾರ್ಯವನ್ನಾದರೂ ಮಾಡುತ್ತಿರುವಾಗ ಇದರ ಫಲಪರ್ಯವಸಾನವನ್ನು ತಿಳಿದರೂ, ಕರ್ಮದ ವಿಧಿಯು ಆ ಕಾರ್ಯವನ್ನು ನಮ್ಮಿಂದ ಮಾಡಿಸಿಯೇ ಬಿಡುತ್ತೆ. ಕರ್ಣನು ಪಂಚಪಾಂಡವರ ಒಡಹುಟ್ಟಿದವನೆಂದು ಆತನು ತಿಳಿದಿದ್ದರೂ, ಖೂಳರಾದ ಕೌರವರ ಕಡೆಗೆ ಸೇರಿ ಯುದ್ಧದಲ್ಲಿ ಮಡಿದುಹೋದದ್ದು ಅವನ ಕರ್ಮದ ಫಲವಲ್ಲವೇ? ನಾವು ಮಾಡುವ ಸಕಲ ಕಾರ್ಯಗಳು ಉಣ್ಣುವುದು ತಿನ್ನುವುದು ಸಹ."

ಇಷ್ಟು ಮಾತನಾಡುವಷ್ಟರಲ್ಲಿ ವಿಠಲರಾಯನಿದ್ದ ಮಂಚದ ಮೇಲೆ ಕೈಕಾಲುಗಳನ್ನು ಅಲ್ಲಾಡಿಸಿದ ಹಾಗೂ ಹಾಸಿಗೆಗೆ ಕಾಲುಗಳನ್ನು ಒರಸಿದ ಶಬ್ದವಾಯಿತು. ಅದನ್ನು ಕೇಳಿ ಭೀಮರಾಯನು ಪ್ರಮೋದದೊಡನೆ "ನೋಡಿ ರಾಯರೇ, ಹುಡುಗನು ಎದ್ದು ಕುಳಿತುಕೊಳ್ಳುತ್ತಾನೇನೊ, ಶಬ್ದವಾಗುತ್ತೆ" ಎಂದು ತ್ರಿಯಂಬಕರಾಯನ ಕಿವಿಯಲ್ಲೇ ಹೇಳಲು, ಅವನೆದ್ದು ನಿಂತು, "ಹೋಗಿ ನೋಡಿ ಬರಲೇ?" ಎಂದು ಕೇಳಿದನು. ಭೀಮರಾಯನು, "ಬೇಡಿ ರಾಯರೇ, ವೆಂಕಟರಾಯನೆಂದರೆ ಸಾಧಾರಣ ಮನುಷ್ಯನಲ್ಲ, ಸಾಕ್ಷಾತ್ ಸುಶೇಣನೇ. ತುಸಾ ತಡೆಯಿರಿ, ಹುಡುಗನು ತಾನೇ ನಮ್ಮನ್ನು ಕರೆಯುವನು; ಕರೆಯುವವರೆಗೆ ಯಾರೊಬ್ಬನೂ ಅಲ್ಲಿಗೆ ಹೋಗಬಾರದೆಂದು ವೈದ್ಯ ಹೇಳಿದ್ದಾನಷ್ಟೆ? ಕುಳಿತುಕೊಳ್ಳಿರಿ" ಎಂದು ಹೇಳಿ, ಅವನನ್ನು ಕುಳ್ಳಿರಿಸಿದನು.

ಆ ಬಳಿಕ ಬೇರೆ ಬೇರೆ ವಿಷಯಗಳನ್ನು ಮಾತನಾಡುತ್ತಾ ಇನ್ನೊಂದು ಗಳಿಗೆ ಕಳೆಯಿತು. ಮಾತಿನ ಸ್ವರವಾಗಲೀ ಬೇರೆ ಯಾವ ಶಬ್ದವಾಗಲೀ ಕೇಳಿಸಲಿಲ್ಲ. ತ್ರಿಯಂಬಕರಾಯನು ಭೀಮರಾಯನೊಡನೆ– "ರಾಯರೇ, ವೈದ್ಯ ಹೇಳಿದ ಹಾಗೆ ಎರಡು ಗಳಿಗೆಯಲ್ಲ, ಅದಕ್ಕಿಂತ ಹೆಚ್ಚು ಸಮಯವಾಯಿತು. ಆ ಕೋಣೆಗೆ ಹೋಗಿ ನೋಡಿ ಬಂದರಾಗಬಹುದಲ್ಲವೇ?" ಎನಲು, "ಕರೆಯುವುದಕ್ಕೆ ಮುಂಚೆ ನಾವ್ಯಾರೂ ಅಲ್ಲಿಗೆ ಹೋಗಬಾರದೆಂದು ವೈದ್ಯ ಹೇಳಿದ್ದು ಏಕಂತ ನಾನರಿಯೆ. ಇಷ್ಟು ಸಮಯದ ವರೆಗಂತೂ ನಾವು ಕಾದಿದ್ದೇವೆ. ವೈದ್ಯನೀಗಲೇ ಬರುವನು. ಬೇಕಾದರೆ ಪೊಕ್ಕು ಸೆಟ್ಟಿಯನ್ನು ಕರೆಯಕಳುಹಿಸಲೇ?" ಎಂದು ಕೇಳಲು, "ಹಾಗೆ ಮಾಡಿರಪ್ಪಾ! ನನಗೇನೋ ಹೊಟ್ಟೆಯಲ್ಲಿ ಉರಿಯುವ ಹಾಗಾಗುತ್ತೆ. ತನ್ನಂತೇ ಕಣ್ಣಿನಿಂದ ನೀರು ಹೊರಡುತ್ತ ಒಂದೊಂದು ಸಾರಿ ಕಣ್ಣೆದುರಿನಲ್ಲಿ ಕಮಲಗಳಂತೆ ಏನೋ ಕಾಣಿಸುತ್ತೆ. ಮನಸ್ಸಿನಲ್ಲಿ ಏನೋ ಒಂದು ವಿಧದ ಕಳವಳ ಹುಟ್ಟಿದೆ. ಇದಕ್ಕೆಲ್ಲ ಕಾರಣವೇನಂದರಿಯೆ.

ಪೊಕ್ಕು ಸೆಟ್ಟಿಯನ್ನು ಬೇಗನೆ ಕಳುಹಿಸಿ ವೈದ್ಯನನ್ನು ಕರೆಯಿಸಿರಿ. ಅಯ್ಯೋ! ಇದೇನಪ್ಪ, ರೋಮಾಂಚವಾಯಿತು! ಮೈಯೆಲ್ಲಾ ಬೆವರಿತಷ್ಟೆ! ರಾಯರೇ, ನನ್ನ ಸರ್ವಾಂಗವೂ ನಡುಗುತ್ತೆ, ನೋಡಿರಿ! ಅಯ್ಯೋ! ಗಂಟ್ಲೆಲ್ಲ ಒಣಗಿತು! ಹೇ ನಾರಾಯಣಾ! ಇದೇನವಸ್ಥೆ!–" ಎಂದು ಹೇಳಿ ಹೆಚ್ಚು ಮಾತನಾಡಕೂಡದೆ ಕುಳಿತುಕೊಳ್ಳಲು, ಭೀಮರಾಯನು "ರಾಯರೇ, ತಾವು ಪ್ರಾಯ ಹೋದ, ಒಳ್ಳೆ ಬುದ್ಧಿಯಿದ್ದ ಮನುಷ್ಯನಾಗಿ ಹೀಗೆ ಹೆಂಗಸರಂತೆ ಮಾಡಬೇಡಿರಿ, ಸ್ವಾಮಿ–ಧೈರ್ಯಕೆಟ್ಟು ಕಂಗೆಡುವುದು ತರವೇ? ನನಗಾದರೋ, ಆ ವೈದ್ಯನ ಬುದ್ಧಿವಂತಿಕೆಯಲ್ಲಿಯೂ ಮಾತಿನಲ್ಲಿಯೂ ತಿಲಪ್ರಾಯದ ಸಂಶಯವಿಲ್ಲ. ಆದರೂ ಕ್ಷಣಮಾತ್ರದಲ್ಲೂ ಅವನನ್ನು ಕರೆಯಿಸುತ್ತೇನೆ" ಎಂದು ಹೇಳಿ–"ಪೊಕ್ಕು ಸೆಟ್ಟಿ, ವಾಯುವೇಗದಿಂದ ಹೋಗಿ ಕರೆದುಕೊಂಡೇ ಬಾ, ಬಿಟ್ಟು ಬರಬೇಡ, ಬಲ್ಲೆಯಾ?" ಎಂದಪ್ಪಣೆ ಕೊಡಲು, ಅವನು 'ನನಗೂ ಬೇಕಾದ್ದು ಅದೇ' ಎಂದು ಮನಸ್ಸಿನಲ್ಲೇ ಅಂದುಕೊಂಡು, "ನಿಮಿಷ ಮಾತ್ರದಲ್ಲಿ ಕರೆದು ತರುತ್ತೇನೆ, ಸ್ವಾಮಿ, ನನ್ನ ಚುರುಕು ಮತ್ತೆ ನೋಡಿರಿ" ಎಂದು ಹೇಳಿ, ಮತ್ತೊಂದು ಕೋಣೆಯ ಕಿಟಕಿಯಿಂದ ಮಂಚದ ಮೇಲೆ ನೋಡಿ, ವಿದ್ಯಮಾನವೇನೆಂದು ಮಂದಟ್ಟುಮಾಡಿಕೊಂಡು, ಓಡುತ್ತಾ ವೈದ್ಯನ ಬಳಿಗೆ ಹೋಗಿ, "ನೀವು ಹೇಳಿದ್ದು ಎಲ್ಲಯ್ಯಾ? ಬರಲಿ, ಹೂಂ ಬೇರೆ ಅಗತ್ಯದ ಕೆಲಸವಿದೆ" ಎಂದು ಹೇಳಲು, ಅವನು ಒಳಗೆ ಹೋಗಿ ಎಂಟು ರೂಪಾಯಿ ತಂದು ಅವನ ಕೈಯಲ್ಲಿ ಕೊಟ್ಟನು. ಅವುಗಳನ್ನು ಸೊಂಟದಲ್ಲಿ ಸಿಕ್ಕಿಸಿಕೊಂಡು–"ಹೊರಡಿರಯ್ಯಾ, ನೀವು ಈಗಲೇ ಬರಬೇಕಂತೆ" ಎಂದನು.

ವೆಂಕಟರಾಯ: "ಸೆಟ್ಟಿಯವರೇ, ಅಲ್ಲಿಯ ವಿದ್ಯಮಾನವೇನು?"

ಪೊಕ್ಕು ಸೆಟ್ಟಿ: "ವಿದ್ಯಮಾನವೇನೂ ಇರಲಿ. ನೀವು ಹೊರಡಿರಿ."

"ಹಾಗಲ್ಲ, ಸೆಟ್ಟಿಯರೇ, ಇದೇನಿಷ್ಟು ಅಸಭ್ಯತೆ? ಹೇಳಬಾರದೇ?"

"ಹೇಳುವುದೇನು? ವರಹಾಕ್ಕೆ ಹದಿನಾರು ಚಕ್ರ."

"ಹಾಗಂದರೋ?"

"ಅವ್‌ಸ್‌ರಾಂಡಗೆ–ಬೇಗ ಬರೋಡ್‌ಗೆ."

(ಅವಸರವಾಯಿತಂತೆ, ಬೇಗ ಬರಬೇಕಂತೆ.)

"ಏನು, ಮೃತವಾದನೇ?"

"ಅದು ಹೇಗೂ ಆಗಲಿ. ನೀವೀಗ ಹೊರಡುವುದಿಲ್ಲವೇ? ಸುಮ್ಮಗೆ ಮಾತನಾಡಿ ಸಮಯ ಕಳೆಯುತ್ತೀರಷ್ಟೆ? ಬರಲಿಕ್ಕೆ ನಿಮಗೆ ಮನಸ್ಸಿಲ್ಲವೆಂದು ಹೇಳಲೇ?"

"ಏನಿರೈಯಾ? ಕುತ್ತಿಗೆ ಕೊಯ್ಯುತ್ತೀರೇನು?"

"ಹಾಗಾದರೆ ಬೇಗನೆ ಹೊರಡಬಾರದೆ? ನಿಮ್ಮನ್ನು ಬಿಟ್ಟು ಬರಬಾರದಾಗಿ ಸಾರಿ ಹೇಳಿದ್ದಾರೆ."

"ಸೆಟ್ಟಿಯರೇ, ವಿದ್ಯಮಾನ ಗೊತ್ತಾಯಿತು. ದಯಮಾಡಿ ನಾನು ಮನೆಯಲ್ಲಿಲ್ಲವೆಂದು ಹೇಳುವಿರಾ?"

"ನಿಮ್ಮ ಉದ್ಯೋಗ ಸರಿ! ಚಿಕ್ಕಾಸಿನ ಪ್ರಯೋಜನವಿಲ್ಲದೆ ನಾನೇಕೆ ಸಟೆಯಾಡಬೇಕು?"

"ಹಾಗಲ್ಲ, ಮುಂದೆ ನಾನು ನಿಮಗೆ ಬೇಡವೇ?"

"ಅದನ್ನು ಮುಂದೆ ನೋಡಿಕೊಳ್ಳಬಹುದಷ್ಟೆ? ನೀವೀಗ ಬರುವುದಿಲ್ಲವಷ್ಟೆ? ನಿಮ್ಮ ಹತ್ತಿರ ಮಾತಾಡುತ್ತಾ ಇರುವುದಕ್ಕೆ ನನಗೆ ಸಮಯವಿಲ್ಲ. ನಾನು ಹೋಗುತ್ತೇನೆ."

"ಸೆಟ್ಟಿಯರೇ, ತಡೆಯಿರಿ" ಎಂದು ಹೇಳಿ, ಮನೆಯೊಳಗೆ ಹೋಗಿ ಐದು ರೂಪಾಯಿ ತಂದು ಅವನ ಕೈಯಲ್ಲಿಟ್ಟು "ಇನ್ನಾದರೂ ದಯಮಾಡಿ ಹಾಗೆ ಹೇಳಬೇಕಷ್ಟೆ" ಎನಲು, ರೂಪಾಯಿ ಸೊಂಟದಲ್ಲಿ ಸಿಕ್ಕಿಸಿಕೊಂಡು ಬಂಗಲಾವಿಗೆ ಓಡುತ್ತಾ ಬಂದು, "ಸ್ವಾಮಿ, ವೈದ್ಯ ಮನೆಯಲ್ಲಿಲ್ಲ. ಕೆಲವು ಕಡೆಗಳಲ್ಲೆಲ್ಲ ಹುಡುಕಿದೆ, ಸಿಕ್ಕಲಿಲ್ಲ. ತಡವಾಗುತ್ತೆಂಬುದರಿಂದ ತಿರಿಗಿ ಓಡಿಬಂದೆ. ಓಡಿ ಓಡಿ ಸಾಕಾಯಿತು. ಪುನಃ ಹೋಗಲೇ?" ಎಂದು ಕೇಳಲು, ತ್ರಿಯಂಬಕರಾಯನು "ಬೇಡವೈಯಾ. ರಾಯರೇ, ನಾವು ಮಂಚದ ಕೋಣೆಗೆ ಹೋಗೋಣ" ಎಂದು ಹೇಳಿ, ಭೀಮರಾಯನ ಸಮೇತ ಬಂದು ಮಂಚದ ಮೇಲೆ ನೋಡಲು, ಆ ಪ್ರಾಣಿಯು ಪಂಚತ್ವವನ್ನೈದಿರುವುದನ್ನು ಕಂಡು, "ಹೇ ಜಗದೀಶ್ವರನೇ!" ಎಂದು ಕೂಗಿ, ಎದೆ ಎದೆ ಬಡೆದುಕೊಂಡು, ಬೋಧಕ್ಷಯವಾಗಿ ಧಡ್ಡೆಂದು ಭೂಮಿಯ ಮೇಲೆ ಬಿದ್ದನು.

## ೩೭

ಭೀಮರಾಯನ ತಾಯಿತಂದೆಗಳು ಅವನ ಬಾಲ್ಯಪ್ರಾಯದಲ್ಲೇ ಮೃತರಾಗಿದ್ದರು. ಆಮೇಲೆ ಕೆಲವು ಕಾಲ ಪರ್ಯಂತರ ಜೀವನಕ್ಕೆ ಸ್ವಲ್ಪ ತತ್ತುಗುತ್ತಾದರೂ, ಅವನಿಗೆ ಮದುವೆಯಾದ ಬಳಿಕ ಕಾಲಕ್ರಮದಲ್ಲಿ ದೊಡ್ಡಸ್ಥಿಕೆಗೆ ಬಂದು ಸುಖದಲ್ಲೇ ಬೆಳೆದು ಪೂರ್ವವನ್ನು ಮರೆತು, ಸುಂದರರಾಯನ ಮರಣದ ಪ್ರಕರಣದಲ್ಲಿ ಗೆದ್ದಮೇಲಂತೂ ಇತರರ ಕಷ್ಟವೆಂದರೇನು, ಮರಣವೆಂದರೇನು ಎಂಬೀ ವಿಷಯಗಳ ಲಕ್ಷ್ಯವಿಲ್ಲದೆ, ಪರರಿಗೆ ಕಷ್ಟಸಂಭವಿಸಿದ್ದಾಗ ಧೈರ್ಯಕೊಟ್ಟು ಬುದ್ಧಿಹೇಳುತ್ತಾ ಇದ್ದನು. ಈಗ ಅಕಸ್ಮಾತ್ತಾಗಿ ಕಣ್ಣು ಕಟ್ಟಿನಂತೆ ಅಳಿಯನಾದ ವಿಠಲರಾಯನ ಮರಣ ಸಂಭವಿಸಲು, ಧೈರ್ಯವೂ ಪರಾಕ್ರಮವೂ ತತ್ಕಾಲಕ್ಕೆ ಕುಂದಿಹೋಗಿ, ಬೆದರಿ, ಕಳವಳಪಟ್ಟು, "ಅಯ್ಯೋ! ನಾನೆಲ್ಲರಿಗೂ ಧೈರ್ಯ ಹೇಳಿ ಯಾವ ಕಷ್ಟಕ್ಕಾದರೂ ಅಂಜದೆ ಎದುರುನಿಂತು ಗಣ್ಯವಿಲ್ಲದೆ ಹಣವೆಚ್ಚಮಾಡಿ ಏನು ಪ್ರಯೋಜನವಾಯಿತು! ಧರ್ಮಾಧರ್ಮ, ಗುರುಹಿರಿಯರು, ಸಾಧುಸಂತರು ಮುಂತಾದ ಸರ್ವರ ಕಡೆಗೂ ಭಯಭಕ್ತಿಯಿಂದಲೂ ನಂಬಿಕೆ ವಿಶ್ವಾಸದಿಂದಲೂ ನನ್ನ ಶಕ್ತಿಮೀರಿ ನಡೆದುಕೊಂಡೆನು. ಈ ಕಷ್ಟವು ಅದರ ಫಲಿತಾಂಶವೇ? ಪುತ್ರಸಂತತಿಯಿಲ್ಲವೆಂಬುದೊಂದೇ ದುಃಖ ಸಾಕಿತ್ತು. ಇಂದಿರೆಯ ಮುಖವನ್ನು ಈಗ ಹೇಗೆ ನೋಡಲಿ! ಮನೆಗೆ ಹೋಗಿ ಅವಳಿಗೆ ಏನು ಹೇಳಲಿ! ಮನೆಗೆ ಮುಟ್ಟಿದೊಡನೆ, 'ಅಪ್ಪಯ್ಯಾ, ಪತಿಗಳಿಗೆ ಹೇಗುಂಟು?' ಎಂದು ಕೇಳಿದರೆ, ಏನುತ್ತರಕೊಡಲಿ! ದೇವರು ಇಡೀ ಸಂಸಾರಕ್ಕೆ ಕೊಟ್ಟ ಒಂದು ಮಗುವಿನ ಗತಿಯು

ಹೀಗಾಯಿತೇ! ಇನ್ನೇಕೆ ನನಗೆ ಸುಟ್ಟ ಬಾಳುವೆ? ಇಂದಿರೆ! ಪ್ರತಿದಿವಸವೂ ಸಾಯಂಕಾಲಕ್ಕೆ ನಾನು ಮನೆಗೆ ಬಂದಕೂಡಲೆ 'ಅಪ್ಪಯ್ಯಾ, ಹೂವಿನ ಚಂಡೆಲ್ಲಿ? ಇತ್ತಕೊಡು' ಎಂದು ಹೇಳಿ ಕಸಕೊಳ್ಳುತ್ತಿದ್ದೆಯಷ್ಟೆ? ನಾಳಿನಿಂದತ್ತ ಏನುಮಾಡುವೆ? ಅಮ್ಮಣ್ಣೀ! ನಿನಗೆ ಯಾವ ಸಮಯದಲ್ಲಿ ಯಾವ ತರದ ಚಿನ್ನಾಭರಣವೊ ವಸ್ತ್ರಾಲಂಕಾರವೊ ಬೇಕೆಂದು ನೀನಾಗಲಿ ನಿನಗೋಸ್ಕರ ಅಂಬಾಬಾಯಿಯಾಗಲಿ ಬಾಯಿಂದ ಉಚ್ಚಾರಕ್ಕೆ ತಂದ ಕ್ಷಣದಲ್ಲಿ ತಾನೇ ಹರಪ್ರಯತ್ನದಿಂದ ಮಾಡಿಸಿಕೊಟ್ಟೆನಲ್ಲ! ಅದೆಲ್ಲ ಈಗ ನನ್ನ ಸಾರಿಯಲ್ಲಿಡಲಿಕ್ಕಾಯಿತೇ! ಅಯ್ಯೋ! ನಾನೇ ನಿನಗೆ ಮೃತ್ಯುವಾದೆನಷ್ಟೆ! ನಿನ್ನ ಮುಂದೆ ನಾನು ಹೇಗೆ ಬರಲಿ! ನಿನ್ನ ಗೋಳಾಟವನ್ನು ಹೇಗೆ ನೋಡಲಿ! ದೇವರೂ, ಗುರುಹಿರಿಯರೂ, ಸರ್ವರೂ ಈ ಹೊತ್ತು ನನ್ನ ಕೈಬಿಟ್ಟರೇ! ದೇವರೇ! ಈ ಹುಡುಗನ ಸಂಗಡಲೇ ನನ್ನನ್ನು ಸಹ ಕೊಂಡುಹೋಗಬಾರದೇ!" ಎಂದಪರಿಮಿತ ದುಃಖದಿಂದ ಪ್ರಳಾಪಿಸಿದನು. ಅಷ್ಟರಲ್ಲಿ ಪೊಕ್ಕ ಸೆಟ್ಟಿಯು ಒಂದು ಚೆಂಬಿನಲ್ಲಿ ನೀರನ್ನು ತಂದು, ತ್ರಿಯಂಬಕರಾಯನ ಮೈಯಲ್ಲಿ ಚಿಮಿಕಿಸಿ, ಬೀಸಣಿಗೆಯಿಂದ ತುಸಾ ಹೊತ್ತು ಗಾಳಿಹಾಕಿ ಶುಶ್ರೂಷೆಮಾಡಲು ಅವನು ಎಚ್ಚತ್ತು, ಎದ್ದು ಕುಳಿತುಕೊಂಡಾಗ ಭೀಮರಾಯನ ಸ್ಥಿತಿಯನ್ನು ನೋಡಿ, ಸರಿಯಾಗಿ ಮಾತನಾಡಕೂಡದಿದ್ದರೂ, "ರಾಯರೇ, ನನಗಿನ್ನು ಮನೆಮಾರು, ಹಣಕಾಸು ಏಕೆ? ದೇವರು ಮುದಿಪ್ರಾಯದಲ್ಲಿ ನನಗೆ ಈ ಕಷ್ಟ ಕೊಡಬಾರದಿತ್ತು. ಪರಂತು ಅವನ ಸಂತೋಷ ಹಾಗಿದ್ದಮೇಲೆ ಯಾರಿಂದೇನಾಗುವುದು! ನಾನಿನ್ನು ಈ ಸಂಸಾರವೆಂಬ ನರಕದ ಹೊಂಡದಲ್ಲಿ ಹೊರಳಾಡಿಕೊಂಡಿರುವುದಕ್ಕಿಂತಲೂ ಕಾಶಿಯಾತ್ರೆಮಾಡಿ ಶ್ರೀವಿಶ್ವನಾಥನ ಕಾಲಡಿಯಲ್ಲಿ ಈ ದೇಹವನ್ನು ಸಮರ್ಪಿಸುವುದೇ ಯೋಗ್ಯವೆಂದು ಕಾಣುತ್ತೆ. ನಾವಿನ್ನು ವೃಥಾ ದುಃಖಪಟ್ಟು ಪ್ರಯೋಜನವಿಲ್ಲ. ತಲೆತಲೆ ಬಡೆದುಕೊಂಡರೂ ಹೋದ ಜೀವ ಮರಳುವುದೆಂಬ ಮಾತಿಲ್ಲವಷ್ಟೆ? ಇನ್ನು ಹುಡುಗನ ಸದ್ಗತಿಗೆ ಬೇಕಾದ ವಿಷಯಗಳನ್ನು ನೋಡಿಕೊಳ್ಳೋಣ; ಎದ್ದೇಳಿರಿ. ಧೈರ್ಯಶಾಲಿಗಳೂ ಯುಕ್ತಿವಂತರೂ ಆಗಿರುವ ತಾವೇ ಈ ರೀತಿ ದುಃಖವನ್ನು ಮೈಗೆ ಹಚ್ಚಿಕೊಂಡು ಗೋಳಾಡುವುದು ತರವಲ್ಲ. ನಾನು ತಮಗೆ ಬುದ್ಧಿ ಹೇಳಲಶಕ್ತನಾದರೂ, ತಮಗಿಂತ ಪ್ರಾಯದಲ್ಲಿ ಹೆಚ್ಚಿನವನಾದುದರಿಂದ ನನ್ನ ಕೆಲವು ಮಾತುಗಳನ್ನು ಕೇಳಿರಿ– ಈ ಪ್ರಪಂಚವೆಂಬುದೇ ಸುಳ್ಳು. ಇದರಲ್ಲಿ ಎಂದೆಂದಿಗೂ ಸುಖವಿಲ್ಲ! ಈ ಹೊತ್ತು ಸುಖವೆಂದು ತೋರುವುದು ನಾಳೆ ದುಃಖಕ್ಕೆ ಕಾರಣವು. ಕಣ್ಣಿಗೆ ಕಾಣಲಿಕ್ಕೆ ರಮ್ಯವೇ, ಅನುಭವಕ್ಕೆ ಸಿಕ್ಕುವದೊಂದೂ ಇಲ್ಲ. ಕನ್ನಡಿಯೊಳಗಿನ ಗಂಟೆಂಬ ಹಾಗೆ ಸುಮ್ಮನೆ ಈ ಸಂಸಾರವೆಂಬ ಸಟೆಯನ್ನು ನಂಬಿ, ಒಂದು ಗಳಿಗೆಯ ಸುಖಕ್ಕೆ ಸಂತೋಷ, ಮತ್ತೊಂದು ಗಳಿಗೆಯ ದುಃಖಕ್ಕೆ ವ್ಯಸನಪಡುವುದು,– ಇದೆಲ್ಲ ಮಕ್ಕಳಾಟಿಕೆಯಲ್ಲದೆ ಬೇರೇನೂ ಅಲ್ಲ, ಎದ್ದೇಳಿರಿ. ಮುಂದಿನ ಕೆಲಸಗಳನ್ನು ನೋಡೋಣ" ಎಂದು ಹೇಳಲು, ಭೀಮರಾಯನು ಎದ್ದು ಕುಳಿತುಕೊಂಡು ಪೊಕ್ಕು ಸೆಟ್ಟಿಯನ್ನು ಕರೆದು, "ಎಲೋ, ಪುರೋಹಿತ ಕಾಶೀನಾಥ ಭಟ್ಟರನ್ನು ಕರೆದುಕೊಂಡು ಬಂದು–ನಾರಾಯಣಾ!–ಮುಂದಿನ ಕಾರ್ಯಕ್ಕೆ ಬೇಕಾದ ಸಕಲ ಸಾಹಿತ್ಯಗಳನ್ನು ರಾಯರು

ಹೇಳುವ ಪ್ರಕಾರ ಒದಗಿಸಿಕೊಡು. ಪ್ರಥಮತಃ ಅಣ್ಣ ಶಂಕರರಾಯನನ್ನು ಕರೆದುತಂದುಬಿಡು, ಆಮೇಲೆ ಬೇರೆ ಕೆಲಸಕ್ಕೆ ಹೋಗು" ಎಂದು ಹೇಳಲು, ಅವನು ಒಡನೆಯೇ ಹೋಗಿ ಶಂಕರರಾಯನನ್ನು ಕರೆದುತಂದನು. ಭೀಮರಾಯನು ಅಗ್ರಜನನ್ನು ಕಂಡು, "ಅಣ್ಣಯ್ಯಾ, ಭವಣೆಯನ್ನು ಕಂಡೆಯಷ್ಟೆ? ಇನ್ನೇತರ ಸುಖಕ್ಕೆ ನಾನು ಬಾಳಿರುವುದು? ಇಷ್ಟು ದಿವಸಗಳು ಹೇಗೂ ಕಳೆದವು. ನಾಲ್ಕು ಕಾಸು ಸಂಪಾದಿಸಿದೆನು, ವೆಚ್ಚಮಾಡಲೂ ಮಾಡಿದೆನು. ಇನ್ನು ಜೀವನವೇ ಭಾರವಾಗಿ ಕಾಣುತ್ತೆ. ಇಂದಿರೆಯ ಮುಖವನ್ನು ಹೇಗೆ ನೋಡಲಿ? ಎಂದಾಲೋಚಿಸುವಾಗ ಕ್ಷಣೇಕ್ಷಣೇ ಕಣ್ಣಿನಲ್ಲಿ ಅರಸಿನದ ಹುಡಿ ಹಾಕಿದಂತಾಗುತ್ತಷ್ಟೆ?" ಎಂದಪರಿಮಿತ ದುಃಖದಿಂದ ಶಂಕರರಾಯನ ಪಾದಗಳ ಮೇಲೆ ತಲೆಯನ್ನಿಟ್ಟು ಹೋ! ಎಂದು ಕೂಗಿದನು. ಶಂಕರರಾಯನು "ಈ ಪ್ರಪಂಚವೆಂಬುದೇನೆಂದು ಎಲ್ಲರೂ ತಿಳಿದಿರುವ ವಿಷಯ ತಾನೇ. ಇದೊಂದು ಅಗಾಧವಾದ ನರಕದ ಕುಂಡವೇ. ನಾವೆಲ್ಲರೂ ಅದರಲ್ಲಿ ಹೊರಳಾಡುತ್ತಿರುವ ಕ್ರಿಮಿಗಳು. ನಮ್ಮಲ್ಲಿ ಕೆಲವರು ದೊಡ್ಡವರು, ಕೆಲವರು ಸಣ್ಣವರು, ಕೆಲವರು ಸೌಖ್ಯದಲ್ಲಿರುವವರು, ಕೆಲವರು ಬಚ್ಚಿ ಸಾಯಲಿಕ್ಕಿರುವವರು, ಎಂಬೀ ತರಗತಿಗಳ ಅರ್ಥವೇನೆಂದರೆ ಕೆಲವರು ಈ ಕುಂಡದಲ್ಲಿದ್ದ ರೋತೆಯನ್ನು ಹೆಚ್ಚು ತಿಂದು ಬೆಳೆದವರು, ಕೆಲವರು ಸ್ವಲ್ಪವನ್ನೇ ತಿಂದವರೆಂತ ಮಾತ್ರವಲ್ಲದೆ ಬೇರೇನಲ್ಲ. ಕಡೆಗೆ ಅವರವರ ಕಾಲಬಂದಾಗ ಚಿಕ್ಕವರೂ ದೊಡ್ಡವರೂ ಈ ಕುಂಡದಲ್ಲಿ ತಾನೇ ಸಾಯುವುದಲ್ಲದೆ ಇದರಿಂದ ಪಾರಾಗುವ ದಾರಿ ಇದೆಯೇ? ಈ ಹೊತ್ತು ಈತನು, ನಾಳೆ ನಾನು, ನಾಡದು ಇನ್ನೊಬ್ಬನು, ಆಚೆಯನಾಡದು ಮತ್ತೊಬ್ಬನು,– ಏವಂಚ ಕಾಲದಲ್ಲಿ ಮಾತ್ರ ತುಸಾ ಹೆಚ್ಚುಕಡಿಮೆಯಾದರೂ ಎಲ್ಲರೂ ಈ ಕುಂಡದಲ್ಲೇ ಸಾಯಬೇಕಲ್ಲದೆ ಬೇರೇನು ಉಪಾಯವಿದೆ? ಇದನ್ನೆಲ್ಲ ನೀನು ತಿಳಿದವನು ತಾನೇ. ಅಜ್ಞಾನಿಗಳಂತೆ ದುಃಖವನ್ನು ಸುತ್ತಿಕೊಂಡು ವೃಥಾ ದೇಹ ಕ್ಷೀಣತೆಯನ್ನುಂಟುಮಾಡಿಕೊಳ್ಳಬೇಡಪ್ಪಾ. ಜನನವೂ ಮರಣವೂ ದೇವರ ಅಧೀನದಲ್ಲ್ಯಲ್ಲವೇ?" ಎಂದು ತಮ್ಮನನ್ನು ನಾನಾ ಪ್ರಕಾರದಲ್ಲಿ ಸಂತೈಸಿದನು.

ಭೀಮರಾಯನು ಅಗ್ರಜನ ಮಾತುಗಳೆಲ್ಲವನ್ನು ಕೇಳಿ, ಸ್ವಲ್ಪ ಸಮಾಧಾನಪಟ್ಟು, "ಅಣ್ಣಯ್ಯಾ, ಮುಂದೇನು ಮಾಡೋಣ? ಅಂಬಾಬಾಯಿ, ಇಂದಿರೆ ಇವರನ್ನು ಇಲ್ಲಿಗೆ ತಾನೇ ಕರೆಯಿಸುವುದೋ, ಅಲ್ಲ, ಅವರ ಕಾರ್ಯಗಳನ್ನೆಲ್ಲ ಮುಗಿಸಿದ ಬಳಿಕ ನಾವೇ ಮನೆಗೆ ಹೋಗಿ ಈ ವಿದ್ಯಮಾನವನ್ನು ತಿಳಿಸುವುದೋ, ಹೇಗೆ ಮಾಡುವುದು ಯೋಗ್ಯವೆಂದಾಲೋಚಿಸಿ ಹೇಳಬೇಕಷ್ಟೆ" ಎನಲು, "ಯಾವ ಕಷ್ಟ ಬಂದರೂ ಅದರ ವೇದನೆಯನ್ನು ಒಂದೇ ಸಲ ಅನುಭವಿಸಿಬಿಡುವುದೇ ಉತ್ತಮವಲ್ಲದೆ ಅದರ ಅಂಶಗಳನ್ನು ಅಲ್ಲಲ್ಲುಳಿಸಿ, ಕ್ಷಣೇಕ್ಷಣೇ ಅವುಗಳ ವೇದನೆಯನ್ನನುಭವಿಸುವುದು ಅತಿ ಸಂಕಟಕರವಾದ ವಿಷಯವೆಂದು ತೋರುತ್ತೆ. ಆದುದರಿಂದ ಅವರಿಗೂ ನೋಡಲಪೇಕ್ಷೆಯುಳ್ಳ ಬೇರೆ ಎಲ್ಲರಿಗೂ ಈಗಲೇ ಸುದ್ದಿಕೊಟ್ಟು ಕರೆಯಿಸಿಕೊಂಡು, ಮುಂದಿನ ಕಾರ್ಯಗಳನ್ನು ನೋಡುವುದೆಂದು ನನ್ನ ಆಲೋಚನೆ" ಎಂದು ಉತ್ತರ ಕೊಡಲು, "ಹಾಗಾದರೆ, ಅಣ್ಣಯ್ಯಾ, ನನ್ನಿಂದೇನೂ ಕೂಡುವುದಿಲ್ಲ. ನೀನೇ ಹೋಗಿ

ಜಾಗ್ರತೆಯಿಂದಲೂ ಸಮಾಧಾನದಿಂದಲೂ ಈ ಸುದ್ದಿಯನ್ನು ಮನೆಯಲ್ಲಿ ತಿಳಿಸಿ, ಇಂದಿರೆಯು ತನ್ನ ಜೀವಕ್ಕೇನಾದರೂ ಅಪಾಯ ತರಿಸುವ ಹಾಗೆ ಪ್ರವರ್ತಿಸದಂತೆ ಬೇಕಾದ ಜಾಗ್ರತೆ ತೆಗೆದುಕೊಂಡು, ಅವರನ್ನೆಲ್ಲ ಸಾರೋಟಿನಲ್ಲಿ ಕುಳ್ಳಿರಿಸಿ, ಸಾರೋಟಿನ ಕಿಟಿಕಿಗಳ ಬಾಗಿಲುಗಳನ್ನು ಮುಚ್ಚಿ ನೆಟ್ಟಗೆ ಇಲ್ಲಿ ತಂದು ಬಿಟ್ಟರಾಗಬಹುದು, ಈ ಕೆಲಸಕ್ಕೆ ಅನ್ಯರು ಹೋಗುವುದು ನ್ಯಾಯವಲ್ಲವಷ್ಟೆ?" ಎಂದು ಹೇಳಿ ಶಂಕರರಾಯನನ್ನು ಮನೆಗೆ ಕಳುಹಿಸಿದನು.

## ೩೮

ಶಂಕರರಾಯನು ಬಂಗಲಾದಿಂದ ತಮ್ಮನ ಮನೆಗೆ ಬಂದನು. ಅವನು ಕಣ್ಣುಗಳನ್ನೊರಸಿ ಕೊಳ್ಳುತ್ತಾ ಜಗಲಿ ಹತ್ತಿ ಬರುವುದನ್ನು ಕಂಡು, ಅಂಬಾಬಾಯಿಯು ಶ್ಯಾಮನನ್ನು ಕರೆದು–"ಅಗೋ ಕಣ್ಣೊರಸಿಕೊಳ್ಳುತ್ತಾ ಬರುತ್ತಿದ್ದಾರೆ. ನನಗೆ ಕಳವಳ ಹುಟ್ಟುತ್ತೆ. ಬಂಗಲಾದಲ್ಲಿಯ ವರ್ತಮಾನವೇನೆಂದು ಕೇಳು" ಎಂದು ಹೇಳುವಷ್ಟರಲ್ಲಿ ಶಂಕರರಾಯನು ಅವಳಿದ್ದಲ್ಲಿಗೆ ಮುಟ್ಟಿ, "ವರ್ತಮಾನವೇನೆಂದು ಹೇಳಲಿ! ಸಂಸಾರದಲ್ಲಿ ಎಲ್ಲರಿಗೂ ಬರುವಂಥಾದ್ದೇ, ಈ ಹೊತ್ತು ಆ ಪ್ರಾಣಿ, ನಾಳೆಯೋ ಇನ್ನ್ಯಾವಾಗಲೋ ನಾವೆಲ್ಲರು, ಪ್ರಪಂಚ ಜನನದ ಹಿಂದೆಯೇ ಮರಣವಿದೆಯಷ್ಟೆ!" ಎಂದು ತಿರಿಗಿ ಕಣ್ಣುಜ್ಜಿಕೊಳ್ಳಲು, ಅಭಿಪ್ರಾಯ ತಿಳಿದು ಅಂಬಾಬಾಯಿಯು "ಶ್ಯಾಮಾ, ಮಗುವೆಲ್ಲಿ? ಬೇಗನೆ ಇಲ್ಲಿಗೆ ಕರೆದು ತಂದು ಕುಳ್ಳಿರಿಸಿ, ಎಚ್ಚರಿಕೆಯಿಂದ ಕಾಯುತ್ತಿರು. ನನಗೆ ಮೈಯಲ್ಲೇನಾಗುತ್ತದೆಂದು ಹೇಳಲಾರೆ. ಪ್ರಾಣವು ಈಗಲೇ ಹೋಗುತ್ತೇನೋ, ಹೋದರೆ ಲೇಸಿತ್ತು. ಹುಡುಗಿಯನ್ನು ನೋಡಿಕೋ, ಹರಹರಾ! ವಿಧಿಯೇ! ಇದನ್ನೆಲ್ಲ ನೋಡುವುದಕ್ಕೇನೇ ನಾನು ಜೀವಿಸಿದ್ದದ್ದೇನೋ! ದೇವರೇ!" ಎಂದು ಎದೆ ಎದೆ ಬಡೆದುಕೊಂಡು, ಮೂರ್ಛಿತಳಾದಳು. ಅಷ್ಟರಲ್ಲಿ ಶ್ಯಾಮನು ಒಳಗೆ ಮತ್ತೊಂದು ಕೋಣೆಯಲ್ಲಿ, ಭೂಮಿಯ ಮೇಲೆ ಮಲಗಿಕೊಂಡಿದ್ದ ಇಂದಿರೆಯನ್ನು "ಅವ್ವಾ! ಅವ್ವಾ! ನಿಮ್ಮ ತಾಯಮ್ಮನವರು ಕರೆಯುತ್ತಾರೆ" ಎಂದು ಹೇಳಿ, ಕರೆದುಕೊಂಡು ಬರಲು, ಅವಳು ತಾಯಿಯು ಮೂರ್ಛೆಯಲ್ಲಿರುವುದನ್ನು ಕಂಡು, "ದೊಡ್ಡಪ್ಪಯ್ಯಾ, ಇದೇನು ಬಂಗಲಾದಿಂದ ತಂದ ವರ್ತಮಾನದ ದೆಸೆಯೇ? ಆಯಿತೇ ಈ ಹೊತ್ತಿಗೆ ನನ್ನ ಬಾಳುವೆ? ಶ್ಯಾಮಾ ತಾಯಮ್ಮನವರು ಬೋಧಕ್ಷಯವಾಗಿ ಬಿದ್ದಿದ್ದಾರೆ. ಬೇಗನೆ ಅಷ್ಟು ತಣ್ಣೀರನ್ನು ತಂದು, ಮುಖದಲ್ಲಿ ಚಿಮಿಕಿಸು" ಎಂದು ಹೇಳಲು, ಅವನು ಓಡಿಹೋಗಿ, ನೀರನ್ನು ತಂದು, ಮುಖದ ಮೇಲೆ ಚಿಮಿಕಿಸಿದನು. ಇಂದಿರೆಯು ಒಂದು ಬೀಸಣಿಗೆಯಿಂದ ಗಾಳಿ ಹಾಕುತ್ತಾ, ಕುಳಿತಲ್ಲಿಯೇ ದುಃಖಾಶ್ರುಪಾತಗಳನ್ನು ಸುರಿಸುತ್ತಾ ಇರುವಾಗ, ಅಂಬಾಬಾಯಿಯು ಮೂರ್ಛೆಯಿಂದ ಎಚ್ಚತ್ತು ಎದ್ದು ಕುಳಿತುಕೊಂಡು, ಇಂದಿರೆಯನ್ನಪ್ಪಿಕೊಂಡು, ಅವಳೊಡನೆ ಹೇಗೆ ಮಾತನಾಡುವುದೆಂದು ತಿಳಿಯದೆ, ಅವಳ ಮುಖವನ್ನೇ ನೋಡುತ್ತಾ, ಕಣ್ಣೀರು ಸುರಿಸುತ್ತಾ, ಐದಾರು ನಿಮಿಷವಾದ ಮೇಲೆ, "ಅವ್ವಾ, ನಿನ್ನೊಡನೆ ಏನು ಮಾತನಾಡಬೇಕೆಂದು

ತಿಳಿಯುವುದಿಲ್ಲವಷ್ಟೆ! ಏನು ಮಾಡಲಿ! ಮಾತನಾಡುವುದಕ್ಕೆ ಬಾಯಿ ತೆರೆಯುವಾಗಲೇ ಕುತ್ತಿಗೆ ಹಿಡಿದೊತ್ತಿದ ಹಾಗಾಗುತ್ತೆ. ನಿನ್ನ ಗತಿಯು ಹೀಗಾದ ಮೇಲೆ ನಿನ್ನ ಕಣ್ಣೆದುರಿನಲ್ಲಿ ನಾನಿರುವುದು ಏತರ ಸೌಭಾಗ್ಯಕ್ಕೆ?" ಎಂದು ಹೀಗೆಲ್ಲ ದುಃಖದಿಂದ ಪ್ರಳಾಪಿಸುವಾಗ ಇಂದಿರೆಯು "ಅವ್ವಾ, ನಾನು ಚಿಕ್ಕ ಪ್ರಾಯದವಳೂ ಬುದ್ಧಿಯಿಲ್ಲದವಳೂ ದಿಟವೇ. ಆದರೂ ಕೆಲವು ಮಾತುಗಳನ್ನು ಆಡುತ್ತೇನೆ. ಲಾಲಿಸಿ ಕೇಳಬೇಕಷ್ಟೇ. ಈಗ ನಿನ್ನ ಈ ಪ್ರಳಾಪದಿಂದ ಒಂದೇ ಚಿಕ್ಕಾಸಿನ ಪ್ರಯೋಜನವಿದೆಯೇ? ನನಗೋಸ್ಕರ ನೀನು ಚಿಂತೆಪಡುವದು ಈಗಲೇ? ನೀನೂ ಅಪ್ಪಯ್ಯನೂ ಚಿಂತಿಸಬೇಕಾದ ಸಮಯವು ಬೇರೆ ಇತ್ತಲ್ಲವೇ? ಆಗ ನೀವು ತುಸಾ ಚಿಂತಿಸುತ್ತಿದ್ದರೆ, ಈ ಭವಣೆ ಬರುವುದಕ್ಕಿತ್ತೇ? ನಾನಂತೂ ಬುದ್ಧಿ ಸಾಲದವಳಾಗಿದ್ದೆನು; ನೀವಾದರೋ, ವಾದ್ಯಗಳೋ, ಸೂಳೆಯರ ಮೇಳಗಳೋ, ದಶಾವತಾರದ ಆಟಗಳೋ, ಭಕ್ಷ್ಯ ಪರಮಾನ್ನಗಳೋ, ಮುಂತಾದ ವಿಷಯಗಳ ಕಡೆಗೆ ತಾನೇ ಮನಸ್ಸು ಕೊಟ್ಟಿರಿ. ಆಮೇಲಾದರೂ ಮುಂದಿನ ಪರಿಣಾಮವನ್ನಾಲೋಚಿಸುವುದಕ್ಕೆ ಬದಲಾಗಿ ಜೋಡು ಜೋಡು ಸೂಳೆಯರನ್ನು ಒದಗಿಸಿಕೊಟ್ಟಿರಿ. ಯಾವುದೊಂದು ಬಗೆಯ ವಿದ್ಯಾಭ್ಯಾಸವೋ ವೃತ್ತಿಯೋ ಮಾಡದೆ ಹಗಲು ರಾತ್ರಿ ಸ್ರಕ್ಚಂದನ ನವನೀತಾದಿ ಭೋಗಗಳ ವಿಲಾಸದಲ್ಲೇ ಮಗ್ನನಾಗಿ ಮೈಮರೆತು, ಸೂಳೆಯರ ಸೆರಗಿನಲ್ಲಿ ಬಿದ್ದು, ಧನನಷ್ಟ, ಮಾನನಷ್ಟ, ಆರೋಗ್ಯನಷ್ಟ, ಕಟ್ಟ ಕಡೆಯಲ್ಲಿ ಪ್ರಾಣವೇ ನಷ್ಟವಾಗುವ ಹಾಗೆ ಮನಸ್ವಿಯಾಗಿ ಚಡುಗು ಬುದ್ಧಿಯಿಂದ ನಡೆಯುವುದಕ್ಕೆ ಬಿಟ್ಟಮೇಲೆ ಅದರ ಫಲಪರ್ಯವಸಾನವು ಈ ಭವಣೆಯೇ ಅಲ್ಲದೆ ಬೇರೇನಿತ್ತು? ಈಗ ನನ್ನ ಜನ್ಮವೇ ನಷ್ಟವಾಯಿತಷ್ಟೆ? ಇನ್ನು ನೀವು ಈ ವರೆಗೆ ವ್ಯಯಮಾಡಿದ ಹಣದ ಸಾವಿರ ಪಾಲಷ್ಟು ಹಣವನ್ನು ವೆಚ್ಚಮಾಡಿ ತಲೆ ತಲೆ ಬಡಿದುಕೊಂಡರೂ, ಹೋದ ಜೀವ ಮರಳುವ ಮಾತಿದೆಯೇ? ನಾನೀಗ ನಿಮ್ಮನ್ನು ದೂರುತ್ತೇನೆಂದು ಸರ್ವಥಾ ತಿಳಿದುಕೊಳ್ಳಬೇಡ. ದೇವರೇ ನನ್ನ ಮೇಲೆ ಮುನಿದ ಮೇಲೆ ಯಾರಿಗೆ ದೂರಿ ಏನು ಕಾರ್ಯ? ನನ್ನ ಸಂಕಷ್ಟಗಳ ವೇದನೆಯನ್ನು ಸಹಿಸಕೂಡದೆ, ನಾಲ್ಕು ಮಾತುಗಳನ್ನಾಡಿದೆನು. ತಪ್ಪಿದ್ದರೆ ಕರುಣವಿಟ್ಟು ಕ್ಷಮಿಸು. ಮುಂದಿನ್ನು ನನಗೇನು ಗತಿಯೋ ದೇವರೇ! ನಾನು ಯಾವ ಪಾಪಪುಣ್ಯವನ್ನಾದರೂ ತಿಳಿದವಳಲ್ಲವಷ್ಟೆ! ಸಹಿಸಕೂಡದ ಈ ಶಿಕ್ಷೆಗೆ ನಾನು ಹೇಗೆ ಪಾತ್ರಳಾದೆನಪ್ಪಾ!" ಎಂದು ನಿಟ್ಟುಸುರಿಟ್ಟು, ತಾಯಿಯ ಕಾಲುಗಳ ಮೇಲೆ ಬಾಗಿ ಮಲಗಿಕೊಂಡಳು. ಅಂಬಾಬಾಯಿಯು ಮಗಳನ್ನು ಹೇಗೆ ಸಂತೈಸುವುದೆಂಬ ಬಗೆಯನ್ನರಿಯದೆ, ಕಣ್ಣೀರು ಸುರಿಸುತ್ತಾ ಇರುವಾಗ ಶಂಕರರಾಯನು, "ಶ್ಯಾಮಾ, ಇವರು ಬಂಗಲಾವಿಗೆ ಹೋಗುವುದಕ್ಕೆ ಮನಸ್ಸಿದ್ದರೆ ಬರಲೆಂದು ಭೀಮರಾಯ ಹೇಳಿದ್ದಾನೆ. ಹೊರಡುವುದಾದರೆ ಬೇಗನೆ ಹೊರಡಲಿ. ಹೊರಗೆ ಸಾರೋಟು ನಿಂತಿದೆ. ಸುಮ್ಮಗೆ ಈಗ ದುಃಖದಿಂದ ಬಳಲಿ ಬೆಂಡಾದುದರಿಂದ ಪ್ರಯೋಜನವಿಲ್ಲ" ಎನಲು, ಇಂದಿರೆಯು "ನನಗೆ ಮನಸ್ಸಿದೆ. ನಾನು ಬರುತ್ತೇನೆ. ಸಾರೋಟು ನನಗೇಕೆ? ನಾನು ನಡೆಯುವೆನು. ಅವ್ವಾ ನೀನು ಬರುತ್ತೀಯಾ? ಎದ್ದೇಳು, ಹೋಗಿಬರೋಣ" ಎಂದು ತಾಯಿಯ ಸಮೇತ ಹೊರಟು,

“ದೊಡ್ಡಪ್ಪಯ್ಯಾ, ತಾಯಮ್ಮನವರು ನಡೆಯಲಶಕ್ಯರು. ಅವರನ್ನು ಸಾರೋಟಿನಲ್ಲಿ ಕರೆದುಕೊಂಡು ಹೋಗು. ನಾನು ಶ್ಯಾಮನನ್ನು ಸಂಗಡ ಕರೆದುಕೊಂಡು ನಡೆದುಬರುತ್ತೇನೆ” ಎಂದಳು. ಆಗ ಅಂಬಾಬಾಯಿಯು, “ಅವ್ವಾ, ಅದು ಸರಿಯಲ್ಲ,–ಅಯ್ಯೋ! ಹೇಗೆ ಹೇಳಲಿ!–ನೀನಿನ್ನೊಂದು ವರುಷ ಪರ್ಯಂತರ ಮನೆಯವರಿಗಲ್ಲದೆ ಅನ್ಯರ್‍ಯಾರಿಗೂ ಮುಖ ತೋರಿಸಬಾರದೆಂದು ಹಿರಿಯರ ಕಟ್ಟಳೆ ಇದೆ. ಸಾರೋಟಿನಲ್ಲಿ ಹೋಗೋಣ” ಎಂದು ಹೇಳಲಾಗಿ ಅವಳು, “ಓಹೋ! ಇಷ್ಟಾದ್ದು ಸಾಲದೇ? ಇನ್ನು ಬೇರೆ ಬಗೆಯ ಕಷ್ಟಗಳೂ ಇವೆಯೆ?” ಒಂದು ವರುಷದ ನಂತರ ಕಾಣಿಸಬಹುದಾದ ಮುಖವನ್ನು ಈ ಹೊತ್ತು ಕಾಣಿಸಿದುದರಿಂದ ದೋಷವೇನೆಂದು ಒಂದು ನಿಮಿಷ ತನ್ನೊಳು ತಾನೇ ಆಲೋಚಿಸಿ, ಕಡೆಗೆ ಹೇಗೂ ಇರಲಿ, ಈಗ ತರ್ಕಿಸುವುದು ಸರಿಯಲ್ಲವೆಂದು ಅಭಿಪ್ರಾಯಪಟ್ಟು, “ಹಾಗಾಗಲವ್ವ, ನೀನು ಹೇಳಿದಂತೆಯೇ ಸಾರೋಟಿನಲ್ಲಿ ತಾನೇ ಹೋಗೋಣ” ಎಂದು ಹೇಳಿ, ತಾಯಿಯನ್ನು ಕರೆದುಕೊಂಡು ಸಾರೋಟಿನಲ್ಲಿ ಕುಳಿತುಕೊಳ್ಳಲು, ಸೋಮಯ್ಯನು ಅದರ ಕಿಟಕಿಗಳನ್ನು ಮುಚ್ಚಿ, ಸಾರೋಟನ್ನು ತ್ರಿಯಂಬಕರಾಯನ ಮನೆಯ ಬಳಿಗೆ ತರಲು, ಅಂಬಾಬಾಯಿಯು ಕೆಳಗಿಳಿದು ಒಳಗೆ ಹೋಗಿ, ಒಂದು ಕೋಣೆಯಲ್ಲಿ ಮಲಗಿಕೊಂಡು ದುಃಖಮಾಡುತ್ತಿದ್ದ ಚಂದ್ರಭಾಗಿಯನ್ನು ಸಂತೈಸಿ ಎಬ್ಬಿಸಿ, ಕೈಹಿಡಿದುಕೊಂಡು ಬಂದು, ಸಾರೋಟಿನಲ್ಲಿ ಕುಳ್ಳಿರಿಸಿ, ಸಾರೋಟು ಮುಂದರಿಸುತ್ತಿರುವಾಗ ಅಂಬಾಬಾಯಿಯು ಇಂದಿರೆಯ ಹಣೆಯ ಮೇಲೆ ಇದ್ದ ಕುಂಕುಮದ ಬೊಟ್ಟನ್ನು ಆಕೆಗೆ ತಿಳಿಯದ ಹಾಗೆ ಉಜ್ಜಿತೆಗೆಯುವುದಕ್ಕೆ ಬೇಕಾದ ಉಪಾಯಗಳನ್ನು ಮನಸ್ಸಿನಲ್ಲಾಲೋಚಿಸಿ, “ಅವ್ವಾ, ಎಷ್ಟು ದುಃಖಿಸುವಿ?” ಎಂದು ಹೇಳಿ, ತನ್ನ ಸೀರೆಯ ಸೆರಗಿನಿಂದ ಕಣ್ಣುಗ್ಗಳನ್ನು ಉಜ್ಜುವಾಗ, ಉಪಾಯದಿಂದ ಆ ಬೊಟ್ಟನ್ನು ಉಜ್ಜಿತೆಗೆದಳು. ಇಂದಿರೆಯು ಆ ಚಮತ್ಕಾರವನ್ನು ತಿಳಿದು, “ಏಕವ್ವಾ, ನಾನೇ ಉಜ್ಜಿತೆಗೆಯುತ್ತಿದ್ದೆನಷ್ಟೆ? ನನಗಿನ್ನೇಕೆ ಬೊಟ್ಟು?” ಎಂದಳು. ಸಾರೋಟು ಮುಂದುವರಿಸಿ ಹೋಗಿ, ಬಂಗಲಾವಿನ ಹೆಬ್ಬಾಗಿಲಲ್ಲಿ ನಿಲ್ಲಲು, ಅವರೆಲ್ಲರೂ ಕೆಳಗಿಳಿದು ಒಳಗೆಹೋದರು.

## ೩೯

ಸ್ತ್ರೀಯರು ಬಂಗಲಾದೊಳಗೆ ಪ್ರವೇಶಿಸಿ ಮಂಚದ ಮೇಲಿರುವ ಹುಡುಗನ ಕಳೇಬರವನ್ನು ನೋಡಿ ಚಂದ್ರಭಾಗಿಯು ಹತ್ತಿರ ಹೋಗಿ ಮಂಚಕ್ಕೆ ತಲೆ ಚಾಚಿ, “ಮಗುವೇ, ಒಂಬತ್ತು ತಿಂಗಳ ವರೆಗೂ ನಿನ್ನನ್ನು ಹೊಟ್ಟೆಯಲ್ಲಿ ಹೊತ್ತೆನು. ಆ ಮೇಲೀವರೆಗೆ ನಿನ್ನ ಲಾಲನೆಪಾಲನೆಯಲ್ಲಿಯೇ ಸಂತೋಷಿಸುತ್ತಾ, ನಿನ್ನನ್ನು ಕಣ್ಣುತುಂಬಾ ನೋಡುತ್ತಾ, ಸ್ವಲ್ಪ ಮಾತ್ರ ನೀನು ದೃಷ್ಟಿಯಿಂದ ಹೊರಗಾದಾಗ ನಿನ್ನ ನೆನವರಿಕೆಯನ್ನೇ ಮಾಡುತ್ತಾ, ಕಂಡ ಮೇಲೆ ಪ್ರಮೋದಿಸುತ್ತಾ ಇದ್ದೆನಷ್ಟೆ! ನೋಡಿದ ಕಣ್ಣಿಗೆ ಮಣ್ಣುಮಾಡಿದೆಯಾ?” ಎಂದು ನಾನಾ ಪ್ರಕಾರವಾಗಿ ದುಃಖಿಸಿದಳು. ಇಂದಿರೆಯು ಮಂಚವೇರಿ ಮೃತಗಂಡನ ಪಾದಗಳನ್ನಪ್ಪಿ

ಹಿಡಿದುಕೊಂಡು, "ಅಯ್ಯೋ, ಯಾವ ವಿಧದಿಂದಾಲೋಚಿಸಿದರೂ ನಾನೇ ತಮ್ಮ ಕಣ್ಣಮುಂದೆ ಹೋಗಬೇಕಿತ್ತಷ್ಟೆ! ಚಿಕ್ಕಂದಿನಿಂದ ಸಾಯುವ ಪರ್ಯಂತರ ನಾನು ಕಷ್ಟಪಟ್ಟೇ ಇರಬೇಕೆಂದು ಈಶ್ವರ ಸಂಕಲ್ಪವಿತ್ತೇನೋ! ಹಾಗಲ್ಲವಾದರೆ ಬದುಕು ಬಾಳು, ಮನೆಮಾರು ಮುಂತಾದ ಸಕಲೈಶ್ವರ್ಯಗಳಿದ್ದಿರುವಾಗ ಇಲ್ಲಿ ಬಂದು ಸೂಳೆಯರ ಕೈಯಲ್ಲಿ ಬಿದ್ದು ಈ ಗತಿ ಹೊಂದಬೇಕಿತ್ತೇ? ಈಗ ಅವರು ಎಲ್ಲಿ? ಕಾಣುವುದಿಲ್ಲವಷ್ಟೆ! 'ಸೂಳೆಯ ನಂಬಿದವನ ಬಾಳು, ಗಾಳಿಗೊಡ್ಡಿದ ದೀಪ'ವೆಂಬ ಮಾತಿನ ದೃಷ್ಟಾಂತವನ್ನು ತೋರಿಸಿದಿರಾ? ಕೈಹಿಡಿದ ಹೆಂಡತಿಯ ನೆನಪು ರವಷ್ಟಾದರೂ ಇತ್ತೇ? ಒಂದೇ ಸಾರಿಯಾದರೂ ನನ್ನ ಕಡೆಗೆ ಕಣ್ಣೆತ್ತಿ ನೋಡಿದ್ದಿರಾ? ಹಾಗಾದರೂ ಚಿಂತಿಸದೆ ಕಾಲಕ್ರಮದಲ್ಲಿ ತಮ್ಮ ಕೃಪೆಯನ್ನು ಸಂಪಾದಿಸಿಕೊಳ್ಳುವೆನೆಂದು ನಂಬಿ ದಿವಸಗಳನ್ನು ಕಳೆದೆನು. ಕಟ್ಟಕಡೆಗೆ ನನ್ನನ್ನನಾಥೆಯಾಗಿ ಮಾಡಿಬಿಟ್ಟಿರೇ! ತಮ್ಮ ಕೈಹಿಡಿದಂದಿನಿಂದಿಂದಿನ ದಿನದ ವರೆಗೆ ತೃಣಭಾರದಷ್ಟಾದರೂ ಯಾವದಾದರೂ ಒಂದಪರಾಧವನ್ನು ನಾನು ಮಾಡಿದ್ದರೆ, ಈಗ ನನ್ನ ಸೆರಗಿನಲ್ಲಿ ಹಾಕುವುದು! ಅಯ್ಯೋ! ಹೆಣ್ಣು ಜನ್ಮವೇ!" ಎಂದು ದುಃಖಾಶ್ರುಪಾತಗಳನ್ನು ಸುರಿಸುತ್ತಾ ಅಲ್ಲಿಂದೆದ್ದು ತಂದೆಯ ಬಳಿಗೆ ಹೋಗಿ, ಅವನ ಕಾಲಿನ ಮೇಲೆ ಬಿದ್ದು, "ಅಪ್ಪಯ್ಯಾ! ಈಗೇಕೆ ತಲೆಬಗ್ಗಿಸಿಕೊಂಡು ಚಿಂತಿಸುತ್ತೀ? ಈಶ್ವರ ಸಂಕಲ್ಪ ಹೇಗೂ ಆಯಿತು. ಡಾಕ್ತರ್ ದೊರೆ ಬಂದು ಏನು ಹೇಳಿದನು? ಏನು ಮಾಡಿದನು? ಅಸ್ವಸ್ಥದ ಕಾರಣಗಳೂ ವಿವರಗಳೂ ನಿನಗೆ ಒಂದು ವೇಳೆ ತಿಳಿದದ್ದಿಲ್ಲವಾದರೂ, ಇಲ್ಲಿಯ ಜೀವನದ ಚರಿತ್ರವನ್ನಾದರೂ ನೀನು ಸಾಂಗವಾಗಿ ಅವನೊಡನೆ ಹೇಳಿದೆಯಾ? ಅವನು ದೇಹ ಪರೀಕ್ಷಿಸಿ ನೋಡಿದನೇ? ಏನೇನೆಲ್ಲಾಯಿತೆಂಬುದನ್ನಾದರೂ ಕೇಳುತ್ತೇನೆ. ಹೇಳಪ್ಪಯ್ಯಾ! ನಾನಿನ್ನು ಯಾರನ್ನು ದೂರಲಿಕ್ಕೇನೂ ಇಲ್ಲ. ನನ್ನ ವಿಧಿಯಲ್ಲಿದ್ದದ್ದಾಯಿತು! ಏಕಪ್ಪಯ್ಯಾ, ಮೌನಹಿಡಿದು ಕುಳಿತಿದ್ದಿ? ನಾನು ನಿನಗೂ ಬೇಡವೆಂದಾಯಿತೆ! ಅಯ್ಯೋ! ನನ್ನಂತಹ ಕರ್ಮಿಯು ಈ ಲೋಕದಲ್ಲ್ಯಾರಾದರೂ ಹುಟ್ಟಲಿಕ್ಕುಂಟೆ! ಅಪ್ಪಯ್ಯಾ, ನಾನು ಹೀಗೆಲ್ಲ ಮಾತನಾಡುವುದರಿಂದ ನಿನಗೆ ಬೇಸರುಂಟಾಗುವುದಾದರೆ ಇನ್ನು ಮಾತನಾಡುವುದಿಲ್ಲ" ಎನಲು, ಭೀಮರಾಯನು "ನನ್ನ ಚಿನ್ನವೇ, ನಾನಿಂಗೇನು ಹೇಳಲಿ! ಹೇಳಿಯೂ ಪ್ರಯೋಜನವೇನು? ಏನೇನೆಲ್ಲ ಮಾಡಬೇಕಿತ್ತೋ ಅದನ್ನೆಲ್ಲ ಮಾಡಿದ್ದಾಯಿತು. ಆದರೆ ಅದೆಲ್ಲ ನೀರಲ್ಲಿ ಮಾಡಿದ ಹೋಮದಂತೆ ನಿರರ್ಥಕವಾಯಿತು. ಈಗ ಅದನ್ನೆಲ್ಲ ಚರ್ಚಿಸಿ ಪ್ರಯೋಜನವೇನಿದೆ? ನಡೆದ ಸಂಗತಿಗಳನ್ನೆಲ್ಲ ವಿವರವಾಗಿ ಹಿಂದಣಿಂದ ಹೇಳುವೆನು. ಈಗ ಮಾತನಾಡುವುದಕ್ಕೂ ಯಾವ ಕೆಲಸವನ್ನಾದರೂ ಮಾಡುವುದಕ್ಕೂ ನನಗೇನೂ ಶಕ್ತಿಯಿದ್ದ ಹಾಗೆ ತೋರುವುದಿಲ್ಲ. ಈಗ ಸುಮ್ಮಗಿರು, ಚಿನ್ನಾ" ಎಂದು ಸಂತೈಸಿ ಅವಳನ್ನು ಅಂಬಾಬಾಯಿ ಇದ್ದಲ್ಲಿಗೆ ಕರೆದುತಂದು ಕುಳ್ಳಿರಿಸಿದನು. ಇಷ್ಟಾಗುವಾಗ ಪುರೋಹಿತ ಕಾಶೀನಾಥ ಭಟ್ಟನು ಕೈಯಲ್ಲಿ ಒಂದಿಷ್ಟು ದರ್ಭೆಯ ಹುಲ್ಲನ್ನು ಹಿಡಿದುಕೊಂಡು "ನಾರಾಯಣ! ನಾರಾಯಣ!" ಎನ್ನುತ್ತಾ ಒಳಗೆ ಬಂದು "ಈಗ ಯಾರೊಬ್ಬರೂ ದುಃಖಮಾಡಬೇಡಿರಿ. ಇದೆಲ್ಲ ಮನುಷ್ಯ ಸಂಸಾರದಲ್ಲಿ ಎಲ್ಲರಿಗೂ ಬರುವಂಥಾದ್ದು ತಾನೇ. ಈಗ ಹುಡುಗನ

ಮುಂದಿನ ಸದ್ಗತಿಯ ಕಾರ್ಯಗಳನ್ನೇ ನೋಡೋಣ" ಎಂದು ಹೇಳಿ, ಭೀಮರಾಯನನ್ನು ಕುರಿತು "ರಾಯರೇ, ಇತ್ತ ಬರ್‍ರಿ" ಎಂದು ಮತ್ತೊಂದು ಕೋಣೆಗೆ ಕರೆದುಕೊಂಡು ಹೋಗಿ ಅಂತರಂಗವಾಗಿ "ಸದ್ಯ, ಎಲ್ಲಾ ಕಾರ್ಯಗಳಿಗೆ ಮುಂಚೆ–ಅಯ್ಯೋ! ಹೇಗೆ ಬಾಯಿಂದುಚ್ಚರಿಸಲಿ! –ಹುಡುಗಿಯ ಕೇಶ ಛೇದನವಾಗಬೇಕಷ್ಟೆ? ನಾಪಿತನನ್ನು ಕರೆಯಿಸಿದ್ದೀರಾ?"

ಭೀಮರಾಯನು–"ಭಟ್ಟರೇ, ಅದು ಈಗಲೇ ಆಗಬೇಕೆ? ಊರಲ್ಲ್ಯದು ಸ್ವಲ್ಪ ದಿವಸ ಕಳೆದ ಮೇಲೆ ನಡೆಯುವ ಕಟ್ಟಳೆಯಲ್ಲವೇ?"

ಒಂದು ಚಿವುಟಿ ನಸ್ಯ ಸೇದಿ ಎರಡು ಶೀನು ತೆಗೆದು "ಪತಿಯ ಮರಣಾನಂತರ ಪತ್ನಿಯು ಕೇಶಛೇದನವಾಗದೆ ಸ್ನಾನ ಮಾಡಿದರೆ ಒಂದೊಂದು ಸಾರಿ ಸ್ನಾನಮಾಡುವಾಗ ಆಕೆಯ ಒಂದೊಂದು ಕೂದಲಿನಿಂದ ಎಷ್ಟು ಹನಿ ನೀರನ್ನು ಭೂಮಿಯ ಮೇಲೆ ಬೀಳಿಸುವಳೊ ಅಷ್ಟು ವರುಷಗಳ ಪರ್ಯಂತರ ಪತಿಯು ಅಘೋರವಾದ ನರಕದಲ್ಲಿ ಯಾತನೆಯನ್ನನು ಭವಿಸುವನೆಂದು ಶಾಸ್ತ್ರಾವಿಧಿ ಇದೆ. ಆದರೂ ದೇಶಾಚಾರ ಕಟ್ಟಳೆಯನ್ನು ಅನುಸರಿಸುವುದರಲ್ಲಿ ವಿರೋಧವಿಲ್ಲ."

"ಹಾಗಾದರೆ ಆ ಕಾರ್ಯವನ್ನು ಮುಂದಕ್ಕಿಟ್ಟು ಬೇರೆ ಕೆಲಸಗಳನ್ನು ಬೇಗ ಮುಂದರಿಸಿರಿ. ಭೂಮಿಗೆ ಹೆಚ್ಚು ಭಾರವಾಗಬಾರದಷ್ಟೆ" ಎಂದು ಹೇಳಿ ಹೊರಗೆ ಕಳುಹಿಸಿದನು.

ಇಷ್ಟರಲ್ಲಿ ಪೊಕ್ಕು ಸೆಟ್ಟಿಯು ಬಂಗಲಾದ ಹಿಂದುಕಡೆಯಲ್ಲಿ ಸಿದಿಗೆ ಮುಂತಾದ ಸಾಹಿತ್ಯಗಳನ್ನೂ ಬೇಕಾದ ಬೇರೆ ಜನರನ್ನೂ ಒದಗಿಸಿ ಸಿದ್ಧಮಾಡಿಟ್ಟನು. ಕಾಶೀನಾಥ ಭಟ್ಟನು ಆ ಜನರನ್ನು ಒಳಗೆ ಕರೆದು ಅವರಿಂದ ಶವವನ್ನು ಹೊರಗೆ ಹೊರಿಸಿದನು. ಆಗ ಇನ್ನೊಮ್ಮೆ ಸ್ತ್ರೀ ಪುರುಷರೆಲ್ಲರೂ ದುಃಖದ ಗೋಳಾಟಮಾಡಿದರು. ಕಾಶೀನಾಥ ಭಟ್ಟನು ಪುನಃ ಭೀಮರಾಯನನ್ನು ಒತ್ತಟ್ಟಿಗೆ ಕರೆದು, "ರಾಯರೇ, ಪ್ರಾಚೀನ ಕಾಲದಲ್ಲಿ ಪತಿಯು ಮರಣಪಟ್ಟರೆ ಪತ್ನಿಯು ಸಹಗಮನವಾಗಿ ಚಿತೆಯಲ್ಲಿ ಹಾರಿ, ಪತಿಯು ಸಂಗಡಲೇ ದಹನವಾಗಬೇಕೆಂಬ ಶ್ರುತಿವಾಕ್ಯವನ್ನನುಸರಿಸಿ ಎಷ್ಟೋ ಪತಿವ್ರತಾ ಸ್ತ್ರೀಯರು ಸಹಗಮನವಾಗಿದ್ದರು. ಈಗ ಮ್ಲೇಂಛರಿಗೆ ರಾಜ್ಯವಾದ ಮೇಲೆ ಆ ಪದ್ಧತಿಯು ನಿಂತಿದೆ. ಆದರೂ ಅನೇಕ ಸ್ತ್ರೀಯರು ಸ್ಮಶಾನದ ವರೆಗೆ ಹೋಗಿ ಚಿತೆಗೆ ಅಗ್ನಿ ಕೊಡುವಷ್ಟರ ಮಟ್ಟಿನ ಕಟ್ಟಳೆಯಾದರೂ ಇತ್ತಲಾಗಿ ಕೆಲವು ದಿವಸಗಳ ವರೆಗೆ ನಡೆದುಬಂದಿದೆ. ತಮ್ಮ ಮನಸ್ಸು ಹೇಗೆ? ಹುಡುಗಿಯನ್ನು ಕಳುಹಿಸುತ್ತೀರಾ?" ಎಂದು ಕೇಳಲು, ಅವನು, "ಇಂದಿರೆಯು ಚಿಕ್ಕ ಪ್ರಾಯದವಳು. ಇಲ್ಲಿಂದ ಸ್ಮಶಾನದ ವರೆಗೆ ನಡೆಯುವುದಕ್ಕೆ ಶಕ್ತಿಯಿಲ್ಲದವಳು ಮಾತ್ರವಲ್ಲ ದುಃಖದಿಂದ ಕಂಗೆಟ್ಟಿರುವುದರಿಂದ ಈಗ ಸಾಧಾರಣ ಊರಲ್ಲಿ ನಡೆಯುವ ಕಟ್ಟಳೆಯಂತೆಯೇ ಹೇಗೂ ಕೆಲಸ ಸುಧಾರಿಸಿ ಕೊಡಿರಿ. ಇನ್ನು ಸಾವಕಾಶ ಮಾಡಬೇಡಿ. ಕೆಲಸ ಮುಂದರಿಸಲಿ" ಎಂದು ಹೇಳಿ ತ್ರಿಯಂಬಕರಾಯನೊಡನೆ, "ಹೇಗೆ ರಾಯರೇ, ನಮ್ಮ ವಿಧಿಯಲ್ಲಿದ್ದದ್ದು ಬಂದು ಹೋಯಿತು. ಇನ್ನು ಸುಮ್ಮನೆ ಕಾಲಹರಣದಿಂದ ಭೂಮಿಗೆ

ಭಾರಮಾಡಿ ಪ್ರಯೋಜವೇನು? ಕೆಲಸ ಮುಂದರಿಸಲಷ್ಟೆ?'' ಎಂದು ಕೇಳಲು, ಅವನು ``ಕಟ್ಟುಕಟ್ಟಳೆಯ ಪ್ರಕಾರ ನಡೆಯಬೇಕಾದ್ದೆಲ್ಲ ನಡೆಯಬೇಕಷ್ಟೆ? ನಡೆಯುವ ಕೆಲಸ ನಡೆಯಲಿ'' ಎಂದು ಹೇಳಲು, ಕಾಶೀನಾಥ ಭಟ್ಟನು ಶವ ಹೊರುವವರನ್ನು ಕರೆದು, ``ಹೂಂ! ಎತ್ತಿರೊ!'' ಎಂದು ಹೇಳಿದನು. ಆಗ ಅವರೆಲ್ಲರು ``ನಾರಾಯಣ! ನಾರಾಯಣ!'' ಎನ್ನುತ್ತಾ ಶವವನ್ನು ಎತ್ತಿ ತೆಗೆದುಕೊಂಡರು. ತ್ರಿಯಂಬಕರಾಯನ ಅಣ್ಣನ ಮಗನಾದ ಕೃಷ್ಣರಾಯನು ಪರಕಾಳಿಯ ಮುಸುಕು ಹಾಕಿಕೊಂಡು ಹುಗ್ಗೆಕಟ್ಟದ ಒಂದು ಮಣ್ಣಿನ ಹೊಸ ಪಾತ್ರದಲ್ಲಿ ಅಗ್ನಿಯನ್ನು ಹಿಡಿದುಕೊಂಡು ಮುಂದಾಗಿ, ಶವವನ್ನು ಹೊತ್ತವರು ಹಿಂದಾಗಿ ಶವ ಸಂಸ್ಕಾರಕ್ಕೋಸ್ಕರ ಸ್ಮಶಾನಕ್ಕೆ ಹೋದರು.

ಆ ಮೇಲೆ ಭಿಮರಾಯನು ಮೊದಲಾಗಿ ಗಂಡಸರು ಸ್ತ್ರೀಯರನ್ನು ಸಂಗಡ ಕರೆದುಕೊಂಡು ಬಹುದುಃಖದಿಂದ ತಂತಮ್ಮ ಮನೆಗಳಿಗೆ ಬಂದು ಸೇರಿದರು.

## ೪೦

ವಿಠಲರಾಯನು ಮೃತನಾದ ಬಳಿಕ ಭೀಮರಾಯನಲ್ಲಿ ಒಂದೆರಡು ತಿಂಗಳ ಪರ್ಯಂತರ ಮನೋವ್ಯಥೆಯಲ್ಲಿಯೂ ದುಃಖದಲ್ಲಿಯೂ ಕಾಲಕ್ರಮಣವಾಯಿತು. ಆ ಮೇಲೆ ಭೀಮರಾಯ ಅಂಬಾಬಾಯಿ ಸಹ ಮೆಲ್ಲಮೆಲ್ಲನೆ ದುಃಖವನ್ನು ಹೇಗೆ ಮರೆಯುತ್ತಾ ಬಂದರೋ, ಹಾಗೆಯೇ ಬಡ ಇಂದಿರೆಯ ಸಂಕಷ್ಟಗಳು ಹೆಚ್ಚುತ್ತಾ ಬಂದವು. ಇಡೀ ಒಂದು ವರುಷ ಪರ್ಯಂತರ ಯಾರಿಗೂ ಮುಖವನ್ನು ತೋರಿಸಲಿಕ್ಕೂ ಯಾರೊಡನಾದರೂ ಮಾತನಾಡಲಿಕ್ಕೂ ಕೂಡದೆಂಬ ಕಟ್ಟಳೆಗೆ ಅನುಸಾರವಾಗಿ ನಡೆಯುವ ವಿಷಯದಲ್ಲಿ ದಿನ ಹೋಗುತ್ತಾ ಹೋಗುತ್ತಾ ಅವಳ ಮೇಲೆ ಕಠೋರವಾದ ಬಲಾತ್ಕಾರಗಳು ನಡೆದವು. ಈ ಹೊತ್ತು ತಲೆಯನ್ನು ಬಾಚಿಕೊಂಡಳೆಂತಲೂ, ನಾಳೆ ಕಪ್ಪು ಸೀರೆಯನ್ನುಟ್ಟಳೆಂತಲೂ, ಇನ್ನೊಂದು ದಿವಸ ಕುಪ್ಪಸ ತೊಟ್ಟಳೆಂತಲೂ, ಹೀಗೆಲ್ಲ ಆಗಾಗ್ಗೆ ಹಿಂದಿನಿಂದ ಮಾತನಾಡಿ ದ್ರೋಹಿಸಲಿಕ್ಕೆ ಪ್ರಾರಂಭಿಸಿದರು. ಪತಿವಿಯೋಗದ ಮನೋವ್ಯಥೆಯಿಂದಲೂ ದಿನೇ ದಿನೇ ಹೆಚ್ಚುತಾ ಬರುವ ದ್ರೋಹಗಳಿಂದಲೂ ಬಹಳ ಸಂಕಷ್ಟದಲ್ಲಿರುವಾಗ, ಹೇಗೂ ಸಮಯ ಹೋಗಲೆಂದಾಲೋಚಿಸಿ, ಒಂದಾನೊಂದು ದಿವಸ ಮೈರೆಯನ್ನು ಶಾರದಾಬಾಯಿಯ ಬಳಿಗೆ ಕಳುಹಿಸಿ, ``ನೀತಿಕಥೆಗಳು'' ಎಂಬ ಪುಸ್ತಕವನ್ನು ತರಿಸಿಕೊಂಡು ಓದುತ್ತಿರುವಾಗ ಅಂಬಾಬಾಯಿಯು ಕಂಡು,

``ಇಂದಿರೇ, ಏನವ್ವಾ? ವಿಧವಶಾತ್ ಬಂದೊದಗಿದ ಭವಣೆಯೇ ಸಾಲದೇ? ಇನ್ನು ಜಾತಿಕೆಡಲಿಕ್ಕೂ ಇದೆಯೇ? ನಮ್ಮ ದುರದೃಷ್ಟದಿಂದ ಬಂದ ಕಷ್ಟವನ್ನೇ ಸಹಿಸಕೂಡದಿರುವಾಗ, ನೀನು ಹೇಳಿದ ಬುದ್ಧಿಯನ್ನು ಕೇಳದೆ, ಮನಸ್ವಿಯಾಗಿ ನಡೆದುಕೊಳ್ಳುತ್ತೀಯಷ್ಟೆ? ಇದೆಲ್ಲ ಊರಲ್ಲಿ ಪ್ರಕಟವಾದರೆ–''

"ಏನವ್ವಾ? ನಾನೇನು ದುಷ್ಕೃತ್ಯ ಮಾಡಿದೆ?"

"ಅದನ್ನೇಕೆ ಹೇಳಲಿ! ನೀನು ಈಗ ಬರೇ ಚಿಕ್ಕ ಮಗುವಲ್ಲ. ಹಿರಿಯರ ಕಟ್ಟಳಗೆ ವಿರೋಧವಾಗಿ ನಡೆಯಬಾರದೆಂದು ನಿನಗೆಷ್ಟು ಹೇಳಿದರೂ ನೀನು ತಲೆಬಾಚಿಕೊಳ್ಳುವುದೋ ಕುಪ್ಪಸತೊಡುವುದೊ ಮುಂತಾದ ನಾಚಿಕೆಗೇಡಿನ ಕೆಲಸಗಳನ್ನು ಮಾಡುತ್ತಿದ್ದಿ. ನನ್ನ ಕರ್ಮಾಧೀನದಿಂದಲೇ ನಿನಗೀ ಬುದ್ಧಿ ಬಂದಿದೆ."

"ಅವ್ವಾ, ಬಹಳ ದಿವಸಗಳ ವರೆಗೆ ತಲೆ ಬಾಚಿಕೊಳ್ಳದೆ ತಲೆಯಲ್ಲಿ ಕೆಸರೂ, ಹೇನುಗಳೂ ಉಂಟಾಗಿ ತುರುಚಾಟದಿಂದ ನಿದ್ರೆ ಬರುವುದಿಲ್ಲ, ತಲೆಗೆ ಎಣ್ಣೆಯಿಲ್ಲದೆ ಕಣ್ಣುಗಳುರಿಯುತ್ತವೆಂಬುದರಿಂದ ಒಂದಿಷ್ಟು ಎಣ್ಣೆ ತಲೆಗಿಟ್ಟುಕೊಂಡು ಬಾಚಿಕೊಂಡೆನು. ಕುಪ್ಪಸ ತೊಡದೆ ಮೈ ಬಿಟ್ಟಿರುವುದು ಅಯೋಗ್ಯವೆಂದು ತಿಳಿದುಕೊಂಡು ತೊಟ್ಟೆನು. ಇವು ನಾಚಿಕೆಗೇಡಿನ ಕೃತ್ಯಗಳೆಂದು ನಾನು ತಿಳಿದಿರಲಿಲ್ಲ."

"ನೀನು ಈಗ ಓದುತ್ತಿದ್ದ ಪುಸ್ತಕವೆಲ್ಲಿಂದ ಬಂತು?"

"ನಾನು ಈಗಲೇ ಮೈರೆಯನ್ನು ಕಳುಹಿಸಿ ಶಾರದಾಬಾಯಿಯಲ್ಲಿಂದ ತರಿಸಿಕೊಂಡೆನು. ನಿನಗೆ ನಂಬಿಕೆ ಇಲ್ಲದಿದ್ದರೆ ಅವರಿಬ್ಬರ ಹತ್ತಿರವೂ ವಿಚಾರಿಸಿ ನೋಡು."

"ಅದಲ್ಲ, ಆ ಪುಸ್ತಕ ನೀನು ಯಾವ ಪ್ರಯೋಜನಕ್ಕಾಗಿ ಓದುತ್ತಿ?"

"ಅದರಲ್ಲಿ ಅನೇಕ ನೀತಿಕಥೆಗಳಿವೆ. ಅವುಗಳನ್ನು ಓದಿದ್ದರಿಂದ ನಮ್ಮ ಬುದ್ಧಿ ನಡತೆ ಶುದ್ಧವಾಗುತ್ತವೆ."

"ನಮ್ಮ ನಡತೆಯಲ್ಲಿ ಈಗೇನು ಕೊರತೆಗಳಿವೆ?"

"ನಮ್ಮ ಕೊರತೆಗಳು ನಮಗೆ ಕಾಣಿಸುವುದಿಲ್ಲ. ನಮಗೆ ಕಾಣಿಸುವುದು ಪರರ ಗುಣದೋಷಗಳು ತಾನೇ. ಆದುದರಿಂದ ಪರರ ಒಳ್ಳೇ ನಡತೆ ಯಾವುದೆಂದು ತಿಳಿದುಕೊಂಡು, ನಮ್ಮ ನಡತೆಯನ್ನು ತಿದ್ದುವುದು ಉತ್ತಮವಷ್ಟೆ?"

"ಅದಕ್ಕೆ ಮ್ಲೇಂಛರಾದ ಪಾದ್ರಿಗಳ ಪುಸ್ತಕಗಳನ್ನೇ ಓದಬೇಕೇ?"

"ಮ್ಲೇಂಛರೆಂದು ನೀನು ಯಾರನ್ನು ಹೇಳುತ್ತಿ ಎಂಬುದು ನನಗೆ ಈ ವರೆಗೆ ತಿಳಿಯಲಿಲ್ಲ. ನೀತಿಯ ಮಾತುಗಳನ್ನು ಮ್ಲೇಂಛರೂ ಮ್ಲೇಂಛರಲ್ಲದವರೂ ಹೇಳಿದರೂ ಆ ಮಾತುಗಳಿಗೆ ಒಂದೇ ಬೆಲೆ ಎಂದು ನನ್ನ ಬುದ್ಧಿಗೆ ಕಾಣುತ್ತೆ. 'ಕಳ್ಳತನ ಮಾಡಬೇಡ'ವೆಂದು ಒಬ್ಬ ಚಂಡಾಲನಾದರೂ ಹೇಳಬಹುದು. ಅವ್ವಾ, ನನಗಿಷ್ಟು ಸಂಕಷ್ಟಗಳು ಬಂದರೂ ಮರಣ ಬರುವುದಿಲ್ಲ. ಜೀವಿಸಿರುವ ವರೆಗೆ ಕೆಟ್ಟ ಕೆಲಸವನ್ನೇನೂ ಮಾಡದೆ, ಹೇಗೂ ದಿವಸ ಕಳೆಯಬಹುದೆಂದರೆ, ಕುಳಿತಿದ್ದಾಗಲಿಲ್ಲ, ನಿಂತಿದ್ದಾಗಲಿಲ್ಲವೆಂಬ ಹಾಗೆ ಮಾತನಾಡುವಿ. ಈ ಪ್ರಾಣವೇ ಹೋದರೂ ನಾನು ಭ್ರಷ್ಟಕೆಲಸವ್ಯಾವುದನ್ನಾದರೂ ಮಾಡುವೆನೆಂದು ಸ್ವಪ್ನದಲ್ಲ್ಯಾದರೂ ಗ್ರಹಿಸಬೇಡ. ಪುಸ್ತಕ ಓದುವುದನ್ನು ಕಂಡು, 'ಜಾತಿ ಕೆಡುವುದಕ್ಕೂ ಇದೆಯೇ?' ಎಂದು ಕೇಳಿದೆಯಷ್ಟೆ? 'ಶ್ರೀ' ಎಂಬ ಅಕ್ಷರ ತಿಳಿಯದ ನಿರಕ್ಷರಕುಕ್ಷಿಗಳು ಪುಸ್ತಕವನ್ನು ಸ್ವಪ್ನದಲ್ಲಿಯೂ ಕಾಣದೆ, ಎಷ್ಟು ಜನರು ಜಾತಿಕೆಟ್ಟಿದ್ದಾರೆಂಬುದು ನಿನಗೆ ಗೊತ್ತಿದೆಯಷ್ಟೆ?"

"ನಿನ್ನೊಡನೆ ಮಾತನಾಡಿದರೆ ನೀನು ಕುತರ್ಕಗಳನ್ನೇ ಮಾಡುತ್ತಿ. ಈಗಿನ ಮಕ್ಕಳಿಗೆ ಹೆತ್ತವರಿಗಿಂತ ಬುದ್ಧಿ ಹೆಚ್ಚು."

"ಅವ್ವಾ, ನಾನು ಮಾಡಬೇಕಾದ್ದು ಇಂಥಾದ್ದೇ ಎಂದು ಹೇಳು; ಅದರಂತೆಯೇ ನಡೆದುಕೊಳ್ಳುತ್ತೇನೆ."

"ನೀನು ಈಗ ವೈರಾಗ್ಯಪರವಾದ ವಿಷಯಗಳನ್ನೇ ಓದಬೇಕು. ಅದೇ ನಿನ್ನ ಜನ್ಮದ ಸಾರ್ಥಕವು."

"ಅದಕ್ಕೆ ನನ್ನ ಆಕ್ಷೇಪವೇನೂ ಇಲ್ಲ. ಹೇಗೂ ನನ್ನ ಸಮಯವನ್ನು ಯೋಗ್ಯವಾದ ರೀತಿಯಲ್ಲಿ ಕಳೆಯುವುದಕ್ಕೆ ಬೇಕಾದ ಮಾರ್ಗವನ್ನು ತೋರಿಸಿಕೊಡು, ದೇಹಾಂತ್ಯದ ವರೆಗೆ ಹಾಗೆಯೇ ನಡೆದುಕೊಳ್ಳುತ್ತೇನೆ."

ಅಂಬಾಬಾಯಿಯು ಮಗಳ ಮಾತುಗಳನ್ನು ಕೇಳಿ, ಇನ್ನು ಇವಳನ್ನು ತಕ್ಕ ಜಾಗ್ರತೆಯಲ್ಲಿಟ್ಟು, ಒಳ್ಳೇ ಮಾರ್ಗವನ್ನು ತೋರಿಸದಿದ್ದರೆ, ಮುಂದೆ ನಷ್ಟಭ್ರಷ್ಟಕ್ಕೆ ಕಾರಣವಾಗುವುದೆಂದು ಆಲೋಚಿಸಿ, ಭಯಪಟ್ಟು ಭೀಮರಾಯನು ಸಾಯಂಕಾಲದಲ್ಲಿ ಮನೆಗೆ ಬಂದ ಒಡನೆ, "ಇತ್ತ ಬರೋಣವಾಗಲಿ" ಎಂದು ಅವನನ್ನು ಮಂಚದ ಕೋಣೆಗೆ ಕರೆದುಕೊಂಡು ಹೋಗಿ ಅಂತರಂಗವಾಗಿ,

"ನಮ್ಮ ಇಂದಿರೆಯ ವಿಷಯದಲ್ಲಿ ನಾವು ಇನ್ನು ಮುಂದೆ ಹೆಚ್ಚಿನ ಜಾಗ್ರತೆಯನ್ನು ತೆಗೆದುಕೊಳ್ಳಬೇಕು. ಇನ್ನು ಸಡಿಲುಬಿಡುವುದು ಯೋಗ್ಯವಲ್ಲ; ಕುಟುಂಬದ ಕೀರ್ತಿಗೆ ನ್ಯೂನತೆ ಬರುವುದು."

"ಏನು! ಏನಾಯಿತು! ಅವಳು ಯಾವುದೊಂದು ದುಷ್ಕೃತ್ಯಕ್ಕೂ ಕೈಯೊಡ್ಡುವವಳಲ್ಲವೆಂದು ನಾನು ದಿಟವಾಗಿ ನಂಬಿದ್ದೆ. ಈಗೇನಾಯಿತು ಹೇಳು."

"ಅವಳು ಈ ಹೊತ್ತು ತಲೆಗೆ ಎಣ್ಣೆ ಇಟ್ಟು ಬಾಚಿಕೊಂಡು ಜಡೆ ಹೆಣೆದುಕೊಂಡಿದ್ದಾಳೆ!"

"ಅದೇನು ದೊಡ್ಡಮಾತು? ಅದು ಸಹಜವಲ್ಲವೇ? ತಲೆಯಲ್ಲಿದ್ದ ಕೆಸರೂ ಹೇನೂ ತೆಗೆದು ಸ್ವಚ್ಛಪಡಿಸುವುದು ದೋಷವೆ? ತಲೆಗೆ ಎಣ್ಣೆ ಇಲ್ಲದಿದ್ದರೆ ಕಣ್ಣಿಗೆ ಕೇಡಲ್ಲವೆ?"

"ಕುಪ್ಪಸ ತೊಟ್ಟಿದ್ದಾಳೆ!"

"ನೀನು ಹೇಳುವುದೇನು? ಮೈಬಿಟ್ಟು ತಿರುಗಾಡಬೇಕೇನು?"

"ಪಾದ್ರಿಯ ಪುಸ್ತಕ ಓದುತ್ತಾಳೆ! ಮುಂದೇನು ಗತಿ!"

"ಎಂಥಾ ಪುಸ್ತಕ?"

"ಎಂಥಾದ್ದೊ, ನೀತಿಕಥೆಗಳಂತೆ,–ಸುಡಗಾಡು ಕಥೆಗಳು!"

"ಅದರಿಂದ ಬರುವ ಕೇಡೇನು?"

"ಅಯ್ಯೋ! ನಾನೇನು ಕತ್ತೆ ಎಂದು ತಿಳಿದುಕೊಂಡಿದ್ದೀರಾ? ತಮ್ಮ ಬುದ್ಧಿಯೂ ಹೀಗಾಯಿತೇ? ಅಂಡಾರ ಕಂಬಳ, ಬಸ್ರೂರ ಜಪ್ಪಳ, ಕೋಟೇಶ್ವರ ಕೊಡೀ ಹಬ್ಬ,–ಮೂರೂ ಕಂಡರೆ ಮೋಚ! ಸರಿ! ಸರಿ! ಇನ್ನು ತಮಗೆ ನಾನೇಕೆ? ಇಷ್ಟು ದಿವಸ ನನ್ನ ಮಾತು

ಸ್ವಲ್ಪವೇನಾದರೂ ನಡೆಯಿತು. ಇನ್ನು ನಡೆಯುವ ಹಾಗಿಲ್ಲ. ನನಗೀಗಲೇ ಮರಣ ಬಂದರೆ ಪುಣ್ಯವಿದೆ. ಅಯ್ಯೋ ದೇವರೆ, ಕಡೆಗೆ ನನ್ನ ಗತಿ–"

"ಪ್ರಿಯಳೇ, ಸಿಟ್ಟಾಗಬೇಡ. ನಿನ್ನ ಮಾತನ್ನು ಈ ವರೆಗೆ ನಾನು ತೆಗೆದು ಹಾಕಿದ್ದಿದೆಯೇ? ಏನಾಗಬೇಕು ಹೇಳು, ನಿನ್ನ ಮನಸ್ಸಿನಲ್ಲಿದ್ದಂತೆಯೇ ನಡೆಯಿಸುತ್ತೇನೆ."

"ಹುಡುಗಿಗೆ ಮನಸ್ಸಿನಲ್ಲಿ ವೈರಾಗ್ಯ ಹುಟ್ಟುವಂತೆ ಏನಾದರೂ ಒಂದು ಉಪಾಯ ತೆಗೆಯಬೇಡವೆ."

"ಉಪಾಯವೇನು? ನೀನೇ ಹೇಳು."

"ಸಂತರನ್ನು ಕರೆಯಿಸಿ ಕೆಲವು ದಿವಸಗಳ ಪರ್ಯಂತರ ಎಡೆಬಿಡದೆ ಭಜನೆ, ಪಾರಾಯಣ, ಸಪ್ತಾಹ ಮುಂತಾದ್ದನ್ನು ಮಾಡಿಸಿ, ಆ ಸತ್ಕಾರ್ಯಗಳಲ್ಲಿ ಇಂದಿರೆ ಪ್ರವರ್ತಿಸಿ ಸಂತರ ಸೇವೆಮಾಡಿಕೊಂಡು ಭಕ್ತಿ ವೈರಾಗ್ಯವನ್ನು ಪಡೆಯುವ ಹಾಗೆ ಮಾಡುವುದು ಉತ್ತಮವೆಂದು ನಾನು ದೃಢವಾಗಿ ನಂಬುತ್ತೇನೆ."

"ಹಾಗಾಗಲಿ, ನಿಶ್ಚಯವಾಗಿ ನಿನ್ನಭೀಷ್ಟವನ್ನೀಡೇರಿಸುವೆನು."

ಈ ಪ್ರಕಾರ ಮಾತನಾಡಿ ಸಂತಮಂಡಲಿಯನ್ನು ತರಿಸುವುದೆಂದು ನಿಶ್ಚಯಿಸಿದರು.

## ೪೧

ಭೀಮರಾಯನಲ್ಲಿ ಹೀಗೆಲ್ಲ ಪ್ರಬಂಧಗಳು ನಡೆಯುವ ಕೆಲವು ದಿವಸಗಳ ಮುಂಚೆ ಸಂತಮಂಡಲಿಯು ಇಂದೂರಲ್ಲಿತ್ತು. ಅಲ್ಲಿ ಹೊಸತಾಗಿ ಕಟ್ಟಿಸಿದ ರಾಧಾಕೃಷ್ಣ ಮಂದಿರದಲ್ಲಿ ಮೂರ್ತಿ ಪ್ರತಿಷ್ಠೆಯ ಸಂಬಂಧದಲ್ಲಿಯೂ ಆ ಮಂದಿರಕ್ಕೊಪ್ಪಿದ ಯೋಗಾಭ್ಯಾಸವೇ ಮುಂತಾದ ಅನುಷ್ಠಾನಗಳನ್ನು ಕೈಕೊಳ್ಳುವುದಕ್ಕೋಸ್ಕರ ಕಟ್ಟಿಸಿದ ಗುಪ್ತಮಂದಿರದ ಪ್ರವೇಶೋತ್ಸವದ ಸಂಬಂಧದಲ್ಲಿಯೂ ಆ ಮಂಡಲಿಯವರನ್ನು ಅಲ್ಲಿಗೆ ಕರಿಸುವಣಾಗಿತ್ತು. ಮೂರ್ತಿ ಪ್ರತಿಷ್ಠೆಯ ಸಮಯದಲ್ಲಿ ವಾಸುದೇವ ತಂತ್ರಿಯು ಮಂದಿರದ ಗರ್ಭನಾಳಿಯನ್ನು ಶುದ್ಧೋದಕ ಪ್ರೋಕ್ಷಣೆಯಿಂದ ಪವಿತ್ರಪಡಿಸುತ್ತಾ ಅದರ ಹಿಂದುಕಡೆಯಲ್ಲಿ ಮುಟ್ಟಿದಾಗ ಅಲ್ಲಿ ಒಬ್ಬಾಕೆ ವೈರಾಗಿ ವಿಧವೆಯೂ ಸಂತರಲ್ಲಿ ಒಬ್ಬನೂ ಸಂತಧರ್ಮಸ್ಥಾಪನೆಯ ವಿಧಿಯನ್ನು ಸಾಂಗವಾಗಿ ಕೈಕೊಳ್ಳುವುದನ್ನು ಕಂಡು, ಏಕಕಾಲದಲ್ಲಿ ಏಕಸ್ಥಳದಲ್ಲಿ ಭಿನ್ನಭಿನ್ನ ವಿಧಿಗಳು ನಡೆಯುವುದು ಶಾಸ್ತ್ರವಿರುದ್ಧವಾದ್ದೆಂದು ಹೇಳಿ ವಾಸುದೇವ ತಂತ್ರಿಯು ತಾನು ನಡೆಯಿಸುತ್ತಿದ್ದ ತಾಂತ್ರಿಕ ವಿಧಿಯನ್ನು ನಡೆಯಿಸದೆ ಆ ಸಂಬಂಧದಲ್ಲಿಯೂ, ಗುಪ್ತಮಂದಿರದಲ್ಲಿ ಸುವಾಸಿನಿಯೊಬ್ಬಾಕೆಗೆ ಅವಳ ಪತಿಯ ಪರೋಕ್ಷದಲ್ಲಿ ಸಂತಧರ್ಮೋಪದೇಶ ಕೊಡೋಣಾಯಿತೆಂಬ ನಿರರ್ಥಕವಾದ ಒಂದು ವಾದ ಹುಟ್ಟಿ ಆ ಸಂಬಂಧದಲ್ಲಿಯೂ ಬುದ್ಧಿಶೂನ್ಯರಾದ ಕೆಲವರು ಸಂತಮಂಡಲಿ ಯವರೊಡನೆ ಚರ್ಚಿಸಿದುದರಿಂದ ಅವರು ಇಂದೂರಿನಿಂದ ಹೊರಟುಹೋಗಿ, ಅವರ ಸ್ವಂತ ವಾಸಸ್ಥಾನವಾದ ಶಿವಪುರಕ್ಕೆ ಹೋಗಿದ್ದರು. ಅಲ್ಲಿ ಸ್ವಲ್ಪ ದಿವಸದಲ್ಲಿ ಭಜನೆಯ ಸಪ್ತಾಹ

ನಡೆಯುತ್ತಿರುವಾಗ ಒಬ್ಬ ಸುವಾಸಿನಿಯನ್ನು ಸಂತಧರ್ಮೋಪದೇಶಕ್ಕೋಸ್ಕರ ಸಂತಮಂಡಲಿಯವರಲ್ಲೊಬ್ಬನು ಅಲ್ಲಿಂದ ಕರೆದುಕೊಂಡು ಬೇರೆ ಎಲ್ಲಿಗೋ ಹೋದ ತದಂಗದಲ್ಲಿ, ಕೆಲವು ಮಂದಿ ದುಷ್ಟರು ಕೂಡಿ ಅವರ ಮೇಲೆ ರಾಜಸ್ಥಾನದಲ್ಲಿ ದೂರು ಕೊಟ್ಟು ಅವನನ್ನು ಸೆರೆಹಿಡಿಸಿ, ಆ ಮೊಕದ್ದಮೆಯನ್ನು ಮೇಲಧಿಕಾರಸ್ಥಾನದಲ್ಲಿ ನಿರ್ಣಯಕ್ಕೋಸ್ಕರ ಕಳುಹಿಸುವ ಹಾಗೆ ಮಾಡಿದುದರಿಂದ ಕಮಲಪುರದಲ್ಲಿ ಕೆಲವು ದಿವಸಗಳ ನಂತರ ನಡೆಯಲಿಕ್ಕಿದ್ದ ವಿಚಾರಣೆಯ ಕಾಲದಲ್ಲಿ ಬೇಕಾದ ಹಣವೂ ಬೇರೆ ಸಹಾಯವೂ ದೊರಕದೇ ಇಡೀ ಮಂಡಲಿಯವರು ಬಹಳ ಯೋಚನೆಯಲ್ಲಿದ್ದಾಗ ಭೀಮರಾಯನು ಆ ಮಂಡಲಿಯ ಅಧ್ಯಕ್ಷರಿಗೆ ಬರೆದ ಈ ಕೆಳಗಿನ ಪತ್ರವು ಅಂಚೆಯ ದ್ವಾರಾ ಬಂದುಮುಟ್ಟಿತು. ಅದೆಂತೆಂದರೆ:

"ಶ್ರೀಮತ್ಪರಮಹಂಸ ತ್ರಿಕಾಲಾನುಷ್ಠಾನ ಧುರಂಧರ ಶಾಂತಾದಿಸದ್ಗುಣಾಲಂಕೃತ ಶ್ರೀ ಪಾಂಡುರಂಗ ಪಾದಾನುಗ್ರಹೀತ ಶಿವಪುರನಿಲಯ ಸಂತ ಶಿಖಾಮಣಿ ರಂಗಪ್ಪಯ್ಯನವರ ಪಾದಾರವಿಂದಂಗಳಿಗೆ ದಾಸಾನುದಾಸ ಕಿಮಾತ್ರಕಿಂಕರನಾದ ಹಂಪೇ ಭೀಮರಾಯನು ಸಾಷ್ಟಾಂಗವೆರಗಿ ಬಿನ್ನವಿಸುವುದೇನೆಂದರೆ:–

ಇತ್ತಲಾಗಿ ನನ್ನ ಗೃಹಕೃತ್ಯದಲ್ಲಿ ಸಂಭವಿಸಿದ ಪ್ರಳಯತುಲ್ಯವಾದ ಅವಾಂತರದ ವರ್ತಮಾನವು ತಮಗೆ ಶ್ರುತವಿರಬಹುದಷ್ಟೆ? ಅಂದಿನಿಂದಿಂದಿನವರೆಗೂ ದುಃಖಾರ್ಣವದಲ್ಲಿ ಬಿದ್ದು ಗೋಳಾಡುತ್ತೇವೆ. ಸಕಲ ಪ್ರಪಂಚವನ್ನು ತ್ಯಜಿಸಿದವರಾಗಿಯೂ ಕಾಮಕ್ರೋಧಾದಿ ಷಡ್ವೈರಿಗಳನ್ನು ಭಂಜಿಸಿದವರಾಗಿಯೂ ಪರಮಾರ್ಥ ಜ್ಞಾನದೀಪಕರಾಗಿಯೂ ಭಕ್ತವೈರಾಗ್ಯಾದಿ ಸಕಲ ಗುಣಸಂಪನ್ನರಾಗಿಯೂ ಇರುವ ತಾವು ದಾಸನ ಮೇಲೆ ಕೃಪಾಕಟಾಕ್ಷವನ್ನು ಬೆಳಗಿಸಿ, ಮಂಡಲಿ ಸಹ ಇಲ್ಲಿ ವರೆಗೆ ಚಿತ್ತೈಸಿ ನಮಗೆಲ್ಲರಿಗೂ, ಮುಖ್ಯವಾಗಿ ದುರಾದೃಷ್ಟೆಯಾದ ನನ್ನ ಮಗಳು ಇಂದಿರೆಗೂ ತಕ್ಕ ಜ್ಞಾನಮಾರ್ಗವನ್ನು ತೋರಿಸಿ, ಈ ದುಃಖಸಾಗರದಿಂದ ಕರೆಹೊಂದಿಸಿ, ರಕ್ಷಿಸಬೇಕಾಗಿ ಬಹುವಿನಯದಿಂದ ಪ್ರಾರ್ಥಿಸುತ್ತೇನೆ."

ಈ ಪತ್ರವನ್ನು ಓದಿನೋಡಿ, ಆ ಸಂತಶಿಖಾಮಣಿಯು ಮಂಡಲಿಯವರೆಲ್ಲರನ್ನು ಕರೆದು ಮಹಂತನೊಡನೆ,

"ಇಗೋ–ಶ್ರೀವಿಠಲನ ಮಹಿಮೆ! ಏನೆಂದು ವರ್ಣಿಸಲಿ! ಅವನ ಪಾದಗಳನ್ನು ನೋಡಲಪೇಕ್ಷಿಸಿ ಯಾತ್ರೆ ಮಾಡುವವರಿಗೆ ದಾರಿಯಲ್ಲೇನಾದರೂ ಸಂಕಷ್ಟಗಳು ಸಂಭವಿಸಿದಾಗ ವಿಧವಿಧವಾದ ರೂಪುಗಳನ್ನು ಧರಿಸಿಕೊಂಡು ಬಂದು, ಆ ಸಂಕಷ್ಟಗಳ ನಿವೃತ್ತಿ ಮಾಡಿದ ಅವನ ಮಹಿಮೆಯ ಚರಿತ್ರೆಯನ್ನು ನಾವು ಇಷ್ಟರ ವರೆಗೆ ಕೇಳಿದ್ದೇ ಸರಿ, ಕಂಡದ್ದಿಲ್ಲ. ಈಗ ನಮ್ಮ ಮಂಡಲಿಯವರಿಗೆ ಬಂದ ಸಂಕಷ್ಟವನ್ನು ಪರಿಹರಿಸಿಕೊಟ್ಟ ಬಗೆ ನೋಡು!" ಎಂದು ಹೇಳಿ, ಆ ಪತ್ರವನ್ನು ಅವನ ಕೈಯಲ್ಲಿ ಕೊಡಲು, ಅವನದನ್ನು ಓದಿನೋಡಿ, ಅಮಿತ ಪ್ರಣಾದದೊಡನೆ ಮಂಡಲಿಯವರಿಗೆಲ್ಲ ತೋರಿಸಲು, ಎಲ್ಲರೂ ಅತ್ಯಾನಂದದಿಂದ "ಜೈ ಜೈ ವಿಠಲ ರುಕುಮಾಯಿ" ಎಂದು ಒಂದು ಗಳಿಗೆಯ ವರೆಗೆ ಮಹೋನ್ನತ ಧ್ವನಿಯಿಂದ ಭಜನೆ ಮಾಡಿ, ಹಾರಿ ಕುಣಿದು ಚಪ್ಪಾಳೆ ಬಡೆದು, ವಿಪರೀತವಾದ ಘೋಷವನ್ನುಂಟು

ಮಾಡಿದರು. ಆ ಮೇಲೆ ಎಲ್ಲರೂ ಕುಳಿತು ವಿಶ್ರಾಂತಿಯನ್ನು ಪಡೆದು, ಮುಂದೆ ಮಾಡಬೇಕಾದ್ದೇನೆಂಬುದರ ಕುರಿತು ಮಾತನಾಡತೊಡಗಿದರು.

ಒಬ್ಬನು– "ಭೀಮರಾಯನೆಂದರ್‍ಯಾರು? ಕೆಲವು ವರುಷಗಳ ಹಿಂದೆ ಸುಂದರರಾಯನೆಂಬಾತನನ್ನು ವಿಷಹಾಕಿ ಕೊಂದನೆಂದು ಪೋಲೀಸಿನವರು ಸೃಷ್ಟಿಸಿದ ಒಂದು ಮೊಕದ್ದಮೆಯಲ್ಲಿ ಧೀರತೆಯಿಂದ ಜಯಿಸಿದ ಸತ್ಯಸಂಧನಲ್ಲವೇ?"

ಮತ್ತೊಬ್ಬನು– "ಹೌದು–ಆತ ತಾನೇ. ಯಥಾರ್ಥದಲ್ಲಿ ಅವನ್ಯಾರೆಂದು ಬಲ್ಲಿರಾ? ಸಾಕ್ಷಾತ್ ಭಗೀರಥನೇ! ಹಣವೆಂದರವನಿಗೆ ತೃಣವೇ! ಮಹಾ ಐಶ್ವರ್ಯಸಂಪನ್ನನು!"

"ಶ್ರೀ ಮಧ್ವಪುರದ ಗುರುಗಳಿಗೆ ಸಹಸ್ರ ಕಂಠೀರಾಯ ವರಹಗಳಿಂದ ಕನಕಾಭಿಷೇಕ ಮಾಡಿದವನೇನೊ?"

"ಹೌದು! ಹೌದು! ಅವನ ಭಕ್ತಿಗೂ ಸೇವೆಗೂ ಮೆಚ್ಚಿ ಪ್ರಸನ್ನರಾಗಿ, ಶ್ರೀ ಗುರುಗಳು ಅವನನ್ನು ಕಮಲಪುರದ ಧರ್ಮ ವಿಚಾರಕನಾಗಿ ನೇಮಿಸಿದ್ದಾರೆ. ಊರೆಲ್ಲ ಅವನ ಕೈಕೆಳಗಿದೆ. ಹಿರಿಯರ ಕಟ್ಟಕಟ್ಟಳೆಗಳೆಂದರೆ ತನ್ನ ಪ್ರಾಣವನ್ನಾದರೂ ಕೊಟ್ಟು, ಅವುಗಳನ್ನು ನಡೆಯಿಸದೆ ಬಿಡನು. ಮಹಾ ಪರೋಪಕಾರಿ. ಸಾಧು ಸಂತರ ಮಾತು ಸರ್ವದಾ ಶಿರಸಾವಹಿಸಿಕೊಂಡು ನಡೆದುಕೊಳ್ಳುವವನು. ನಮ್ಮ ಮೊಕದ್ದಮೆಯನ್ನು ಕುರಿತು ನಾವಿನ್ನು ಯೋಚಿಸಬೇಕಾದ್ದಿಲ್ಲ– ಜಯಪ್ರದವಾದ ಹಾಗೆಯೇ ಸರಿ– ಸಂಶಯ ಬೇಡ."

"ಜೈ ವಿಠಲ್! ಒಳ್ಳೆ ಮಹಾನುಭಾವನು! ಮಗಳು ಇಂದಿರೆ ಎಂಬಾಕೆ ಚಿಕ್ಕಪ್ರಾಯದವಳೇನೋ."

"ಅಯ್ಯೋ ಮೊನ್ನೆ ಇತ್ತಲಾಗಿ ಪ್ರಾಯಕ್ಕೆ ಬಂದವಳು– ಹತ್ತು ಹದಿನಾಲ್ಕು ವರುಷದ ಯುವತಿ– ಪ್ರಸ್ತದ ಆಲೋಚನೆ ನಡೆಯುತ್ತಿರುವಾಗ ಗಂಡನು ಒಂದೇ ದಿವಸದ ಜ್ವರದಿಂದ ಮೃತನಾದನು."

"ಹೇ ವಿಠಲಾ! ಹೇ ವೇಣುಗೋಪಾಲ! ಹೇ ರಾಧಾಕೃಷ್ಣಾ! ಎಂತಹ ಕಷ್ಟವಪ್ಪಾ!"

"ಕಷ್ಟವಲ್ಲವೇ ಮತ್ತೆ? ಆದುದರಿಂದ ನಮ್ಮ ಮಂಡಲಿಯನ್ನು ಕರೆಯಿಸಿಕೊಂಡು ಎಲ್ಲರಿಗೂ, ಮುಖ್ಯವಾಗಿ ಹುಡುಗಿಗೆ ಜ್ಞಾನಬೋಧ, ಧರ್ಮೋಪದೇಶ ಮುಂತಾದ್ದನ್ನು ಕೊಡಿಸಬೇಕಾಗಿ ಅವನಪೇಕ್ಷೆ."

"ಹೌದೇ! ಅವಶ್ಯವಾಗಿ ನಾವೆಲ್ಲರೂ ಹೋಗಿ, ನಮ್ಮ ಕಾರ್ಯವನ್ನೂ ಅವನ ಉದ್ದೇಶವನ್ನೂ ಪೂರೈಸಿಕೊಂಡು ಬರುವುದು ಅತಿ ಯೋಗ್ಯವಾದ ಕೆಲಸವಾಗಿದೆ."

ಎಂದು ಹೀಗೆಲ್ಲಾ ತಂತಮ್ಮೊಳಗೆ ಮಾತನಾಡಿ ಎರಡು ದಿವಸದ ನಂತರ ಮಂಡಲಿಯು ಹೊರಟು ಬರುತ್ತಾ ಬೇಕಾದ ಕಡೆಯಲ್ಲಿ ಒಂದೊಂದು ದಿವಸ ನಿಂತು, ಪೂರ್ವ ಕರ್ಮಾನುಸಾರವಾಗಿ ಪ್ರಾಪ್ತಿಯಾದ ವೈಧವ್ಯ ದುಃಖದಲ್ಲಿದ್ದ ಅನೇಕ ಸ್ತ್ರೀಯರಿಗೆ ಸಂತಧರ್ಮೋಪದೇಶವನ್ನು ಕೊಟ್ಟು ರಕ್ಷಿಸುತ್ತಾ ಅವರಿಂದ ಯಥಾನುಶಕ್ತಿ ಸೇವೆಗಳನ್ನು ಪಡೆಯುತ್ತಾ ಏಳೆಂಟು ದಿವಸಗಳಲ್ಲಿ ಕಮಲಪುರದ ಉಕ್ಕಡದ ಬಾಗಿಲಲ್ಲಿ ಬಂದು ಮುಟ್ಟಿ,

ಭೀಮರಾಯನಿಗೆ ಸುದ್ದಿ ಕಳುಹಿಸಲು, ಅವನು ಇಷ್ಟಮಿತ್ರರೊಡನೆ ಅಲ್ಲಿಗೆ ಬಂದು, ಎಲ್ಲರನ್ನೂ ಆಲಿಂಗಿಸಿ ಎಲ್ಲರ ಮೈಮೇಲೂ ಬುಕ್ಕಿಟ್ಟು, ಕೊರಳಿಗೆ ಒಂದೊಂದು ಮಲ್ಲಿಗೆ ಹೂವಿನ ಮಾಲೆಯನ್ನು ಹಾಕಿ, ಪ್ರತಿಯೊಬ್ಬನ ಕಾಲಿನ ದೂಳನ್ನು ಕೈಬೆರಳಿಂದ ತೆಗೆದು, ತನ್ನ ತಲೆಗೆ ಪೂಸಿಕೊಂಡು, ಅಧ್ಯಕ್ಷರ ಕೈಯನ್ನು ತಾನೇ ಹಿಡಿದುಕೊಂಡು, ವಾದ್ಯಘೋಷದಿಂದ ಮನೆಗೆ ಕರೆದುತಂದು, ಪಾನಕ ಪನಿವಾರ ಮುಂತಾದುವುಗಳಿಂದುಪಚರಿಸಿ, ಭಜನೆ ಅನುಷ್ಠಾನ ಮುಂತಾದ ನಿತ್ಯನಿಯಮಗಳಿಗೆ ಸಾಕಷ್ಟು ಸ್ಥಳವೂ ಅನುಕೂಲವೂ ಸಿಕ್ಕುವ ಹಾಗೆ ಹಿಂದಣ ಇಡೀ ಚೌಕಮನೆಯನ್ನೇ ಅವರ ವಾಸ್ತವ್ಯಕ್ಕೆ ಬಿಟ್ಟುಕೊಟ್ಟು, "ಸ್ವಾಮೀ– ನಾನು ಜ್ಞಾನಶೂನ್ಯನಾಗಿದ್ದೇನೆ. ಸರ್ವ ವಿಷಯದಲ್ಲಿಯೂ ಬುದ್ಧಿ ಹೇಳಿಕೊಟ್ಟು ನಡೆಯಿಸುವ ಬಹುಭಾರವು ತಮ್ಮ ಪಾದಾರವಿಂದಕ್ಕೆ ಕೂಡಿದೆ" ಎನಲು, "ಪುಂಡಲೀಕ ವರದ ಪಾಂಡುರಂಗ ಹರಿವಿಠಲ್!" ಎಂದು ಎಲ್ಲರೂ ಏಕಧ್ವನಿಯಿಂದ ಘೋಷಿಸಿದರು.

## ೪೨

ಭೀಮರಾಯನಲ್ಲಿ ತ್ರಿಕಾಲ ಭಜನೆ, ಗುರು ಚರಿತ್ರ ಸಪ್ತಾಹ, ಮತ್ತು ರಾಧಾವಿಲಾಸ, ರಾಸಕ್ರೀಡೆ, ಗೋಪೀವಸ್ತ್ರಾಪಹರಣ ಇವೇ ಮುಂತಾದ ಶ್ರೀಕೃಷ್ಣನ ಲೀಲಾಚರಿತ್ರ ಪ್ರದರ್ಶನಗಳೂ ಸಂತರ್ಪಣೆ ಪನಿವಾರ ಪಾನಕ, ಪೂಜೆ ಮುಂತಾದ ಅನೇಕ ಪುಣ್ಯಕಾರಕ ವಿಷಯಗಳೂ ನಡೆಯುತ್ತಾ, ಪತಿವಿಯೋಗದ ದೆಸೆಯಿಂದ ವೈರಾಗ್ಯ ಪ್ರಾಪ್ತಿಯಾದ ಅನೇಕ ಸ್ತ್ರೀಯರು ಸಂತಸೇವೆಯನ್ನು ಮಾಡಿ, ಧರ್ಮಬೋಧೆಯನ್ನು ಪಡೆಯುತ್ತಾ ಕೆಲವು ವಾರಗಳು ಕಳೆದವು. ಇಂದಿರೆಯು ಇದ್ಯಾವದಕ್ಕೂ ಮನಸ್ಸು ಕೊಡದೆ, ಹಗಲು ರಾತ್ರಿ ತನ್ನ ಕೋಣೆಯಲ್ಲೇ ಇದ್ದುಕೊಂಡು, ತಾಯಿತಂದೆಗಳಿಗೆ ತಿಳಿಯದ ಹಾಗೆ ಶಾರದಾಬಾಯಿಯಲ್ಲಿಂದ ಪುಸ್ತಕಗಳನ್ನು ತರಿಸಿ, ಓದುತ್ತಾ ಬರೆಯುತ್ತಾ ಇದ್ದಳು. ಒಂದಾನೊಂದು ದಿವಸ ಅಂಬಾಬಾಯಿಯು ಭೀಮರಾಯನನ್ನು ಒತ್ತಟ್ಟಿಗೆ ಕರೆದು, "ನಮ್ಮ ಇಂದಿರೆಯು ವಿಚಾರಶೂನ್ಯಳಾಗಿ ಪಾದ್ರಿಗಳ ಪುಸ್ತಕಗಳನ್ನು ಓದಿ ಬುದ್ಧಿ ಹಾಳುಮಾಡಿಕೊಳ್ಳುವುದಲ್ಲದೆ, ಭಕ್ತಿ, ವೈರಾಗ್ಯ, ಇವೇ ಮುಂತಾದ ವೈಧವ್ಯ ದುಃಖ ನಿವಾರಣೆಗೆ ಸಾಧಕವಾದ ಯಾವುದೊಂದು ವಿಷಯಕ್ಕೂ ಮನಸ್ಸು ಕೊಡುವುದಿಲ್ಲವೆಂಬುದರಿಂದ ದೂರ ಪ್ರಾಂತ್ಯದಲ್ಲಿದ್ದ ಸಂತಮಂಡಲಿಯನ್ನು ಕರೆಯಿಸಿ, ಹೆಚ್ಚು ಹಣ ವೆಚ್ಚಮಾಡಿ, ಅವರನ್ನು ಮನೆಯಲ್ಲೇ ನಿಲ್ಲಿಸಿಕೊಂಡೆವು. ಅದರಿಂದ ಸಿಕ್ಕಿದ ಪ್ರಯೋಜನವೇನು? ಸಂತ ಮಂಡಲಿಯವರು ಅವರ ಮೊಕದ್ದಮೆಯ ನಿರ್ಣಯವಾದ ಮೇಲೆ ಹೊರಟುಹೋಗುವರು. ಹುಡುಗಿಯು ಅವರು ಬರುವುದಕ್ಕಿಂತ ಮುಂಚೆ ದಿವಸಕ್ಕೆ ಎರಡು ಮೂರು ಸಾರಿಯಾದರೂ ಹೊರಗೆ ಬರುತ್ತಿದ್ದಳು. ಈಗ ಅದು ಸಹ ಇಲ್ಲ. 'ಇದ್ದದ್ದೂ ಹೋಯಿತು ಮದ್ದಿನ ಗುಣದಿಂದ' ಎಂಬ ಹಾಗಾಯಿತಷ್ಟೆ!"

"ಅದೆಲ್ಲ ಹೆಂಗಸರಾದ ನಿಮ್ಮ ಉಪಾಯಗಳಿಂದ ಆಗಬೇಕಾದ ಕಾರ್ಯವಾಗಿದೆ.

ಭಜನೆ ಮುಂತಾದ್ದು ನಡೆಯುವ ಸಮಯದಲ್ಲಿ ನೀವು ಮೆಲ್ಲನೆ ಅವಳನ್ನು ಹೊರಗೆ ಕರೆದುತಂದು, ನಡೆಯುವ ವಿನಿಯೋಗಗಳನ್ನು, ಅವಳಂತಿರುವ ಬೇರೆ ಸ್ತ್ರೀಯರು ಮಾಡುವ ಸೇವೆ ಮುಂತಾದ್ದನ್ನು ಅವಳು ನೋಡುವ ಹಾಗೆ ಮಾಡಿದರೆ, ತಾನು ಸಹಾ ಹಾಗೆಯೇ ನಡೆದುಕೊಳ್ಳಬೇಕೆಂದು ಅವಳಿಗೆ ಮನಸ್ಸುಂಟಾಗುವುದು. ಅವಳೀಗ ಎಷ್ಟಾದರೂ ಚಿಕ್ಕ ಪ್ರಾಯದವಳು. ನಾವು ಹೇಳಿಕೊಟ್ಟು ನಡೆಯಿಸಬೇಕಲ್ಲವೇ?"

"ಹೇಳಿ ನೋಡುತ್ತೇನೆ. ಕೇಳುವಳೆಂಬ ಭರವಸೆಯು ನನಗೆ ರವಷ್ಟಾದರೂ ಇಲ್ಲ. ಏಕೆಂದರೆ ಇಲ್ಲಿ ರಾತ್ರಿ ಹಗಲು ಇಷ್ಟೆಲ್ಲ ಗದ್ದಲ ನಡೆಯುತ್ತಿರುವಾಗ ಒಂದೇ ದಿವಸವಾದರೂ ಇದೇನು ನೋಡೋಣವೆಂದು ಅವಳಿಗೆ ಕಂಡದ್ದೂ ಇಲ್ಲ; ಅವಳು ಹೊರಗೆ ಹೊರಟು ಬಂದದ್ದೂ ಇಲ್ಲ. ಹುಡುಗಿಯ ಮುಂದಿನ ಇರವಿನ ಬಗೆ ಏನೆಂದು ನನಗೊಂದೂ ತಿಳಿಯುವುದಿಲ್ಲ. ಆದರೂ ಮಾತನಾಡಿ ನೋಡುತ್ತೇನೆ."

"ಹಾಗೆ ಮಾಡು. ಏನು ಹೇಳುತ್ತಾಳೆಂಬುದನ್ನು ನನಗೆ ತಿಳುಹಿಸು" ಎಂದು ದಂಪತಿಗಳು ಮಾತನಾಡಿ ನಿಶ್ಚಯಿಸಿ, ಆ ದಿವಸ ರಾತ್ರಿ ಭಜನೆಯ ಸಮಯದಲ್ಲಿ ಅಂಬಾಬಾಯಿಯು ಇಂದಿರೆಯ ಕೋಣೆಗೆ ಬಂದು, ಅವಳೊಡನೆ,

"ಇಂದಿರೇ, ಚೌಕಮನೆಯಲ್ಲಿ ಭಜನೆ ಮುಂತಾದ ಲೋಲಗಳೆಲ್ಲ ನಡೆಯುತ್ತಿರುವಾಗ ನೀನೊಬ್ಬಳೇ ಇಲ್ಲೇನು ಮಾಡುತ್ತಿದ್ದಿ? ದೊಡ್ಡ ಸಭೆ ನೆರೆದಿದೆ. ರಾಧಾಕೃಷ್ಣರ ಲೀಲೆಯ ಅಭಂಗಗಳನ್ನು ಹಾಡಿ, ಸಂತರು ರಂಗಶಿಲೆಯಲ್ಲಿ ಬ್ರಹ್ಮಾನಂದ ನಾಟ್ಯವನ್ನಾಡುತ್ತಿದ್ದಾರೆ. ನಿನ್ನಂತಹ ಅನೇಕ ಸ್ತ್ರೀಯರು ನಾನಾ ತರದ ಸೇವೆಗಳನ್ನು ಮಾಡುತ್ತಿದ್ದಾರೆ. ನೀನಲ್ಲಿಗೆ ಬರಬಾರದೆ?"

"ಇದೇನವ್ವಾ, ನನ್ನ ಬುದ್ಧಿಯನ್ನು ಪರೀಕ್ಷಿಸುತ್ತಿಯಾ? ಒಂದು ಸಂವತ್ಸರದ ವರೆಗೆ ಯಾರಿಗೂ ಮುಖ ತೋರಿಸಬಾರದೆಂದು ನೀನಲ್ಲವೇ ನನಗೆ ಆಗಾಗ್ಗೆ ಹೇಳುತ್ತಿದ್ದೆ? ಈಗ ನಾನು ಸಭೆಗೆ ಬರಬೇಕೆಂಬುದರ ಅರ್ಥವೇನು? ಏತಕ್ಕವ್ವಾ ನನ್ನನ್ನು ಪರಭ್ರಮಣೆಯಲ್ಲಿ ಹಾಕುವೆ? ಅದು ಹೇಗಿದ್ದರೂ ನನಗೆ ಅಲ್ಲಿಗೆ ಬರಬೇಕೆಂದು ಮನಸ್ಸಿನಲ್ಲಿ ಕಾಣುವುದೇ ಇಲ್ಲ. ನಾನು ಇಲ್ಲೇ ಇದ್ದರಾಗದೆ?"

"ನಿನಗೆ ಹಿರಿಯರ ಮಾತಿನಲ್ಲಿ ವಿಶ್ವಾಸವೂ ಭಕ್ತಿಯೂ ಇಲ್ಲ."

"ಹಿರಿಯರು ಗಳಿಗೆಗೊಂದು ವಿಧವಾಗಿ ಮಾತಾಡಿದರೆ ಯಾವ ಮಾತಿನಲ್ಲಿ ವಿಶ್ವಾಸವಿಡಬೇಕೆಂದು ನನಗೆ ಸೂಚಿಸುವುದಿಲ್ಲ."

"ನಿನ್ನ ಹತ್ತಿರ ಮಾತನಾಡಿ ಜಯಿಸಲಿಕ್ಕೆ ನನ್ನಿಂದ ಕೂಡುವುದಿಲ್ಲ. ನನಗೆ ಕತ್ತೆಗಾದ ಹಾಗೆ ಪ್ರಾಯವಾಯಿತು. ನಿನಗಿರುವ ಬುದ್ಧಿಯ ನೂರು ಪಾಲುಗಳಲ್ಲಿ ಒಂದರಷ್ಟು ಬುದ್ಧಿಯೂ ನನಗಿಲ್ಲ."

"ಏತಕ್ಕವ್ವಾ ಹೀಗೆಲ್ಲ ಸಿಟ್ಟಿನ ವಶವಾಗಿ ಮಾತನಾಡುತ್ತಿ? ನಾನು ನಿನ್ನ ಮಗುವಲ್ಲವೆ? ನನಗಿನ್ನು ನಿನ್ನ ಹೊರತು ಯಾರು ಗತಿ?"

“ನಿನಗಷ್ಟು ಮನಸ್ಸಿನಲ್ಲಿರುತ್ತಿದ್ದರೆ ಹೇಳಿದ ಮಾತನ್ನು ಕೇಳುತ್ತಿದ್ದೆ.”

“ನಾನು ಕೇಳದಿದ್ದ ಮಾತು ಯಾವುದು? ಯಾರಿಗೂ ಮುಖ ತೋರಿಸಬಾರದೆಂದು ಹೇಳಿದೆ,– ಹಾಗೆಯೇ ಈ ಕೋಣೆಯಲ್ಲಿ ಬಿದ್ದುಕೊಂಡಿರುತ್ತೇನೆ. ತಲೆ ಬಾಚಿಕೊಳ್ಳಬಾರದೆಂದು ಹೇಳಿದೆ,–ಅಂದಿನಿಂದ ಈ ವರೆಗೆ ಬಾಚಿಕೊಳ್ಳದೆ ಕೂದಲುಗಳೆಲ್ಲ ಜಡೆಕಟ್ಟಿಹೋದವು. ಹೇನಿನ ಕಾಟದಿಂದ ನಿದ್ರೆ ಇಲ್ಲ. ತಲೆಯಲ್ಲಿ ಕೆಸರು ತುಂಬಿ ದುರ್ವಾಸನೆ ಹುಟ್ಟಿದೆ. ಆದರೂ ಸಹಿಸಿಕೊಂಡು ಇದ್ದೇನೆ. ಕುಪ್ಪಸ ತೊಡಬಾರದೆಂದು ಹೇಳಿದೆ,–ಛಳಿಯಾದರೂ ಸಹಿಸಿಕೊಂಡು ಮೈಬಿಟ್ಟು ಮೃಗದಂತೆ ಬಿದ್ದುಕೊಂಡಿದ್ದೇನೆ. ಈಗ ಬಂದು, ಬಹುಜನರು ಕೂಡಿದ ಸಭೆಗೆ ಬಾರೆಂದು ಕರೆಯುತ್ತಿ. ನಾಳೆ ಇನ್ನೇನೆಲ್ಲ ಹೇಳುವಿಯೋ? ನನಗೆ ಮರಣವೂ ಬರುವುದಿಲ್ಲ! ದೇವರೇ, ನಾನೇನಪರಾಧ ಮಾಡಿದೆ! ಏಕೆ ನನಗಿಂತಹ ದುರ್ಗತಿಯನ್ನು ಕೊಟ್ಟೆ! ನರಕಯಾತನೆ ಎಂಬುದು ಮರಣಾನಂತರವೆಂದು ಕೇಳಿದ್ದೆ, ನನ್ನ ಬಾಳಿಗೆ ಜೀವವಿರುವಾಗಲೇ ಕೊಟ್ಟೆಯಾ?” ಎಂದು ಮಹಾ ದುಃಖದಿಂದ ಕಂಬನಿ ಇಕ್ಕಿದಳು. ಆಗ ಅಂಬಾಬಾಯಿಯು– “ಅವ್ವಾ, ನೀನಳುವುದೇಕೆ? ಮನಸ್ಸಿಲ್ಲದಿದ್ದರೆ, ನೀನು ಬರಲೇಬೇಕೆಂಬುದಿಲ್ಲ. ಇಲ್ಲೇ ಪ್ರತ್ಯೇಕವಾಗಿರುವುದು ಒಳ್ಳೇದೆಂದು ನಿನಗೆ ತೋರುವುದಾದರೆ ಹಾಗೆಯೇ ಇರು” ಎಂದು ಅವಳನ್ನು ಸಂತೈಸಿ ಗಂಡನ ಬಳಿಗೆ ಹೋಗಿ, “ಹುಡುಗಿಯ ವಿದ್ಯಮಾನವು ‘ಹುಚ್ಚುಹೋಯಿತು, ಒನಕೆ ತನ್ನಿ’ ಎಂಬ ಹಾಗಾಗಿದೆ. ಅನೇಕ ತರದಲ್ಲಿ ಹೇಳಿ ನೋಡಿದೆ; ಯಾವ ಮಾತೂ ತಾಗುವುದಿಲ್ಲ. ಕುತರ್ಕಗಳನ್ನು ಮಾತನಾಡಿ ಕಡೆಗೆ ಅಳುತ್ತಾಳೆ. ನನಗೊಂದುಪಾಯ ಸೂಚಿಸುತ್ತೆ. ಏನಂದರೆ: ಅವಳಿರುವ ಕೋಣೆಯ ಬಾಗಿಲ ಹತ್ತಿರವೇ ಅಧ್ಯಕ್ಷರನ್ನು ಕರೆದುತಂದು ಅನುಭವಾಮೃತ, ಗುರುಚರಿತ್ರ, ಸಂತಚರಿತ್ರ, ಇವೇ ಮುಂತಾದ ಗ್ರಂಥಗಳನ್ನು ವ್ಯಾಖ್ಯಾನಸಹಿತ ಓದಿಸಿದರೆ, ಅವಳಿದ್ದಲ್ಲಿಂದ ತಾನೇ ಕೇಳಬಹುದಷ್ಟೆ? ಹೇಗೆ, ತಮ್ಮ ಅಭಿಪ್ರಾಯ” ಎಂದು ಕೇಳಲು, ಭೀಮರಾಯನು, “ಬೇರೆ ಉಪಾಯ ನನಗೂ ಕಾಣುವುದಿಲ್ಲ. ನೀನು ಹೇಳಿದ ಉಪಾಯವೇ ಸುಲಭವಾದದ್ದು. ಬೇಕಾದ ಏರ್ಪಾಡುಗಳನ್ನು ನಾಳೆಯೇ ಮಾಡುತ್ತೇನೆ” ಎಂದು ಹೇಳಿದನು. ಅಂಬಾಬಾಯಿಯು ಪುನಃ ಇಂದಿರೆ ಇದ್ದಲ್ಲಿಗೆ ಹೋಗಿ, “ಅವ್ವಾ, ನೀನು ಹೊರಗೆ ಬರಬೇಕೆಂದಿಲ್ಲ. ನೀನಿದ್ದಲ್ಲೇ ನಿನ್ನ ಸಮೀಪದಲ್ಲೇ ಸಂತರನ್ನು ತರಿಸಿ ಪಾರಾಯಣ ಮುಂತಾದ್ದನ್ನು ಮಾಡಿಸುವುದೆಂದು ನಿಶ್ಚಯಿಸಿದ್ದೇವೆ. ನಿನಗೆ ಎಷ್ಟಾದರೂ ಬುದ್ಧಿ ಚೆನ್ನಾಗಿ ತುಂಬಲಿಲ್ಲ. ಸಂತರೆಂದರೆ ಸಾಕ್ಷಾತ್ ಪಾಂಡುರಂಗನ ಅವತಾರವೇ. ನಿನ್ನಂತೇ ದುರ್ಗತಿಯಲ್ಲಿರುವ ಎಷ್ಟೋ ಸ್ತ್ರೀಯರು ಸಂತರ ಸೇವೆಯಿಂದ ವೈರಾಗ್ಯ ಸಮಾಧಾನ ಹೊಂದಿದ್ದಾರೆ. ನೀನೂ ಹಾಗೆಯೇ ಮಾಡಬೇಕು” ಎಂದು ನಾನಾ ಪ್ರಕಾರದಲ್ಲಿ ಅವಳಿಗೆ ಬುದ್ಧಿ ಹೇಳಿ ಬೆನ್ನು ತಟ್ಟಿದಳು. ಆಗ ಇಂದಿರೆಯು ‘ಇನ್ನು ಇಲ್ಲಿಯ ವಿದ್ಯಮಾನಗಳು ವಿಪರೀತಕ್ಕೆ ಮುಟ್ಟುವ ಹಾಗೆ ಕಾಣಿಸುತ್ತವೆ. ಏನು ಮಾಡಲಿ?’ ಎಂದು ಮನಸ್ಸಿನಲ್ಲೇ ಚಿಂತಿಸುತ್ತಾ ಇರುವಾಗ ಅಂಬಾಬಾಯಿಯು, “ಏನೇ, ಯಾವುದೊಂದುತ್ತರವೂ ಏಕೆ ಹೊರಡುವುದಿಲ್ಲ?” ಎಂದು ಕೇಳಲು, ಅವಳು “ಉತ್ತರವೇನವ್ವಾ? ನೀನು ಹೇಳುವ

ಹಾಗೆ ನಡೆಯದೆ ನನಗೆ ಬೇರೆ ಗತಿಯಿಲ್ಲದ ಮೇಲೆ ಹಾಗಾಗಲಿ. ಆದರೆ ಸಂತರ ಸೇವೆ ಎಂಬುದೇನೆಂದು ನಾನರಿಯೆ. ಅದನ್ನು ಮಾಡುವುದಕ್ಕೆ ನನಗೆ ಬುದ್ಧಿಯೂ ಶಕ್ತಿಯೂ ಕೂಡಿದರೆ ಮಾಡುವೆನು" ಎಂದುತ್ತರ ಕೊಟ್ಟಳು. ಅಂಬಾಬಾಯಿಯು ಭಜನೆ ನಡೆಯುವಲ್ಲಿಗೆ ಹೋದ ಮೇಲೆ ಇಂದಿರೆಯು 'ಇನ್ನು ನನಗೇನಪ್ಪಾ ಗತಿ! ತಾಯಿತಂದೆಗಳ ವಿದ್ಯಮಾನವೇ ಹೀಗಾದ ಮೇಲೆ ಇನ್ನೆಲ್ಲಿಗೆ ಹೋಗಲಿ?' ಎಂದು ದುಃಖಿಸಿ ಚಿಂತೆಯಲ್ಲೇ ರಾತ್ರಿಯನ್ನು ಕಳೆದಳು.

## ೪೩

ಮರುದಿನ ಸಂತಮಂಡಲಿಯವರ ಪೂಜೆ, ಅನುಷ್ಠಾನ, ಭೋಜನ ಇವೇ ಮುಂತಾದ ನಿಯಮಗಳು ತೀರಿದ ಮೇಲೆ ಮಧ್ಯಾಹ್ನದ ನಂತರ ಅಂಬಾಬಾಯಿಯು ತಾನೇ ಹೋಗಿ ಅಧ್ಯಕ್ಷರನ್ನು ನಮಸ್ಕರಿಸಿ, "ಸ್ವಾಮಿ, ನಮ್ಮ ಇಂದಿರೆಗೆ ಎಷ್ಟು ಬುದ್ಧಿ ಹೇಳಿದರೂ ತಾಗುವುದಿಲ್ಲ. ಹಗಲಿರುಳು ದುಃಖದಲ್ಲಿಯೇ ಇದ್ದಾಳೆ. ತಾವು ಕೃಪಾದೃಷ್ಟಿಯಿಂದ ಅವಶ್ಯವಿರುವ ಬೋಧೆಯನ್ನು ಕೊಟ್ಟು ದುಃಖಪರಿಹಾರ ಮಾಡಿ ಮುಂದೆ ಸಂತೋಷದಲ್ಲಿರುವಂತೆ ಮಾಡಿಕೊಡಬೇಕಾಗಿ ಪ್ರಾರ್ಥಿಸುತ್ತೇನೆ. ಅವಳಿಗೆ ಇಲ್ಲೇ ಬಂದು ಕುಳಿತುಕೊಳ್ಳೆಂದರೆ ಸರ್ವಥಾ ಕೇಳುವುದಿಲ್ಲ. ತಾವೇ ದಯಮಾಡಿ ಅವಳಿದ್ದಲ್ಲಿಗೆ ಬಂದು, ಪಾರಾಯಣ, ಅರ್ಥವಿವರಣ, ಭಾಷಣ, ನಿರೂಪಣ ಮುಂತಾದ್ದನ್ನು ಮಾಡಿದರೆ ಮಹಾದೊಡ್ಡ ಪ್ರಸಾದವಾಗುವುದು. ಹೇಗೂ ಹುಡುಗಿಯನ್ನು ಯೋಗ್ಯವಾದ ಒಂದು ಮಾರ್ಗಕ್ಕೆ ಮುಟ್ಟಿಸಿಕೊಡಬೇಕಷ್ಟೆ" ಎಂದು ವಿನಯಪೂರ್ವಕವಾಗಿ ಬೇಡಿಕೊಳ್ಳಲು, ಅವರು "ಜೈವಿಠಲ್, ಜೈವಿಠಲ್" ಎಂದು ಹೇಳಿ, ಮಹಂತನಿಂದ ಶ್ರೀಮದ್ಭಗವದ್ಗೀತೆಯ ಪುಸ್ತಕ ಮತ್ತು ಒಂದು ವ್ಯಾಸಪೀಠವನ್ನು ಹಿಡಿಯಿಸಿಕೊಂಡು, ಇಂದಿರೆಯು ಇದ್ದ ಕೋಣೆಯ ಹೊರಗಿನ ಕೋಣೆಗೆ ಬಂದು ಕುಳಿತುಕೊಂಡು, ಪುಸ್ತಕವನ್ನು ವ್ಯಾಸಪೀಠದ ಮೇಲೆ ತೆರೆದಿಟ್ಟು ಪಾರಾಯಣವನ್ನು ಪ್ರಾರಂಭಿಸುವಷ್ಟರಲ್ಲಿ ಮಹೋತ್ಕಟವಾದ ಒಂದು ಕೆಮ್ಮು ಬರಲು, ವೈರಾಗಿ ಸ್ತ್ರೀಯರಲ್ಲಿ ಒಬ್ಬಾಕೆಯು ಮೊದಲೇ ಸಿದ್ಧಮಾಡಿಟ್ಟ ಕರಿಮೆಣಸಿನ ಕಷಾಯವನ್ನು ಒಂದು ಬೆಳ್ಳಿಯ ಪಂಚಪಾತ್ರೆಯಲ್ಲಿ ತಂದುಕೊಟ್ಟಳು. ಮತ್ತೊಬ್ಬಳು ಸಮೀಪದಲ್ಲಿ ನಿಂತು ಬೀಸಣಿಗೆಯಿಂದ ಗಾಳಿಹಾಕಿದಳು. ಕಷಾಯವನ್ನು ಕುಡಿದು, ಒಂದು ಶ್ಲೋಕವನ್ನು ಓದುತ್ತಿರುವಾಗ ಕಷಾಯಕ್ಕುಪಯೋಗಿಸಿದ ಮೆಣಸಿನ ಪುಡಿಯ ಪ್ರಮಾಣವು ತುಸಾ ಮೀರಿ ಹೋದುದರಿಂದಲೋ, ಅಲ್ಲ, ಅಧ್ಯಕ್ಷರಿಗೆ ಮುಂದಣ ಎರಡು ಹಲ್ಲುಗಳು ತುಟಿಯ ಹೊರಗೆ ಬಂದಿದ್ದುದರಿಂದಲೋ, ವಿವೇಕಶೂನ್ಯರಾದ ಕುಹಕಿಗಳಿಂದ ಜೊಲ್ಲೆಂದು ಹೇಳಲ್ಪಡುವ 'ತತ್ವಮಸಿಯ ಬಿಂದುಗಳು' ಬಾಯಿಂದ ಸುರಿಯಲು ಮತ್ತೊಬ್ಬಳು ಸಟಸಟನೆ ಹೋಗಿ, ಒಂದು ಅಂಗವಸ್ತ್ರವನ್ನು ತಂದುಕೊಟ್ಟಳು. ಅದರಿಂದ ಬಾಯಿಯನ್ನೊರಸಿಕೊಂಡು, ಪಾರಾಯಣ ವಿವರಗಳನ್ನು

ಮುಗಿಸಿ, ನಿರೂಪಣವನ್ನು ಪ್ರಾರಂಭಿಸುವಾಗ ಅಂಬಾಬಾಯಿಯು ಇಂದಿರೆಯನ್ನು ಕರೆದು, "ಅವ್ವಾ, ಎದ್ದು ಕುಳಿತುಕೊಳ್ಳೆ"ಂದು ಹೇಳಲು, ಅವಳು ಹೊರಗೆ ಇದ್ದವರ್‍ಯಾರೂ ಕಾಣದಂತೆ ತನ್ನ ಕೋಣೆಯಲ್ಲೇ ಬಾಗಿಲಿನ ಹಿಂದೆ ಕುಳಿತುಕೊಂಡಳು.

## ನಿರೂಪಣವು

ಅನಿತ್ಯವಾದ ಈ ಸಂಸಾರದಲ್ಲಿ ಮೃತವಾದವರನ್ನು ಕುರಿತು ಶೋಕಿಸುವವರು ಬುದ್ಧಿಶೂನ್ಯರು; ಬುದ್ಧಿವಂತರು ಶೋಕಿಸರು.

**ಅಶೋಚ್ಯಾನನ್ವ ಶೋಚ್ಯಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ।**
**ಗತಾಸೂನಗತಾಸೂಂಶ್ಚ ನಾನು ಶೋಚಂತಿ ಪಂಡಿತಾಃ॥**

*(ಅ.೨, ಶ್ಲೋ.೧೧)*

ಎಂದು ಭಗವದ್ವಾಕ್ಯವು. ಮರಣವೆಂಬುದರ ಅರ್ಥವೇನೆಂದು ತಿಳಿದಿದ್ದೀರಾ? ಈ ದೇಹಕ್ಕೆ ಬಾಲ್ಯ, ಯೌವನ, ವಾರ್ಧಿಕ್ಯವೆಂಬ ಸ್ಥಿತಿ ಭೇದಗಳು ಹೇಗೊ ಹಾಗೆಯೇ ಮರಣವೆಂಬುದೂ ಒಂದು ಸ್ಥಿತಿ ಭೇದವಲ್ಲದೆ ಬೇರೊಂದಲ್ಲ. ಆತ್ಮವು ಒಂದು ಶರೀರದಿಂದ ಮತ್ತೊಂದು ಶರೀರದಲ್ಲಿ ಪ್ರವೇಶಿಸಲು, ಅಜ್ಞಾನಿಗಳು ಮರಣವೆಂದು ಹೇಳಿ ದುಃಖಿಸುತ್ತಾರೆ.

**ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯಚ।**
**ತಸ್ಮಾದಪರಿಹಾರ್ಯೇರ್ಥೇ ನ ತ್ವಂ ಶೋಚಿತುಮರ್ಹಸಿ॥**

*(ಅ.೨, ಶ್ಲೋ.೨೭)*

ಹುಟ್ಟಿದವನು ಸಾಯುವುದೂ ಸತ್ತವನು ಹುಟ್ಟುವುದೂ ದೈವನಿರ್ಣಯಗಳು. ನಮ್ಮ ದುಃಖ ಅಥವಾ ಸಂತೋಷದಿಂದೇನೂ ಪ್ರಯೋಜನವಿಲ್ಲ. ಒಬ್ಬನು ಮೃತನಾದನೆಂದು ನಾವು ಮಾಡತಕ್ಕ ಕಾರ್ಯಗಳನ್ನು ಮಾಡದೆ ಸರ್ವಥಾ ಬಿಡಬಾರದು. ಸುಖವಾಗಲಿ ದುಃಖವಾಗಲಿ ಪ್ರಾಪ್ತಿಯಾದಾಗ ಮನಸ್ಸು ಏಕಪ್ರಕಾರವೇ ಇರಬೇಕು.

**ಯೋಗಸ್ಥಃಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ।**
**ಸಿಧ್ಧ್ಯಸಿಧ್ಧ್ಯೋಸ್ಸಮೋಭೂತ್ವಾ ಸಮತ್ವಂ ಯೋಗ ಉಚ್ಯತೇ॥**

*(ಅ.೨. ಶ್ಲೋ.೪೮)*

ಎಂದು ಶ್ರೀ ಕೃಷ್ಣಪರಮಾತ್ಮನು ಧನಂಜಯನಿಗೆ ಬುದ್ಧಿಹೇಳಿದ್ದಾನೆ. ಕಾರ್ಯದ ಫಲಪರ್ಯವಸಾನವನ್ನು ಚಿಂತಿಸದೆ, ಮಾಡಬೇಕಾದ ಕಾರ್ಯ ಮಾಡಲೇಬೇಕು. ಒಂದು ವೇಳೆಗೆ ನಾವು ಒಂದು ಕಾರ್ಯವನ್ನು ಮಾಡಲಿಕ್ಕಿಲ್ಲವೆಂದು ಕುಳಿತುಕೊಂಡರೂ ನಮ್ಮಲ್ಲಿ ಸತ್ವರಜತಮವೆಂಬ ಪ್ರಕೃತಿಯ ಗುಣಗಳು ಎಂದಿನ ವರೆಗಿರುವವೊ ಅಂದಿನ ವರೆಗೆ ಅವುಗಳು ಆ ಕಾರ್ಯವನ್ನು ನಮ್ಮಿಂದ ಮಾಡಿಸದೆ ಬಿಡಲಾರವು.

**ನ ಹಿ ಕಶ್ಚಿತ್ಕ್ಷಣಮಪಿ ಜಾತುತಿಷ್ಠತ್ಯಕರ್ಮಕೃತ್।**
**ಕಾರ್ಯತೇ ಹ್ಯವಶಃ ಕರ್ಮ ಸರ್ವ ಪ್ರಕೃತಿಜೈರ್ಗುಣೈಃ॥**

*(ಅ.೩, ಶ್ಲೋ.೫)*

ಎಂಬೀ ಭಗವದ್ವಾಕ್ಯವು ಎಂದೆಂದಿಗೂ ಸುಳ್ಳಾಗದು. ಇದಲ್ಲದೆ ನಾವು ಮತ್ತೊಂದು ಸಂಗತಿಯನ್ನು ಮುಖ್ಯವಾಗಿ ಮನಸ್ಸಿನಲ್ಲಿಟ್ಟುಕೊಳ್ಳಬೇಕು, ಏನೆಂದರೆ ಯಾವುದೊಂದು ಕಾರ್ಯವನ್ನಾದರೂ 'ನಾನು' ಮಾಡಿದೆ, ಅಥವಾ 'ನಾನು' ಮಾಡಲಿಲ್ಲವೆಂದು ಆಲೋಚಿಸುವುದು ವ್ಯರ್ಥ. 'ನಾನು' ಯಾರು? 'ನೀನು' ಯಾರು? ನನ್ನಲ್ಲಿ ಯಾರು? ನಿನ್ನಲ್ಲಿ ಯಾರು? ಶ್ರೀ ಪರಮಾತ್ಮನು ನಮಗೆ ಸ್ವಾಭಾವಿಕ ಗುಣಗಳನ್ನು ಮತ್ತು ಇಂದ್ರಿಯಗಳನ್ನು ಕೊಟ್ಟಿದ್ದಾನೆ. ಅವುಗಳ ಮೇಲೆ ನಮ್ಮ ಅಧಿಕಾರವೇನೂ ಇಲ್ಲ. ಅವುಗಳು ತಮ್ಮಷ್ಟಕ್ಕೇ ತಾವೇ ತಮ್ಮ ವ್ಯಾಪಾರದಲ್ಲಿ ಪ್ರವರ್ತಿಸುತ್ತವೆ. "ಇಂದ್ರಿಯಾಣೇಂದ್ರಿರ್ಥೇಷುವರ್ತತ ಇತಿ ಪಾರಾಯನ" (ಅ.೫, ಶ್ಲೋ.೯) ಎಂದು ಶ್ರೀ ಕೃಷ್ಣಪರಮಾತ್ಮನ ವಾಕ್ಯವಿದೆ. ಅರ್ಥಾತ್ ನಮ್ಮ ಸ್ವಾಭಾವಿಕ ಗುಣಗಳಿಗನುಸಾರವಾಗಿಯೂ ಇಂದ್ರಿಯಗಳ ಇಚ್ಛೆಗನುಸಾರವಾಗಿಯೂ ನಾವು ಯಾವ ಕಾರ್ಯವನ್ನು ಮಾಡಿದರೂ ನಮ್ಮ ಆತ್ಮಕ್ಕೆ ಯಾವ ದೋಷವೂ ಇಲ್ಲ. ಏತಕ್ಕೆಂದರೆ,

**ಯಥಾ ಸರ್ವಗತಂ ಸೂಕ್ಷ್ಮಾದಾಕಾಶಂ ನೋಪಲಿಪ್ಯತೇ।**
**ಸರ್ವತ್ರಾವಸ್ಥಿತೋ ದೇಹೇ ತಥಾತ್ಮಾ ನೋಪಲಿಪ್ಯತೇ॥**

*(ಅ.೧೩, ಶ್ಲೋ, ೩೩)*

ಎಲ್ಲಾ ಕಡೆಯಲ್ಲಿಯೂ ಇರುವ ಆಕಾಶವು ಸೂಕ್ಷ್ಮತ್ವ ಉಳ್ಳದ್ದಾದುದರಿಂದ ಹೇಗೆ ನಿರ್ಲೇಪಿಯೋ ಹಾಗೆಯೇ ಎಲ್ಲಾ ಶರೀರಗಳಲ್ಲಿರುವ ಆತ್ಮನು ನಿರ್ಲಿಪ್ತನೆಂದು ಶ್ರೀ ಕೃಷ್ಣಪರಮಾತ್ಮನೇ ದೃಢವಾಗಿ ಹೇಳಿದ್ದಾನೆ. ಏತದರ್ಥ ನಾವು ನಮ್ಮ ವಿಷಯಭೋಗಗಳನ್ನು ಸರ್ವಥಾ ಉಪೇಕ್ಷಿಸಬಾರದು.

**ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ।**
**ಸತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಃ ಸ್ಯಾತ್ರಿಭಿ ಗುರ್ಣೈಃ॥**

*(ಅ.೧೮, ಶ್ಲೋ, ೪೦)*

ಪ್ರಕೃತಿಗುಣಗಳಿಂದ ಬಿಡಲ್ಪಟ್ಟ ಯಾವ ಜೀವಿಯೂ ಭೂಲೋಕದಲ್ಲಿಯೂ ಸ್ವರ್ಗದಲ್ಲಿಯೂ ದೇವತೆಗಳಲ್ಲಿಯೂ ಇಲ್ಲವೆಂದು ಭಗವದ್ವಾಕ್ಯವು. ಯಾವ್ಯಾವ ಸಮಯದಲ್ಲಿ ಏನೇನು ಬೇಕೆಂದು ಇಂದ್ರಿಯಗಳು ಪ್ರಕೃತಿಯ ಗುಣಗಳಿಗನುಸಾರವಾಗಿ ಇಚ್ಛಿಸುತ್ತವೋ ಅವನ್ನೆಲ್ಲ ನಾವು ಭೋಗಿಸಲೇಬೇಕು. ಯಾವುದೊಂದು ಕೃತ್ಯದಲ್ಲಿಯೂ ಗುಣದೋಷವನ್ನು ವಿಚಾರಿಸಬಾರದು. ಕರ್ಮವೆಂದೆನಿಸುವ ಕೃತ್ಯವು ದೋಷದಿಂದ ಬೆರೆದಿದ್ದಾಗ್ಯೂ ಅದನ್ನು ಮಾಡದೆ ಬಿಡಲಾಗದು.

**ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್।**
**ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾ॥**

*(ಅ.೧೮, ಶ್ಲೋ, ೪೮)*

ಸಕಲ ಕರ್ಮಗಳಲ್ಲಿಯೂ ಆರಂಭದಲ್ಲೇ ದೋಷವು ಕೂಡಿದೆ. ದೋಷವಿಲ್ಲದ ಕರ್ಮ ಇಲ್ಲವೇ ಇಲ್ಲ. ಆದುದರಿಂದ ಇಂದ್ರಿಯಭೋಗವನ್ನು ಅನುಭವಿಸುವುದರಲ್ಲಿ ಗುಣದೋಷಗಳ ವಿಚಾರವನ್ನೇ ಮಾಡಬಾರದು. ಅರ್ಜುನನು ತಾನು ಯುದ್ಧ ಮಾಡಲಾರೆನೆಂದು ಮುಷ್ಕರ ಹಿಡಿದು ಕುಳಿತಾಗ ಶ್ರೀ ಪರಮಾತ್ಮನು ಹೇಳಿದ್ದೇನು ಗೊತ್ತಿದೆಯೇ?

**ಯದ್ಯಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ।**
**ಮಿಥ್ಯೈವ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ॥**

*(ಅ.೧೮, ಶ್ಲೋ, ೬೯)*

"ನೀನು ಅಹಂಕಾರದಿಂದ ಯುದ್ಧವನ್ನು ಮಾಡುವುದಿಲ್ಲವೆಂದಾಲೋಚಿಸುತ್ತೀ. ಆದರೆ ನಿನ್ನ ಸಂಕಲ್ಪ ಸುಳ್ಳಾಗುವುದು. ಪ್ರಕೃತಿಯು ನಿನ್ನನ್ನು ಪ್ರೇರೇಪಿಸುವುದು" ಎಂದು ಹೇಳಿದನು. ಪರಮಾತ್ಮನ ಮಾತಿಗೆ ಹುಸಿಯುಂಟೇ? ಅರ್ಜುನನು ಯುದ್ಧಮಾಡಿಯೇ ಮಾಡಿದನು. ಆದುದರಿಂದ ಸ್ವಭಾವ ಗುಣಗಳಿಗನುಸಾರವಾಗಿ ನಡೆಯದೆ ಸುಮ್ಮಗಿರುವುದು ಭಗವತ್ ಸಂಕಲ್ಪಕ್ಕೆ ವಿರೋಧವಾದ ವಿಷಯವೆಂದು ನಿಮ್ಮೆಲ್ಲರ ಮನಸ್ಸಿಗೆ ದೃಢವಾಗಲಿ; ಇಂದ್ರಿಯ ಭೋಗವನ್ನನುಭವಿಸುವುದರಲ್ಲಿ ಹಿಂಜರಿಯಬೇಡಿರಿ; ದುಃಖವನ್ನೆಲ್ಲ ಮರೆತು ಸುಖದಿಂದಿರ್ರಿ. ಈ ಬೋಧನೆಗನುಸರಿಸಿ ನಡಕೊಂಡಲ್ಲಿ ಇಹಪರದಲ್ಲಿ ಸಾರ್ಥಕವಿದೆ. ದಿಟವೇ, ದಿಟವೇ, ದಿಟವೇ.

"ವಿಠಲ ಜೈ ಜೈ ವಿಠಲ, ಜೈ ಜೈ ವಿಠಲ, ಜೈ ಜೈ ವಿಠಲ,
ವಿಠಲ, ವಿಠಲ, ವಿಠಲ, ವಿಠಲ, ವಿಠಲ, ವಿಠಲ, ವಿಠಲ, ವಿಠಲ,
ಪುಂಡಲೀಕ ವರದ ಪಾಂಡುರಂಗ ಹರಿವಿಠಲ!"

ಎಂದು ಹೇಳಿ ಕುಳಿತರು.

ಆ ಕೂಡಲೇ ಸೇವಾವೃತ್ತಿಯಲ್ಲಿದ್ದ ಸ್ತ್ರೀಯರಲ್ಲೊಬ್ಬಾಕೆಯು ಗೋಧಿಯ ರೊಟ್ಟಿಗಳು, ಸೌತೇಕಾಯಿಯ ಬೀಜದ ಲಡ್ಡುಗಳು, ಕಾಸಿದ ಹಾಲು ಇವೆ ಮುಂತಾದ ವಿಶ್ರಾಂತಿಕರವಾದ ಉಪಹಾರಗಳನ್ನು ತಂದಿರಿಸಿ, "ಸ್ವಾಮಿ, ತಾವು ತುಂಬಾ ಕಷ್ಟಪಟ್ಟರೂ, ನಮಗೆಲ್ಲಾ ಅಮೃತ ಸೇವಿಸಿದಂತೆ ಪರಮಾನಂದವಾಯಿತು. ತುಸಾ ಫಲಾಹಾರವನ್ನು ಮಾಡಿ ವಿಶ್ರಾಂತಿ ಪಡೆಯಿರಿ" ಎಂದಾದರಾತಿಶಯದೊಡನೆ ಹೇಳಿಕೊಂಡಳು. ಇನ್ನೊಬ್ಬಾಕೆಯು ಕೈಕಾಲುಗಳನ್ನು ಹಿಸುಕಿದಳು; ಮತ್ತೊಬ್ಬಾಕೆಯು ಗಾಳಿಹಾಕಿದಳು. ಆಗ ಅವರು 'ವಿಠಲ! ವಿಠಲ!' ಎನ್ನುತ್ತಾ ಫಲಾಹಾರ ಮಾಡಿ ಎದ್ದು ಚೌಕಿಮನೆಯಲ್ಲಿ ತನ್ನ ಆಸನವಿದ್ದಲ್ಲಿ ಹೋಗಿ ಕೂಡ್ರಿದರು. ಇಂದಿರಾಬಾಯಿಯು ಇದನ್ನೆಲ್ಲ ನೋಡಿ, ಇನ್ನು ತಾನಿಲ್ಲಿದ್ದರೆ ಅಘೋರ ದುರ್ಗತಿ ಬರುವುದು

ದಿಟವೇ ಎಂದು ತಿಳಿದು, ಪಲಾಯನದ ಉಪಾಯವನ್ನು ಹುಡುಕತೊಡಗಿದಳು. "ಹೇಳಿದ್ದನ್ನೆಲ್ಲ ಹೃದ್ಗತ ಮಾಡಿಕೊಂಡೆಯಾ?" ಎಂದು ಅಂಬಾಬಾಯಿಯು ಕೇಳಿದಾಗ "ಚೆನ್ನಾಗಿ ಹೃದ್ಗತ ಮಾಡಿಕೊಂಡೆ" ಎಂದುತ್ತರಕೊಡಲು, ಅಂಬಾಬಾಯಿಯು ಶಾನೆ ಸಂತೋಷಪಟ್ಟಳು.

## ೪೪

ಆ ಮೇಲೆ ಸಂತರು ನಾಲ್ಕೈದು ದಿವಸಗಳ ಪರ್ಯಂತರ ಭಕ್ತಿವಿಜಯ, ದಾಸಬೋಧ, ಸಂತಸೇವಾಮೃತ ಇವೇ ಮುಂತಾದ ಅನೇಕ ಗ್ರಂಥಗಳನ್ನೋದಿ ವಿವರಣ ಭಾಷಣ ನಿರೂಪಣಗಳನ್ನು ಮಾಡಿದರು. ಆದರೂ ಇಂದಿರಾಬಾಯಿಯ ಮನಸ್ಸು ಲೇಶಾಂಶವಾದರೂ ಪರಿಣಮಿಸಲಿಲ್ಲ. ಅವಳು ಮೊದಲಿನಂತೆಯೇ ಯಾರನ್ನಾದರೂ ಕಾಣಿಸಿಕೊಳ್ಳದೆ ಸಂತಮಂಡಲಿ ಯವರಲ್ಲ್ಯಾವನಾದರೂ ಒಂದೊಂದು ಸಮಯದಲ್ಲಿ ಅವಳಿದ್ದ ಕೋಣೆಯ ಬಾಗಿಲಿನ ಸಮೀಪ ಬಂದರೆ, ಕೂಡಲೆ ಬಾಗಿಲು ಮುಚ್ಚುವುದು, ಅಥವಾ ಅವನು ಅಲ್ಲಿಂದಲೇ ತಿರುಗಿ ಹೋಗುವ ಹಾಗೆ ತನ್ನೊಳು ತಾನೇ ಏನಾದರೂ ಮಾತನಾಡುವುದು, ಏವಂಚ ಅವಳು ಸಂತಮತಾವಲಂಬನ ಮಾಡುವುದು ದುರ್ಲಭವೆಂದು ಕಾಣಿಸುವ ಹಾಗಿನ ಎಲ್ಲಾ ಚಿನ್ಹೆಗಳನ್ನು ತೋರಿಸುತ್ತಾ ಬಂದಳು. ತಾಯಿ ತಂದೆಗಳು ಎಷ್ಟು ಸಾರಿ ಹೇಳಿದರೂ ಕೇಳುತ್ತಿದ್ದಿಲ್ಲ. ಹೀಗೆಯೇ ಕೆಲವು ದಿವಸಗಳು ಕಳೆದವು.

ಕನ್ಯಾಪಹರಣದ ಮೊಕದ್ದಮೆಯ ನಿರ್ಣಯ ಸಮಯವು ಸಮೀಪಿಸಿತು. ನ್ಯಾಯಸ್ಥಾನದಲ್ಲಿ ವಿಚಾರಣೆ ಸಮಯದಲ್ಲಿ ತಪ್ಪದೆ ಹಾಜರಿರುವುದಕ್ಕೆ ಜಾಮೀನು ಕೊಟ್ಟ ಸಂತ ಬಾಳಪ್ಪಯ್ಯನು ಚಿಂತಾಗ್ರಸ್ತನಾಗಿ, ಭಜನ ಪಾರಾಯಣ ರಂಗಶಿಲಾ ನಾಟ್ಯ ಮುಂತಾದವುಗಳನ್ನು ರವಷ್ಟು ಉಪೇಕ್ಷಿಸತೊಡಗಿದನು. ತನಗೆ ಶರೀರ ಸ್ವಸ್ಥತೆಯೂ, ಚಿತ್ತ ಸ್ಥಿರತೆಯೂ ಕುಂದುತ್ತಾ ಬರುತ್ತಿವೆ. ತನ್ನ ದೇಹಾಂತ್ಯ ಕಾಲವು ಬರಲಾರಂಭಿಸಿದೆಯೋ ಏನೋ ಎಂಬ ದಿಗಿಲು ಹುಟ್ಟಿದೆ. 'ಜಾತಸ್ಯ ಮರಣಂ ಧ್ರುವಂ' ಹುಟ್ಟಿದವನಿಗೆ ಮರಣವಿದ್ದೇ ಇದೆ. ಆದರೂ ಸ್ವಭಾವಗುಣ ಕರ್ಮ ವಿಭಾಗದಿಂದ ಈ ಅನಿತ್ಯ ಶರೀರದಲ್ಲಿ ಆತ್ಮನಿರುವ ವರೆಗೆ ಸುಖ ಕಷ್ಟಗಳ ಅನುಭವದ ಫಲವು ತಪ್ಪುವುದಿಲ್ಲ. ಮೊಕದ್ದಮೆಯ ನಿರ್ಣಯದ ಸಮಯ ಬಂತು. ಅದಕ್ಕೆ ಮುಂಚಿತವಾಗಿಯೇ ಈ ದೇಹಕ್ಕೆ ಅಂತ್ಯಬಂದಿದ್ದರೆ ಬಹಳ ಚೆನ್ನಾಗಿತ್ತು. ಇನ್ನು ವಿಠೋಬನ ಚಿತ್ತವೆಂದು ಹೀಗೆಲ್ಲ ಮಂಡಳಿಯವರ ಹತ್ತಿರ ಮಾತನಾಡುವುದು ಅಧ್ಯಕ್ಷರ ತಿಳುವಳಿಕೆಗೆ ಬಂದು, ಅವರು ಭೀಮರಾಯನನ್ನು ಒತ್ತಟ್ಟಿಗೆ ಕರೆದು,

"ರಾಯರೇ, ಈಗ ಕೆಲವು ದಿವಸಗಳಿಂದ ಶ್ರೀ ವಿಠಲನ ಕೃಪೆಯಿಂದ ಈ ಮಂಡಲಿಯು ನಿಮ್ಮಾಶ್ರಯದಲ್ಲಿದೆ. ಅನುಷ್ಠಾನ ಧರ್ಮೋಪದೇಶ ಮುಂತಾದ್ದು ನಿಮ್ಮ ಔದಾರ್ಯಗುಣದ ಪ್ರಭಾವದಿಂದ ಸಾಂಗವಾಗಿ ನಡೆಯುತ್ತಿದೆ. ಏತನ್ಮಧ್ಯ, ದುಷ್ಟರಿಂದ ನಿರ್ಮಾಣವಾದ ಆ ಕನ್ಯಾಪಹರಣವೆಂಬ ಮೊಕದ್ದಮೆಯು ನಿರ್ಣಯಕ್ಕೆ ತರೋಣಾಗುವ

ಪ್ರಬಂಧದಲ್ಲಿ ಈ ಮಂಡಲಿಯವರು ಹೇಗೆ ಪ್ರವರ್ತಿಸಬೇಕೆಂದು ಗೊತ್ತಾಗದೆ ಅವಸಾನದಲ್ಲಿ ಮಂಡಲಿಯವರ ಕೀರ್ತಿಗೆ ಹಾನಿ ಬರುವುದೋ ಎಂಬ ದಿಗಿಲು ಹುಟ್ಟಿದೆ. ನಿಮ್ಮಂತಹ ಭಕ್ತಶಿರೋಮಣಿಗಳೂ ಔದಾರ್ಯ ಗುಣಸಂಪನ್ನರೂ ಬೆಂಬಲಕ್ಕಿರುವಾಗ ಭಯವೇನೂ ಇಲ್ಲದಿದ್ದರೂ, ಅನೇಕ ದೊಡ್ಡ ದೊಡ್ಡ ತಾಪತ್ರಯಗಳಿರುವ ನಿಮಗೆ ಒಂದು ಸೂಚನೆಯನ್ನು ಕೊಡುವುದು ಆಯುಕ್ತವಲ್ಲವೆಂದು ತೋರುತ್ತೆ."

"ಸ್ವಾಮಿ, ದಾಸನು ಈ ವಿಷಯವನ್ನು ಮೊದಲೇ ಆಲೋಚಿಸಿ ಅದಕ್ಕೆ ಬೇಕಾದ ಏರ್ಪಾಡುಗಳೆಲ್ಲವನ್ನೂ ಮಾಡಿಟ್ಟಿದ್ದಾನೆ. ದೇವಧರ್ಮ, ಗುರುಹಿರಿಯರು, ಸಾಧುಸಂತರೆಂದರೆ ತುಂಬಾ ವಿಶ್ವಾಸವಿದ್ದು ನ್ಯಾಯಸ್ಥಾನದಲ್ಲಿ ಅನೇಕ ಪ್ರಬಂಧಗಳಲ್ಲಿ ಅನೇಕ ವರುಷಗಳಿಂದ ವಾದಿಸಿ ಗೆದ್ದು, ಪೂರ್ಣಾನುಭವವುಳ್ಳ ವಕೀಲ ಅಣ್ಣಪ್ಪಯ್ಯನವರಿಗೆ ಐನೂರು ರೂಪಾಯಿ ಪ್ರತಿಫಲ ನಿರ್ಣಯಿಸಿ, ಬೇಕಾದ ಅನುಭವಗಳನ್ನೆಲ್ಲ ಕೊಟ್ಟು ಸಿದ್ಧಪಡಿಸಿದ್ದಾನೆ. ದಾಸನು ಜೀವಂತವಾಗಿರುವ ವರೆಗೆ ಈ ಮಂಡಲಿಯ ತಲೆಹೂವು ಬಾಡದೆಂದು ನಂಬಿದ್ದಾನೆ. ಬಿಡುಗಡೆಪಟ್ಟ ದಿವಸವೇ ರಾಧಾಕೃಷ್ಣ ಮಂದಿರದಲ್ಲಿ ರಾಧಾವಿಲಾಸ ಪ್ರದರ್ಶನವನ್ನು ಮಾಡಿಸುವುದೆಂದು ಪ್ರತಿಜ್ಞೆಮಾಡಿದ್ದಾನೆ. ಆದುದರಿಂದ ತಾವು ಸರ್ವರೂ ಧೈರ್ಯದಿಂದಲೂ ಸಂತೋಷದಿಂದಲೂ ಇರಬೇಕು. ಲೇಶಮಾತ್ರವಾದರೂ ಚಿಂತೆಬೇಡ."

"ಜೈ ವಿಠಲ್! ಜೈ ವಿಠಲ್! ಚೆನ್ನಾಯಿತು!"

"ನಾಡದು ಸೋಮವಾರ ಪೂರ್ವಾಹ್ನ ಹತ್ತು ಗಂಟೆಗೆ ನ್ಯಾಯಸ್ಥಾನಕ್ಕೆ ಹೋದರಾಯಿತು."

"ಜೈ ವಿಠಲ್!"

"ಸ್ವಾಮಿ, ನಮ್ಮ ಇಂದಿರೆಯ ವಿಷಯವು ಈ ವರೆಗೇನೂ ಗೊತ್ತುಹರಿಯಲಿಲ್ಲವಷ್ಟೆ?"

"ರಾಯರೇ, ಅದಕ್ಕಾಗಿ ನೀವು ಚಿಂತಿಸಬೇಕಾದ್ದಿಲ್ಲ. ಸಾವಿರ ಕಲ್ಲೆಸೆಯುವಾಗ ಒಂದಾದರೂ ತಾಗದಿರುವುದೇ? ಶ್ರೀ ರಾಮನು ಸಾಕ್ಷಾತ್ ಪರಮಾತ್ಮನ ಅವತಾರ ತಾನೆಯಾದರೂ ಸೀತಾದೇವಿಯನ್ನು ಲಂಕೆಯಿಂದ ತರುವುದಕ್ಕೆ ಎಷ್ಟು ಕಷ್ಟ ಪಡೆದನು? ಸುಭದ್ರಾದೇವಿಯನ್ನು ವಶಪಡಿಸಿಕೊಳ್ಳಬೇಕಾದರೆ ಕಿರೀಟಿಯು ಎಷ್ಟು ಪ್ರಯತ್ನಗಳನ್ನು ಮಾಡಿದನು? ಇಂತಹ ಸಂಗತಿಗಳನ್ನು ನೀವು ಅರಿತವರೇ ಆಗಿದ್ದೀರಿ. ಗಂಡಸರನ್ನು ವಶಪಡಿಸುವುದೆಂದರೆ ದೊಡ್ಡ ಮಾತಲ್ಲ, ಹೆಂಗಸರ ಸಂಗತಿ ಬೇರೆ. ಅದಲ್ಲದೆ ಈಗಿನ ದಿವಸಗಳಲ್ಲಿ ತಾಯಿ ತಂದೆಗಳು ಹುಡುಗಿಯರಿಗೆ ಬರಹವನ್ನು ಕಲಿಸಿ, ಅ ಹುಡುಗಿಯರು ಪಾದ್ರಿಗಳು ಮಾಡಿದ ಕೆಲವು ಪುಸ್ತಕಗಳನ್ನು ಓದಿ ಕೆಟ್ಟುಹೋಗುತ್ತಾರೆ. ಅವರಿಗೆ ಸದ್ಧರ್ಮೋಪದೇಶವನ್ನು ಕೊಟ್ಟು ಸನ್ಮಾರ್ಗಕ್ಕೆ ತರುವುದು, ಮೊದಲಿಗಿಂತ ಈಗ ಹೆಚ್ಚು ಪ್ರಯಾಸಕರವಾದ ಪ್ರಕರಣವಾಗಿದೆ. ಆದರೂ ನೀವು ಯೋಚಿಸಬೇಕಾದ್ದಿಲ್ಲ. ಶ್ರೀ ವಿಠೋಬನ ದಯದಿಂದ ನಾವು ಬಿತ್ತುವುದಕ್ಕೆ ಪ್ರಯತ್ನಿಸುವ ಸದ್ಧರ್ಮ ಬೀಜವು ನಿಷ್ಫಲವಾದೀತೆಂದು ತಿಳಿದುಕೊಳ್ಳಕೂಡದು. ನಿಮ್ಮ ಇಂದಿರೆಗಿಂತಲೂ ಕಠಿಣ ಮನಸ್ಸಿದ್ದ ಅವಳ ಹಾಗಿನ ಸ್ತ್ರೀಯರನೇಕರು ನಮ್ಮ ಮಂಡಲಿಯಲ್ಲಿದ್ದಾರೆ. ಈಗ ಮೂರು ನಾಲ್ಕು ಮಂದಿಯನ್ನು ನೀವು ನೋಡುತ್ತೀರಷ್ಟೆ? ಇಂದಿರೆಯ ಮಾತೇನು ದೊಡ್ಡದು?"

"ಏನೋ ಸ್ವಾಮಿ, ದಾಸನು ತಮ್ಮ ಪಾದಾರವಿಂದವನ್ನೇ ನಂಬಿದ್ದಾನೆ. 'ನಂಬಿದವನಿಗಿಂಬಿದೆ' ಎಂಬ ವಚನವು ಸುಳ್ಳಾಗದೆಂದು ನನ್ನ ಮನಸ್ಸಿಗೆ ದೃಢವಿದೆ. ಗಯನು ಧನಂಜಯನನ್ನು ಮರೆಹೊಕ್ಕು ನಂಬಿದುದರಿಂದ ಶ್ರೀ ಕೃಷ್ಣ ಪರಮಾತ್ಮನಿಂದ ತಾನೇ ಅವನನ್ನು ಕೊಲ್ಲಲಸಾಧ್ಯವಾಯಿತೆಂದು ಕೃಷ್ಣಾರ್ಜುನರ ಕಾಳಗದ ಪ್ರಸಂಗದಲ್ಲಿ ತೋರುತ್ತೆ. ಹಾಗೆಯೇ ದಾಸನು ತಮ್ಮ ಪಾದವನ್ನು ಮರೆಹೊಕ್ಕಿದ್ದಾನೆ."

"ಜೈ ವಿಠಲ್! ಜೈ ವಿಠಲ್!"

ಈ ಸಂಭಾಷಣೆಯನ್ನು ದೂರದಿಂದ ಕೇಳುತ್ತಿದ್ದ ಅಂಬಾಬಾಯಿಯು ಮುಂದಕ್ಕೆ ಬಂದು, "ಸ್ವಾಮಿ, ನಾನು ಪುನಃ ಪ್ರತ್ಯೇಕವಾಗಿ ಅರಿಕೆಮಾಡಿಕೊಳ್ಳತಕ್ಕದಿಲ್ಲವಷ್ಟೆ? ಪತಿ ಎಲ್ಲಾ ಸಂಗತಿಗಳನ್ನು ಕುರಿತು ಮಾತನಾಡಿದ್ದನ್ನು ನಾನು ಕೇಳಿದೆನು. ಮೊಕದ್ದಮೆಯ ವಿಷಯದಲ್ಲಿ ಮನಸ್ಸು ಕೊಡುವ ಹಾಗೆ ನಾನು ಬಹಳ ದಿವಸದಿಂದ ಪತಿಗಳ ಕೂಡೆ ಹೇಳುತ್ತಾ ಇದ್ದೆನು. ಅವರು ಬೇಕಾದ ಏರ್ಪಾಡುಗಳನ್ನೆಲ್ಲ ಮಾಡಿದ್ದಾರೆ. ತಾವೆಲ್ಲರೂ ಸಂತೋಷದಿಂದ ಕೆಲವು ಕಾಲ ಇಲ್ಲಿದ್ದು ನಮಗೆಲ್ಲರಿಗೂ ಜ್ಞಾನಮಾರ್ಗವನ್ನು ತೋರಿಸುವುದಲ್ಲದೆ ಮುಖ್ಯವಾಗಿ ನಮ್ಮ ಇಂದಿರೆಯ"– ಇಷ್ಟು ಮಾತನಾಡುವಾಗ ದುಃಖದಿಂದಳಲಾರಂಭಿಸಿದಳು. ಆಗಲಾ ಸಂತಶಿರೋಮಣಿಯು "ಅವ್ವಾ, ಅಳುವುದೇಕೆ? ವಿಠೋಬನ ದಯದಿಂದ ಸಕಲಕಾರ್ಯವೂ ನೆಟ್ಟಗಾಗುವುದು. ಚಿಂತಿಸಬೇಡ" ಎಂದು ಸಂತೈಸಿದರು. ಅಂಬಾಬಾಯಿಯು ಆ ಮೇಲೆ ಮಗಳ ಬಳಿಗೆ ಹೋಗಿ,

"ಅವ್ವಾ, ಇಷ್ಟು ದಿವಸಗಳ ವರೆಗೆ ಸಂತರು ಮಾಡಿದ ಪಾರಾಯಣ ಭಾಷಣ, ನಿರೂಪಣಗಳನ್ನು ಕೇಳಿದೆಯಷ್ಟೆ?"

"ಚೆನ್ನಾಗಿ ಕೇಳಿದ್ದೇನೆ."

"ಹಾಗಾದರೆ ಏಕೀವರೆಗೆ ನಿನ್ನ ನಡತೆಯಲ್ಲಿ ಗುಣಾಂಶದ ಯಾವುದೊಂದು ಭೇದವೂ ಕಾಣಿಸುವುದಿಲ್ಲ?"

"ಅದು ಅಧ್ಯಕ್ಷರು ಹೇಳಿದ ಹಾಗೆಯೇ. ನಮ್ಮ ನಮ್ಮ ಸ್ವಭಾವಗುಣ ಕರ್ಮವಿಭಾಗವು ನಮ್ಮನ್ನು ಬಿಡುವುದಿಲ್ಲ. ಸ್ವಭಾವಗುಣದಿಂದ ನಮಗುಂಟಾಗುವ ಇಚ್ಛೆಯ ಪ್ರಕಾರ ನಾವು ನಡಕೊಳ್ಳುವುದಲ್ಲದೆ ಬೇರೆಯವರೆಷ್ಟು ಹೇಳಿದರೂ ನಮ್ಮ ನಡತೆಯಲ್ಲಿ ಭೇದಗತಿ ಬಾರದಷ್ಟೆ?"

"ನಿನ್ನ ಹತ್ತಿರ ಮಾತನಾಡಿದರೆ, ನೀನು ನಿನಗೆ ಬೇಕಾದ ಸಂಗತಿಗಳನ್ನೇ ಸ್ವೀಕರಿಸುತ್ತಿಯಲ್ಲದೆ ಎಲ್ಲಾ ಸಂಗತಿಗಳ ಗುಣದೋಷಗಳನ್ನಾಲೋಚಿಸುವುದಿಲ್ಲ."

"ಅದು ಸಹ ಸ್ವಭಾವಗುಣ ಕರ್ಮವಿಭಾಗವೇ."

ಅಂಬಾಬಾಯಿಯು ಈ ಮಾತನ್ನು ಕೇಳಿ ಮನಸ್ಸಿನಲ್ಲೇ, 'ಅಯ್ಯೋ! ದುಗ್ಗೆಯ ಕಳ್ಳು ದುಗ್ಗೆಗೆ ಹತ್ತಿತೆಂಬ ಹಾಗಾಯಿತೇ! ನಾವು ಕೊಟ್ಟ ಉಪದೇಶವೇ ನಮಗೆದಿರಾಗಿ ನಿಂತಿತೇ!' ಎಂದು ಮನಸ್ಸಿನಲ್ಲೇ ಅಂದುಕೊಂಡು ಹೆಚ್ಚಿಗೆ ಮಾತನಾಡದೆ ಅಲ್ಲಿಂದೆದ್ದು ಹೋದಳು.

## ೪೫

ಒಂದೆರಡು ದಿವಸಗಳು ಕಳೆದವು. ಸೋಮವಾರವು ಬಂತು. ಸಂತ ಬಾಳಪ್ಪಯ್ಯನು ಕನ್ಯಾಪಹಾರದ ಮೊಕದ್ದಮೆಯಲ್ಲಿ ಮಾಡೋಣಾದ ಅಪರಾಧಾರೋಪಣೆಗೆ ಉತ್ತರ ಕೊಡುವುದಕ್ಕೆ ಹೋಗಬೇಕಾಯಿತು. ಸಂತಮಂಡಲಿಯವರು ಆ ದಿವಸ ಪರಿಪಾಠ, ನಿರ್ಮಾಲ್ಯ ವಿಸರ್ಜನ, ಮಹಾಪೂಜೆಯೆ ಮುಂತಾದ ಅನುಷ್ಠಾನಗಳನ್ನು ಸಾಂಗವಾಗಿ ನಡೆಯಿಸುವುದಕ್ಕೆ ಸಮಯವಿಲ್ಲದೆ ಚುಟುಕು ಚುಟುಕಾಗಿಯೇ ನಡೆಯಿಸಿ, ಹತ್ತು ಗಂಟೆಯ ಸಮಯಕ್ಕೆ ಬಾಳಪ್ಪಯ್ಯನು ನ್ಯಾಯಸ್ಥಾನಕ್ಕೆ ಬಂದನು. ಮೊಕದ್ದಮೆಯ ವಿಚಾರಣೆಯು ತೊಡಗಿತು. ಭಾಷಾಂತರಗಾರನು ಅಪರಾಧ ಪತ್ರವನ್ನು ಬಾಳಪ್ಪಯ್ಯನಿಗೆ ಓದಿ ಹೇಳಿ, "ಇದರಲ್ಲಿ ತೋರುವ ಹಾಗೆ ನೀನು ಕಲ್ಯಾಣಿ ಎಂಬ ಹೆಸರಿನ ಯೌವನಸ್ಥಳಾದ ವಿಧವೆಯನ್ನು ಮಂಕುಗೊಳಿಸಿಕೊಂಡು ಹೋದ್ದು ಸರಿಯೇ?" ಎಂದು ಕೇಳಲು, "ವಿಠಲ! ವಿಠಲ! ವಿಠಲ! ನಾನು ಸ್ವಪ್ನೇಪಿ ಅಂತಹ ಅಪರಾಧ ಮಾಡಲಿಲ್ಲ" ಎಂದು ಉತ್ತರ ಕೊಟ್ಟನು.

ಆಗ ಸರಕಾರದ ಕಡೆಯ ವಕೀಲನು ಮೊಕದ್ದಮೆಯ ಮುಖ್ಯ ಸಂಗತಿಗಳನ್ನೆಲ್ಲ ನ್ಯಾಯಾಧಿಪತಿಗೂ ಎಸ್ಸೆಸ್ಸರರೆಂಬ ಸಹಾಯಕರಿಗೂ ಹೇಳಿ ತನ್ನ ಭಾಗದ ಸಾಕ್ಷಿಗಳನ್ನು ವಿಚಾರಿಸಲಾರಂಭಿಸಿದನು. ಕಲ್ಯಾಣಿಯನ್ನು ವಿಚಾರಿಸಲಾಗಿ, ಆಕೆಯು ತಾನು ಹದಿನೈದು ವರ್ಷ ಪ್ರಾಯದ ವಿಧವೆ, ಪ್ರತಿವಾದಿಯು ಆಗಾಗ್ಗೆ ತಾನಿದ್ದಲ್ಲಿಗೆ ಬಂದು, ಸಂತ ಧರ್ಮೋಪದೇಶದಿಂದ ಜನ್ಮದ ಸಾರ್ಥಕದ ಮಾರ್ಗವನ್ನು ತೋರಿಸುತ್ತೇನೆಂದು ಹೇಳಿ, ಅನೇಕ ಕಾಮೋತ್ತೇಜಕ ವಿಷಯಗಳನ್ನು ಮಾತನಾಡುತ್ತಾ ಒಂದೊಂದು ಸಮಯದಲ್ಲಿ ತನ್ನ ಮೈಮುಟ್ಟುತ್ತಾ, ಆಗಾಗ್ಗೆ ಸಂತ ಪ್ರಸಾದವೆಂದು ಕೆಲವು ಮಧುರವಾದ ಪದಾರ್ಥಗಳನ್ನು ತಿನ್ನಲಿಕ್ಕೆ ಕೊಡುತ್ತಾ, ಹೀಗೆಲ್ಲ ಬಹು ವಿಧದಿಂದ ತನ್ನನ್ನು ಮಂಕುಗೊಳಿಸಿ, ಕಡೆಗೆ ಒಂದು ದಿವಸ "ಬ್ರಹ್ಮಾನಂದವನ್ನು ಕಾಣಿಸುತ್ತೇನೆ ಬಾ" ಎಂದು ತನ್ನ ರಕ್ಷಕರಿಗೆ ತಿಳಿಯದ ಹಾಗೆ ತನ್ನನ್ನು ಕರೆದುಕೊಂಡು ಬೇರೊಂದೂರಿಗೆ ಹೋಗಿಬಿಟ್ಟನು. ಅಲ್ಲಿ ತಾವಿಬ್ಬರೂ ಗಂಡಹೆಂಡರಂತೆ ನಡೆದುಕೊಂಡಿರುವಾಗ ಪೋಲೀಸಿನವರು ಬಂದು, ಇವನನ್ನು ಹಿಡಿದುಕೊಂಡು ಬಂದರು. ಇವನು ಜಾಮೀನು ಕೊಟ್ಟು ಬಂಧನದಿಂದ ಬಿಡಿಸಿಕೊಂಡು ಬಂದನು ಎಂದು ವಾಙ್ಮೂಲ ಕೊಟ್ಟಳು. ಆಗ ಪ್ರತಿಪಕ್ಷದ ವಕೀಲ ಅಣ್ಣಪ್ಪಯ್ಯನು, ಈಕೆಗೆ ಒಂದೇ ಪ್ರಶ್ನೆಯಿಂದ ಧ್ವಂಸಾ ಮಾಡುತ್ತೇನೆ ಎಂದು ಹೇಳಿ, "ನೀನು ಈತನ ಸಂಗಡ ನಿನ್ನ ಆತ್ಮಸಂತೋಷದಿಂದಲೇ ಹೋದ್ದಲ್ಲವೇ?" ಎಂದು ಕೇಳಲು, ಅವಳು ಹೌದೆಂದು ಒಪ್ಪಿದಳು. ಆ ಬಳಿಕ ಸರಕಾರದ ಕಡೆಯ ವಕೀಲನು ಬೇರೆ ಎರಡು ಮಂದಿ ಸಾಕ್ಷಿಗಳನ್ನು ವಿಚಾರಿಸಿದ್ದಲ್ಲಿ ಪ್ರತಿವಾದಿಯು ಆಕೆಯನ್ನು ಕರೆದುಕೊಂಡು ಹೋಗುವುದನ್ನು ತಾವು ಕಣ್ಣಾರೆ ಕಂಡದ್ದಾಗಿ ಅವರು ಸಾಕ್ಷಿಕೊಟ್ಟರು. ಆಗ ಅಣ್ಣಪ್ಪಯ್ಯನು "ಈ ಪ್ರತಿವಾದಿಯು ಅವಳನ್ನು ಜುಲುಮಿನಿಂದ ಕೊಂಡುಹೋದ್ದೋ ಹೇಗೆ?" ಎಂದು ಪ್ರಶ್ನೆ ಮಾಡಲು, ಜುಲುಮು ನಡೆಸಿದ್ದನ್ನು ತಾವು

ಕಾಣಲಿಲ್ಲವೆಂದರು. ಆ ಬಳಿಕ ಪ್ರತಿವಾದಿಯು ಮೆಜಿಸ್ಟ್ರೇಟರ ಮುಂದೆ ಬರೆಯಿಸಿದ ಕೈಪೇತು ಓದೋಣವಾಯಿತು. ಅದರಲ್ಲಿ ಕಲ್ಯಾಣಿಯು ತಾನಾಗಿಯೇ ಸಂಗಡ ಹೋದ್ದಲ್ಲದೆ ಅವಳನ್ನು ಕರೆದುಕೊಂಡು ಹೋದ್ದಲ್ಲವೆಂದೂ ಅವಳ ಹತ್ತಿರ ತಾನು ವ್ಯಭಿಚಾರ ಮಾಡಿದ್ದಿಲ್ಲವೆಂದೂ ಪ್ರತಿವಾದಿಯೂ ಬರೆಯಿಸಿದ್ದನು. "ಈಗ ಹೆಚ್ಚಿಗೆ ಏನಾದರೂ ಹೇಳುವುದಕ್ಕೂ ಪ್ರತಿಭಾಗದಲ್ಲಿ ಸಾಕ್ಷಿಗಳನ್ನು ವಿಚಾರಿಸುವುದಕ್ಕೂ ಇದೆಯೇ?" ಎಂದು ನ್ಯಾಯಾಧಿಪತಿಯು ಕೇಳಲು, ಹೆಚ್ಚಾಗಿ ಹೇಳತಕ್ಕದ್ದೂ ಇಲ್ಲ, ಸಾಕ್ಷಿಗಳನ್ನು ವಿಚಾರಿಸುವ ಅವಶ್ಯವೂ ಇಲ್ಲವೆಂದು ಹೇಳಬೇಕಾಗಿ ಅಣ್ಣಪ್ಪಯ್ಯನೂ ಸೂಚಿಸಿದ ಪ್ರಕಾರ ಬಾಳಪ್ಪಯ್ಯನು ವಾಜ್ಮೂಲ ಬರೆಯಿಸಿದನು. ಅದಾಗುತ್ತಲೆ ಸರಕಾರದ ಕಡೆಯ ವಕೀಲನು ಬಹು ಸಂಕ್ಷೇಪವಾಗಿ ಒಂದು ಭಾಷಣವನ್ನು ಮಾಡಿ, ಈ ಮೊಕದ್ದಮೆಯಲ್ಲಿ ತನ್ನ ಕಡೆಯಿಂದ ದೀರ್ಘ ಭಾಷಣ ಅವಶ್ಯವಿಲ್ಲ, ಹುಡುಗಿಯನ್ನು ಕೊಂಡುಹೋದ್ದನ್ನು ಸಾಕ್ಷಿಗಳು ಪ್ರತ್ಯಕ್ಷ ಕಂಡದ್ದಲ್ಲದೆ ಅವಳು ತಾನು ಹೋದ್ದು ನಿಜವೆಂದು ಹೇಳುವುದರಿಂದಲೂ ಪ್ರತಿವಾದಿಯೂ ಅಪರಾಧವನ್ನು ಒಪ್ಪುವುದರಿಂದಲೂ ಪ್ರಾಯ ತುಂಬದಿದ್ದ ಹುಡುಗಿಯ ಸಮ್ಮತ ಅಥವಾ ಅಸಮ್ಮತ ಈ ಮೊಕದ್ದಮೆಯಲ್ಲಿ ಅವಶ್ಯವೋ ಅನವಶ್ಯವೋ ಎಂಬುದನ್ನು ಮಾತ್ರ ಆಲೋಚಿಸತಕ್ಕ ವಿಷಯವಾಗಿದೆ ಎಂದು ನ್ಯಾಯಾಧಿಪತಿಗೂ ಎಸ್ಸೆಸ್ಸರಿಗೂ ಹೇಳಿದನು. ಆಗ ಅಣ್ಣಪ್ಪಯ್ಯನು ಎದ್ದುನಿಂತು, "ನಾನು ಇಪ್ಪತ್ತೊಂಬತ್ತು ವರುಷಗಳಿಂದ ವಕೀಲಿಯ ಉದ್ಯೋಗವನ್ನು ಮಾಡುತ್ತಿದ್ದೇನೆ. ಅನೇಕ ದೊಡ್ಡ ದೊಡ್ಡ ಮೊಕದ್ದಮೆಗಳಲ್ಲಿ ವ್ಯವಹರಿಸಿದ್ದೇನೆ. ಈಗ ನಡೆಯುವ ಮೊಕದ್ದಮೆಯಂತೂ ಬಹು ಅಲ್ಪಸ್ವಭಾವದ್ದು. ಪ್ರತಿವಾದಿಯು ಕೇವಲ ನಿರಪರಾಧಿಯಾಗಿರುತ್ತಾನೆ. ಅವನು ಈಶ್ವರ ಭಕ್ತಿಯಲ್ಲಿ ತತ್ಪರನಾದ ಸಂತನಾಗಿರುತ್ತಾನೆ. ಅವನು ಈ ಹುಡುಗಿಯನ್ನು ತೆಗೆದುಕೊಂಡು ಹೋದ್ದು ದಿಟವೇ. ಆದರೆ ಯಾವುದೊಂದೂ ದುಷ್ಕಾರ್ಯಕ್ಕೋಸ್ಕರವಲ್ಲ. ಸಂತಧರ್ಮೋಪದೇಶ-ಕ್ಕೋಸ್ಕರ ಮಾತ್ರವಾಗಿತ್ತು. ಈಕೆಯು ಬಹು ಎಳೇ ಪ್ರಾಯದವಳೇನೂ ಅಲ್ಲ. ಈಕೆಯೇ ಒಪ್ಪುವ ಪ್ರಕಾರ ಹದಿನೈದು ವರುಷ ಪ್ರಾಯವಿದ್ದವಳಾಗಿ, ಅವನು ಕರೆದಾಗ ತಾನೇ ಸ್ವಂತ ಮನಸ್ಸಿನಿಂದ ಅವನ ಸಂಗಡ ಹೋದಮೇಲೆ ಅವನ ಅಪರಾಧವೇನು? ಅವಳ ಮೇಲೇನಾದರೂ ಬಲಾತ್ಕಾರ ನಡೆಸಿದ್ದಿಲ್ಲವೆಂದು ಸರಕಾರದ ಕಡೆಯ ವಕೀಲರ ಸಾಕ್ಷಿಗಳೇ ಹೇಳುತ್ತಾರೆ. ಆದುದರಿಂದ ಇದರಲ್ಲಿ ದೀರ್ಘಾಲಾಪ ಅವಶ್ಯವಿಲ್ಲ. ಪ್ರತಿವಾದಿಯು ನಿರಪರಾಧಿ ಎಂಬುದಕ್ಕೆ ದೃಷ್ಟಾಂತವೇ ಬೇಡ. ಯಾವುದೊಂದು ಮೊಕದ್ದಮೆಯಲ್ಲ್ಯಾದರೂ ಅಪರಾಧವನ್ನು ದೃಷ್ಟಾಂತಪಡಿಸುವುದು ಫಿರ್ಯಾದಿ ಪಕ್ಷದಿಂದಾಗಿರುತ್ತೆ. ಈ ಮೊಕದ್ದಮೆಯಲ್ಲಿ ಹಾಗೆ ದೃಷ್ಟಾಂತ ಪಡಿಸೋಣಾಗಲಿಲ್ಲ; ಮಾತ್ರವಲ್ಲ, ಫಿರ್ಯಾದಿಪಕ್ಷದ ಸಾಕ್ಷಿಗಳಿಂದಲೇ ಪ್ರತಿವಾದಿಯು ನಿರಪರಾಧಿ ಎಂದು ದೃಷ್ಟಾಂತವಾಗಿದೆ. ಆದುದರಿಂದ ಪ್ರತಿವಾದಿಯನ್ನು ಬಿಟ್ಟುಬಿಡೋಣಾಗಬೇಕೆಂದೂ ಕಲ್ಯಾಣಿಯನ್ನು ಅವನ ಸ್ವಾಧೀನಕ್ಕೆ ಕೋಡೋಣಾಗಬೇಕೆಂದೂ ನಾನು ನ್ಯಾಯಾನುಸಾರವಾಗಿ ಬೇಡುತ್ತೇನೆ" ಎಂದು ಹೇಳಿ ಕುಳಿತುಕೊಂಡನು. ಆ ಬಳಿಕ ನ್ಯಾಯಾಧಿಪತಿಯು ಸಂಕ್ಷೇಪವಾಗಿ ಒಂದು ಭಾಷಣವನ್ನು ಮಾಡಿ, ಈ ಮೊಕದ್ದಮೆಯಲ್ಲಿ

ಹದಿನಾರು ವರುಷಕ್ಕಿಂತ ಕಡಿಮೆ ಪ್ರಾಯದವಳಾದ ಹುಡುಗಿಯ ಸಮ್ಮತ ಅಥವಾ ಅಸಮ್ಮತ ಕೇವಲ ಅನಾವಶ್ಯಕ ವಾಗಿರುವುದರಿಂದ ಆ ವಿಷಯದಲ್ಲಿ ಎಸ್ಸೆಸ್ಸರರು ಆಲೋಚಿಸಬೇಕಾದ್ದಿಲ್ಲ. ಪ್ರತಿವಾದಿಯು ಹುಡುಗಿಯನ್ನು ಕರೆದುಕೊಂಡು ಹೋದ್ದನ್ನು ಸಮ್ಮತಿಸುತ್ತಾನೆ. ಸಾಕ್ಷಿಗಾರರು ಅದಕ್ಕನುಸಾರವಾಗಿ ಸಾಕ್ಷಿ ಕೊಟ್ಟಿದ್ದಾರೆ. ಪ್ರತಿವಾದಿಯೂ ತಾನೂ ಗಂಡಹೆಂಡರಂತೆ ನಡೆದುಕೊಂಡಿರುವುದಾಗಿ ಕಲ್ಯಾಣಿಯೊಪ್ಪುತ್ತಾಳೆ. ಇದರಿಂದ ಪ್ರತಿವಾದಿಯ ಸಂಕಲ್ಪವೇನಿತ್ತೆಂಬುದು ಸ್ಪಷ್ಟವಾಗುತ್ತೆ. ಈ ಸಂಗತಿಗಳನ್ನಾಲೋಚಿಸಿ, ಪ್ರತಿವಾದಿಯು ಅಪರಾಧಿಯೋ ನಿರಪರಾಧಿಯೋ ಏನೆಂದು ಹೇಳಿರಿ ಎಂದು ಎಸ್ಸೆಸ್ಸರರಿಗೆ ಅಪ್ಪಣೆಕೊಟ್ಟನು. ಆಗಲವರು ಎದ್ದು ನಿಂತು, "ನಿಶ್ಚಯವಾಗಿ ಅಪರಾಧಿಯೇ" ಎಂದು ಹೇಳಿದರು. "ಹಾಗಾದರೆ, ನಾನು ಎಸ್ಸೆಸ್ಸರರ ಅಭಿಪ್ರಾಯವನ್ನು ಸ್ವೀಕರಿಸಿ, ಪ್ರತಿವಾದಿಗೆ ಹದಿನೆಂಟು ತಿಂಗಳು ವರೆಗೆ ಕಾಮಗಾರಿ ಸಮೇತ ಕಾರಾಗೃಹ ಬಂಧನ ಶಿಕ್ಷೆ ವಿಧಿಸಿದ್ದೇನೆ" ಎಂದು ನ್ಯಾಯಾಧಿಪತಿಯು ತೀರ್ಪು ಮಾಡಿದನು. ಆಗ ಪ್ರತಿವಾದಿಯ ಹತ್ತಿರ ನಿಂತ ಎರಡು ಮಂದಿ ಪೋಲೀಸ್ ಜವಾನರು ಅವನನ್ನು ಕೂಡಲೇ ಹಿಡಿದು ಕೈಗಳಿಗೆ ಕೋಳ ಹಾಕಿ ಕಾರಾಗೃಹಕ್ಕೆ ಕೊಂಡು ಹೋದರು. ದಾರಿ ನಡೆದು ಹೋಗುತ್ತಾ ಬಾಳಪ್ಪಯ್ಯನು "ವಿಠಲ! ವಿಠಲ! ವಿಠಲ!" ಎಂದು ನಾಮಸ್ಮರಣೆಯನ್ನು ಮಾಡಲು,–ಪೋಲೀಸ್ ಜವಾನರೆಂದರೆ ಸಾಕ್ಷಾತ್ ಯಮದೂತರಲ್ಲವೆ? – ಅವರಲ್ಲಿ ಒಬ್ಬನು,

"ಇಟ್ಟೆಲೋ ಪಾಣೇರೋ? ನಡಪ್! ಊರುಡುಪ್ಪಿ ಮುಂಡೆಳೆನ್ ಮಾತಹಾಳ್ ಮಳ್ಪೆರೆ ಎಡ್ಡೆ ಬಿರ್ಸೆ! ಭೀಮರಾಯೆರೆ ಮಗಳೆನ್ ಮೆಲ್ಲ ಲಕ್ಕಾವೆರತ್ತೇ ಬತ್ತಿನೀ? ಉಳೊ! ಮೊಕುಳೆಸೊರ್ಕೆ! ಜೈಲ್‌ಡ್ ಪೊಣ್ಣುಳು ತಿಕ್ಕಾಯೊ, ಔಳು ಮಣ್ಣ್ ತಿನೊಡು! ನಡಪ್! ಪದಿನೆಣ್ಮ್ ತಿಂಗೊಳುಮುಟ್ಟ ಇಟ್ಟೇಲನ್ ಮಾತ ಕಟ್ಟ್ದ್ ದೀಡ್ಡ್."

"ವಿಠಲವೋ, ಪಾಣೆಮಂಗಳೂರೋ? ನಡೆ! ಊರಲ್ಲಿದ್ದ ವಿಧವೆಯರನ್ನೆಲ್ಲ ಕೆಡಿಸುವುದಕ್ಕೆ ಒಳ್ಳೆ ಜಾಣ! ಭೀಮರಾಯರ ಮಗಳನ್ನು ಮೆಲ್ಲನೆ ಎಬ್ಬಿಸಲಿಕ್ಕಲ್ಲವೆ ಬಂದದ್ದು? ಅಯ್ಯೋ! ಇವರ ಸೊಕ್ಕೆ! ಜೈಲಿನಲ್ಲಿ ಹೆಂಗಸರು ಸಿಕ್ಕಲಾರರು. ಅಲ್ಲಿ ಮಣ್ಣು ತಿನ್ನಬೇಕು ನಡೆ! ಹದಿನೆಂಟು ತಿಂಗಳ ವರೆಗೆ ವಿಠಲನನ್ನೆಲ್ಲ ಕಟ್ಟಿಡು."

ಎಂದು ಹೇಳಲು, ಬಾಳಪ್ಪಯ್ಯನು "ಏನೆಲೋ? ಏನು ಹೇಳುತ್ತೀಯೋ? ನಿನ್ನ ಭಾಷೆ ನನಗೆ ತಿಳಿಯುವುದಿಲ್ಲ, ಏನಾಗಬೇಕೋ?" ಎಂದು ಕೇಳಿದನು. ಆಗಲವನು "ಏನೋ ಪೇನೋ? ನಡಪ್ಪ್" (ಏನೋ ಹೇನೋ? ನಡೆ) ಎಂದು ಹೇಳಿ, ಇಬ್ಬರೂ ಅವನನ್ನು ನಡೆಯಿಸಿ ತಂದು ಕಾರಾಗೃಹದಲ್ಲಿ ಒಪ್ಪಿಸಿದರು.

## ೪೬

ಬಾಳಪ್ಪಯ್ಯಗೆ ಕಾರಾಗೃಹ ಬಂಧನ ಪ್ರಾಪ್ತಿಯಾದ ವರ್ತಮಾನವು ಭೀಮರಾಯನಿಗೂ ಸಂತಮಂಡಲಿಯವರಿಗೂ ಅದೇ ದಿವಸ ಸಾಯಂಕಾಲ ಸಮಯದಲ್ಲಿ ಸಿಕ್ಕಲು, ಭೀಮರಾಯನ ಮನೆಯಲ್ಲಿ ದೊಡ್ಡ ತಾರುಮಾರುಂಟಾಯಿತು. ಬಾಳಪ್ಪಯ್ಯನ ಮಾತಾದರೂ ಹಾಗಿರಲಿ, ಅವನು ಹದಿನೆಂಟು ತಿಂಗಳಲ್ಲ ಹದಿನೆಂಟು ವರುಷಗಳ ವರೆಗಾದರೂ ಕಾಮಗಾರಿ ಮಾಡುವುದಕ್ಕೆ ಆತನಿಗೆ ಸಾಕಷ್ಟು ಶಕ್ತಿ ಇತ್ತು. ಅ ಮಾತು ದೊಡ್ಡದಲ್ಲ. ಅವನು ಕನ್ಯಾಪಹಾರ ಮಾಡಿದನೆಂದು ನ್ಯಾಯಸ್ಥಾನದಲ್ಲಿ ಸ್ಥಾಪನೆಯಾದ್ದೇ ಅಪರಿಮಿತ ಚಿಂತೆಗೂ ವ್ಯಸನಕ್ಕೂ ಕಾರಣವಾದ ವಿಷಯವಾಯಿತು. ಅದೇನೆಂದರೆ ಸಕಲ ಪ್ರಪಂಚವನ್ನು ತೊರೆದು, ಇಂದ್ರಿಯಭೋಗ ದೇಹಾಭಿಮಾನ ಮುಂತಾದ್ದನ್ನು ತ್ಯಜಿಸಿದ ಸಂತನು ಕನ್ಯಾಪಹಾರ ವ್ಯಭಿಚಾರ ಇವೆ ಮುಂತಾದ ದುಷ್ಕೃತ್ಯಗಳನ್ನು ಮಾಡಿದನೆಂಬ ದುಷ್ಕೀರ್ತಿಯು ಇಡೀ ಸಂತಮಂಡಲಿಯ ಪ್ರತಿಷ್ಠೆಗೆ ಹಾನಿ ತರಿಸುವುದಕ್ಕೆ ಸಾಕಾದ ವಿಷಯವಲ್ಲವೆ! ಆಹಾ! ಇನ್ನೇನು ಮಾಡೋಣವೆಂದು ಆಲೋಚಿಸುವಷ್ಟರಲ್ಲಿ ಅಣ್ಣಪ್ಪಯ್ಯನು ಅಲ್ಲಿಗೆ ಬಂದುಮುಟ್ಟಿ, ಅಧ್ಯಕ್ಷ ಮೊದಲಾದ ಸಂತರನ್ನೆಲ್ಲ ಆಲಂಗಿಸಿ ಕುಳಿತುಕೊಂಡನು.

ಭೀಮರಾಯ– "ರಾಯರೇ, ಕೆಲಸ ಕೈಗೂಡದೆ ಹೋಯಿತಷ್ಟೆ? ಮುಂದೇನುಪಾಯ?"

ಅಣ್ಣಪ್ಪಯ್ಯ– "ಮಾಡತಕ್ಕದ್ದೇನು? ಈಗಿನ ಕಾಲವೇ ಅಂಥಾದ್ದಷ್ಟೆ!"

"ಎಸ್ಸೆಸ್ಸರರಾದರೂ ನ್ಯಾಯಶಾಸ್ತ್ರವರಿಯದ ಹೊಗೆಸೊಪ್ಪು ಮಾರುವ ಬುದ್ಧಿಯಿಲ್ಲದ ಅಂಗಡಿಕಾರರಾದುದರಿಂದ ಅವರಭಿಪ್ರಾಯವಾದರೂ ತಪ್ಪೆಂದು ಹೇಳುವ ನ್ಯಾಯಾಧಿಪತಿಯು ಯೌವನಸ್ಥನಾದ ಬಾರಿಷ್ಟರನಂತೆ–"

"ಅದೀಗ ಕೇಡಿಗೆ ಕಾರಣ. ಮೊದಲಿನ ಕಾಲದಲ್ಲಾದರೋ, ಒಳ್ಳೇ ಪ್ರಾಯ ಹೋದ ಜಡ್ಜಿಗಳು ಬರುತ್ತಿದ್ದರು. ಕುಂಡ್ಲಿಟನ್ ಸಾಹೇಬರು, ಫಸ್‌ಫಸ್ ಸಾಹೇಬರು, ಫರ್‌ಶೇಟ ಸಾಹೇಬರು, ಮಂಡ್ರೋಳ ಸಾಹೇಬರು ಈ ಮುಂತಾದವರ ಕೀರ್ತಿಯನ್ನು ತಾವು ಕೇಳಲಿಲ್ಲವೇ? ಈಗ ಹಾಗಲ್ಲ, ಬಾರಿಷ್ಟರ್ ಎಂದೇನೋ ಒಂದು ಪರೀಕ್ಷೆಯಂತೆ, ಅದನ್ನು ಕೊಟ್ಟು ಪಾಸು,–ಗಳ್‌ಪಾಸು–ಹೊಂದುವುದಂತೆ. ಹಬ್‌ಸೀಯವರ ಅಂಗಿಯ ಹಾಗಿನ ಒಂದೊಂದು ಕೈಯೊಳಗೆ ಒಂದಾನೆ ನುಗ್ಗುವುದಕ್ಕೆ ಸಾಕಷ್ಟು ದೊಡ್ಡದಾದ ನಾಲ್ಕು ಕೈಗಳಿರುವ ಒಂದು ಅಂಗಿ ಹಾಕಿಕೊಂಡಕೂಡಲೇ ಜಡ್ಜಿಯಾಗುತ್ತಾನೆ! ಅವನಂತೇ ಯೋಗ್ಯರೆನ್ನಿಸುವ ವಕೀಲರು! ಒಬ್ಬನು ಕಾಸ್‌ಪಿಸ್ ಕಾಸ್‌ಪಿಸ್ ಎಂದು ನಾಲ್ಕು ಇಂಗ್ರೇಜಿ ಶಬ್ದಗಳನ್ನು ಕಲಿತು ಬೀ ಎಲ್ಲೋ, ಎಮ್ಮೆ ಎಲ್ಲೋ, ಕೋಣದ ಎಲ್ಲೋ, (ಎಲುಬೊ ಎಂಥಾ ಸುಡುಗಾಡೊ) ಒಂದು ಎಲ್ಲಿನ ಪರೀಕ್ಷೆಯಂತೆ, ಅದನ್ನು ಕೊಟ್ಟು ಆ ಗಳ್‌ಪಾಸು ಪಡೆದುಕೊಂಡು ಜಡ್ಜಿಯ ಅಂಗಿಯ ಹಾಗಿನದ್ದೇ ಒಂದು ಅಂಗಿ ಹಾಕಿಕೊಂಡು, ಠರ್‌ಪುರ್ ಮಾಡಿದಕೂಡಲೇ ವಕೀಲನಾಗುತ್ತಾನೆ. ಈಗೆಲ್ಲಿ ರಾಯರೇ, ಮೊದಲಿನ ದಿವಸಗಳು? ಪೂರ್ವಕಾಲದಲ್ಲಿ

ಸರ್ದಾರರಿಗೆ ಈ ಊರಿನ ಭಾಷೆಗಳೂ ಜನರ ಸ್ವಭಾವಗಳೂ ಗೊತ್ತಿರದೆ ಮುನ್‌ಶಿ ಹೇಳಿದ ಹಾಗೆ ಇದ್ದರು. ಸಣ್ಣದೊಂದು ವಿಷಯವನ್ನು ಹೇಳುತ್ತೇನೆ, ಕೇಳುತ್ತೀರಾ? ಕಂಡ್ಲೂರ ಬಸಪ್ಪ ಶೆಟ್ಟಿಯನ್ನು ಬಲ್ಲಿರಷ್ಟೆ? ತಾಟೋಟು ವಿದ್ಯೆಯಲ್ಲಿ ಎಲ್ಲರೂ ಆತನಿಗೆ ಕಪ್ಪ ಕೊಡುತ್ತಿದ್ದರು. ಅವನು ಏನೋ ಗ್ರಹಚಾರ ದೋಷದಿಂದ ಒಂದು ಮೊಕದ್ದಮೆಯಲ್ಲಿ ಸಿಕ್ಕಿಬಿದ್ದು, ಕಲೇಕಟರ್ ಸಾಹೇಬರು ಅವನಿಗೆ ಇನ್ನೂರು ರೂಪಾಯಿ ಅಪರಾಧ ಮಾಡಿದರು. ಅವನು ಆ ತೀರ್ಪಿನ ಮೇಲೆ ಅಪೀಲು ಮಾಡಿ ನೂರು ರೂಪಾಯಿ ಫೀಸು ನಿರ್ಣಯಿಸಿ ನನ್ನನ್ನು ವಕೀಲನಾಗಿ ನೇಮಿಸಿದನು. ಆಗ ಜಡ್ಜಿಯವರು ಫಸ್‌ಫಸ್ ಸಾಹೇಬರು. ಆ ಅಪೀಲು ವ್ಯವಹರಣೆಯಲ್ಲಿ ನಾನೊಂದು ಯುಕ್ತಿ ನಡೆಯಿಸಿದೆ, ಕೇಳಿರಿ. ನೆಟ್ಟಗೆ ಮುನ್‌ಶಿ ಮಾಧವರಾಯರಲ್ಲಿಗೆ ಹೋಗಿ, ಅವರಿಗೆ ಈ ಬಸಪ್ಪ ಶೆಟ್ಟಿಯ ಚರಿತ್ರವೆಲ್ಲವನ್ನು ಹೇಳಿ, ಅವನ ಇನ್ನೂರು ರೂಪಾಯಿಗೆ ನಾಮ ಹಾಕುವ ಉಪಾಯವನ್ನು ನಾವಿಬ್ಬರೂ ಕೂಡಿ ಆಲೋಚಿಸಿ, ಕೆಲಸ ಲೈಸ್ ಮಾಡಿದೆನು. ಹೇಗೆ ಕೇಳುತ್ತೀರಾ? ಅಪೀಲು ಹೇರಂಗಿನ ಸಮಯದಲ್ಲಿ ಜಡ್ಜಿ ಸಾಹೇಬರಿಗೆ ನಾಲ್ಕು ತಿರುಕುಮುರುಕು ಸವಾಲುಗಳನ್ನು ಹಚ್ಚಿಬಿಟ್ಟೆನು. ಸಾಹೇಬರು ಉತ್ತರವೇನು ಕೊಡುವುದೆಂದು ತಿಳಿಯದೆ ಕಣ್ಣು ಕಣ್ಣು ನೋಡತೊಡಗಿದರು. ಆಗ ಮುನ್‌ಶಿಯು ಇಂಗ್ರೇಜಿಯಿಂದ ಕೆಲವು ಮಾತುಗಳನ್ನು ಹೇಳಲು 'ಕಲೇಕಟರ ಸಾಹೇಬರ ತೀರ್ಪನ್ನು ದುರ್ಬಲಪಡಿಸಿದ್ದೇನೆ. ದಂಡದ ರೂಪಾಯಿಗಳನ್ನು ಅಪಿಲಾಂಟಿಗೆ ಈಗಲೇ ಇಲ್ಲಿಂದ ತಿರಿಗಿಕೊಡುವುದು' ಎಂದು ತೀರ್ಪು ಕೊಟ್ಟುಬಿಟ್ಟರು. ಆಹಾ! ಎಂತಹ ಧರ್ಮರಾಯ! ಒಡನೆ ಮುನ್‌ಶಿಯು ಬಸಪ್ಪ ಶೆಟ್ಟಿಯನ್ನು ತನ್ನ ಬೈಠಕಿನ ಕೋಣೆಗೆ ಕರೆಯಿಸಿ, 'ಎಲ್ಲಿರೈಯಾ?' ಎಂದು ಇನ್ನೂರು ರೂಪಾಯಿ ಬಂತೆಂದು ಒಂದು ಪಾರಿಖತ್ತು ರಶೀದನ್ನು ತೆಗೆದುಕೊಂಡಿಟ್ಟು, 'ರೂಪಾಯಿಗೆ ಸಾಯಂಕಾಲಕ್ಕೆ ನಮ್ಮ ಬಿಡಾರಕ್ಕೆ ಬನ್ನಿರಿ' ಎಂದು ಹೇಳಲು,– ಅವನೇನು ಸಾಮಾನ್ಯದ ಮೂರ್ತಿಯೋ? ಗರ್ಭದಿಂದ ಹೊರಟು ಬರುವಾಗಲೇ ಹಿಂದಕ್ಕೆ ನೋಡಿದವನಲ್ಲವೇ! ಪರಮ ತಾಯಿಗಂಡರಲ್ಲಿ ಶಿರೋಮಣಿ!–'ಅದೆಲ್ಲ ನನ್ನಿಂದಾಗದು. ರೂಪಾಯಿ ಈಗಲೇ ಕೊಟ್ಟುಬಿಡಬೇಕು. ಇಲ್ಲವಾದರೆ ದೊರೆಗಳವರ ಹತ್ತಿರ ಈಗಲೇ ದೂರು ಹೇಳುತ್ತೇನೆ' ಎಂದು ಹೇಳಿ, ಉತ್ತರ ಸಿಕ್ಕುವ ಮೊದಲೇ ಜಡ್ಜಿ ಸಾಹೇಬರ ಬಳಿಗೆ ಹೋಗಿ, ಕನ್ನಡ ಮಾತಿನಿಂದ ದೂರು ಹೇಳಿಯೇ ಬಿಟ್ಟನು. ಆದರೆ ಜಡ್ಜಿ ಸಾಹೇಬರಿಗೆ ಕನ್ನಡ ಭಾಷೆ ಎಲ್ಲಿನದು? 'ಪ್ಯೋ! ಮುನ್‌ಶಿ' ಎಂದು, ಡಲಾಯಿತನಿಗೆ ಕರೆದು ಹೇಳಲು, ಅವನು ಮುನ್‌ಶಿಯನ್ನು ಕರೆದು ತಂದನು. ಆಗ ಜಡ್ಜಿ ಸಾಹೇಬರು ಇಂಗ್ರೇಜಿಯಿಂದ 'ಈತನೇನು ಹೇಳುತ್ತಾನೆ? ಈತಗೆ ಈಗಲೇ ರೂಪಾಯಿ ಕೊಟ್ಟು ತೀರಿಸಬೇಕೆಂದು ನಿಮಗೆ ಹುಕುಮ್ ಕೊಟ್ಟಿರುತ್ತಾ ಏಕೆ ಹಾಗೆ ಮಾಡಲಿಲ್ಲ? ಈಗ ಈತ ಹೇಳುವುದೇನು?' ಎಂದು ಕೇಳಲು, 'ಸ್ವಾಮಿ, ಈತನು ಬಹಳ ದಿವಸದಿಂದ ಇಲ್ಲಿ ಕಾದುನಿಂತು ದಣಿದಿದ್ದಾನಂತೆ. ವಕೀಲನಿಗೆ ನೂರು ರೂಪಾಯಿ ಫೀಸು ಕೊಟ್ಟಿದ್ದಾನಂತೆ. ಆ ನಷ್ಟ ಪರಿಹಾರಾರ್ಥವಾಗಿ ಅವನಿಗೆ ಹೆಚ್ಚಿಗೆ ಇನ್ನೂರು ರೂಪಾಯಿ ಕೊಡಬೇಕಂತೆ' ಎಂದು ಇಂಗ್ರೇಜಿಯಿಂದ ಹೇಳಲು,

ಜಡ್ಜಿ ಸಾಹೇಬರು ಕಿಡಿಕಿಡಿ ಸಿಟ್ಟನಿಂದ 'ದೂಡು! ದೂಡು! ಹೊಳೆ ಪಾರುಮಾಡಿಸಿ ಬಾ!' ಎಂದು ಇಂಗ್ರೇಜಿಯಿಂದ ಹೇಳಿದ್ದನ್ನು ಮುನ್‌ಶಿಯು ದೇಶಭಾಷೆಯಿಂದ ಡಲಾಯಿತನಿಗೆ ವಿವರಿಸಿ ಹೇಳಲು, ಡಲಾಯಿತನು ಅವನನ್ನು ದೂಡುತ್ತಾ ಕೊಂಡುಹೋಗಿ ಹೊಳೆ ಪಾರುಮಾಡಿಸಿ, ಇನ್ನು ಮುಂದೆ ಅವನಿಗೆ ಹೊಳೆಯ ಈಚೆಗೆ ಬಿಡಬಾರದೆಂದು ಕಡವಿನವನಿಗೆ ಎಚ್ಚರಿಸಿ, ತಿರಿಗಿಬಂದು, ನಡೆಯಿಸಿದ ಕ್ರಮವನ್ನು ಜಡ್ಜಿ ಸಾಹೇಬರಿಗೆ ಅರಿಕೆ ಮಾಡಲು, ಅವರು 'ರೈಟ್' ಅಂದರು. ಮಾಧವರಾಯರು ನನ್ನನ್ನು ಮತ್ತು ಡಲಾಯಿತನನ್ನು ಕರೆಯಿಸಿಕೊಂಡು, ನನಗೆ ತೊಂಭತ್ತು, ಡಲಾಯಿತನಿಗೆ ಹತ್ತು ರೂಪಾಯಿ ಕೊಟ್ಟು, ಖೋ! ಎಂದು ನಗಾಡಿದರು. ಅಂತಹ ದಿವಸಗಳೆಲ್ಲ ಕಳೆದುಹೋದವು. ಅಂತಹ ಜಡ್ಜಿಯವರೂ ಮುನ್‌ಶಿಯವರೂ ಹೋದರು. ಮಾಡತಕ್ಕದ್ದೇನು!"

"ಹಾಗಾದರೆ ಇನ್ನು ಇವರಲ್ಲಿಂದ ನಿವೃತ್ತಿ ಹೊಂದುವ ಬಗೆ ಹೇಗೆ? ಇಲ್ಲಿಯ ನ್ಯಾಯಸ್ಥಾನದ ತೀರ್ಪು ದುರ್ಬಲಪಡಿಸುವುದಕ್ಕೆ ಬೇರೆ ಕೋರ್ಟು ಇಲ್ಲವೇ?"

"ಇದೆ, 'ಹಾಯಿಕೋರ್ಟು ಹಾಫ್ ಜುಡಿಖೇಚರ್' ಎಂಬ ಒಂದು ಕೋರ್ಟು ಇದೆ."

"ಅದು ಎಂತಹ ಕೋರ್ಟು? ಎಲ್ಲಿದೆ?"

"ಅದನ್ನೆಲ್ಲ ವಿವರಿಸಿ ಹೇಳುವುದಕ್ಕೆ ಅರ್ಧತಾಸು ಬೇಕು. ಆದರೂ ಸಂಕ್ಷೇಪವಾಗಿ ಹೇಳುತ್ತೇನೆ. ಹಾಯಿಕೋರ್ಟು ಅಂದರೆ, ಅಲ್ಲಿಯ ನ್ಯಾಯಾಧಿಪತಿಗಳು ಮೊಕದ್ದಮೆಗಳನ್ನು ವಿಚಾರಿಸಿ ತೀರ್ಪು ಕೊಡುವುದು ಸಮುದ್ರದಲ್ಲಿ ಒಂದು ಹಡಗದ ಮೇಲಂತೆ. ಆ ಹಡಗಿಗೆ ವಿಚಿತ್ರವಾದ ಪಂಚರಂಗಿನ ಒಂದು ಹಾಯಿ ಇದೆಯಂತೆ. ಆದುದರಿಂದಲೇ ಆ ಕೋರ್ಟಿಗೆ ಹಾಯಿಕೋರ್ಟೆನ್ನುತ್ತಾರೆ. ಹಾಫ್ ಜುಡಿಖೇಚರ್ ಎಂದರೆ, ರಾಯರೇ, ಮೊದಲು ತಂಬಾಕು ಅಮಾನಿ ಎಂಬುದಿತ್ತೆಂಬುದನ್ನು ಬಲ್ಲಿರಷ್ಟೆ? ಈಗ ಆ ಅಮಾನಿಯನ್ನು ತೆಗೆದುಹಾಕಿ, ಸೀಮೆಗಳಲ್ಲಿ ಬೆಳೆಯುವ ಹೊಗೆಸೊಪ್ಪನ್ನು ಕೋಟಗಳಲ್ಲಿ ದಾಸ್ತಾನು ಮಾಡುವುದರ ಬದಲಿಗೆ ಆ ಹಡಗದ ಅರ್ಧಾಂಶದಲ್ಲಿ ದಾಸ್ತಾನುಮಾಡಿ ವಿಲಾಯತಿಗೆ ಕಳುಹಿಸುತ್ತಾರಂತೆ. ಆದರೆ ನಟ್ಟ ಹೊಗೆಸೊಪ್ಪಲ್ಲ. ಸರ್ ಜೂಡಿ ಹೊಗೆಸೊಪ್ಪು ಮಾತ್ರವೇ. ಹೀಗಾಗಿ ಈಗ ಸರ್ ಜೂಡಿ ಹೊಗೆಸೊಪ್ಪೇ ನಮಗೆ ಸಿಕ್ಕುವುದಿಲ್ಲ. ಅದಂತಿರಲಿ, ಸರ್ ಜೂಡಿ ಹೊಗೆಸೊಪ್ಪು ಆ ಕೋರ್ಟೆಂಬ ಹಡಗದಲ್ಲಿ ಅರೆವಾಸಿ ಸ್ಥಳದಲ್ಲಿ ದಾಸ್ತಾನು ಮಾಡುವುದರಿಂದ, ಹಾಫ್ ಜುಡಿಖೇಚರ್ ಎಂಬ ಹೆಸರು ಕೊಟ್ಟಿದ್ದಾರಂತೆ. ಹಾಫ್ ಅಂದರೆ ಅರ್ಧ. ಆ ಕೋರ್ಟಿನಲ್ಲಿ ಐದು ಮಂದಿ ನ್ಯಾಯಾಧಿಪತಿಗಳಿದ್ದಾರಂತೆ. ಅದರ ಪ್ರಧಾನ ನ್ಯಾಯಾಧಿಪತಿಗೆ ಸರ್ ಜೂಡಿ ಎಂಬ ಶಬ್ದದಿಂದ ಸರ್ ಎಂಬ ಎರಡಕ್ಷರಗಳನ್ನು ತೆಗೆದು, ಅವನ ಹೆಸರಿನ ಹಿಂದಕಡೆಗೆ ಸೇರಿಸಿ, ಆ ಅಕ್ಷರಗಳ ಬದಲಿಗೆ ಸರ್ದಾರ ಸಾಹೇಬರ ಗುಣನಾಮವೆಂದು ತೋರುವ ಖೇಚರ ಎಂಬ ಅಕ್ಷರಗಳನ್ನು ಜೂಡಿ ಎಂಬ ಶಬ್ದದ ಮುಂದುಗಡೆಯಲ್ಲಿ ಸೇರಿಸಿದ್ದಾರಂತೆ. ಏನೇನೆಲ್ಲ ಕವನ! ಒಟ್ಟಿನಲ್ಲಿ ಸರ್ ಜೂಡಿ ತಂಬಾಕು ಅಮಾನಿ ಮತ್ತು ನ್ಯಾಯವಿಚಾರಣೆ ಸಹ ನಡೆಯುವ ಸರ್ ಎಂಬ ಅಂಕಿತ ನಾಮವಿರುವ

ಖೇಚರ ಕುಲದಲ್ಲಿ ಶ್ರೇಷ್ಠರಾದ ನ್ಯಾಯಾಧಿಪತಿಗಳಿರುವ ವಿಚಿತ್ರವಾದ ದೊಡ್ಡ ಹಾಯಿಯಿಂದಲಂಕೃತವಾದ ಕೋರ್ಟು ಎಂಬರ್ಥ, ಗೊತ್ತಾಯಿತೇ? ಈ ಕೋರ್ಟು ಮದ್ರಾಸಿನಲ್ಲಿದೆ. ಆದರೆ ಅಲ್ಲಿ ಎಲ್ಲಾ ಇಂಗ್ರೇಜಿ ವ್ಯವಹರಣೆ ತಾನೇ, ಅಪೀಲು ಮಾಡಿದರೆ ಸರ್ವಥಾ ಗುಣಸಿಕ್ಕದು. ಎಲ್ಲಿ ಹೋದರೂ ಇಂಗ್ರೇಜಿಯಾದ ಮೇಲೆ ಪರಿಣಾಮವಿದೆಯೇ? ನಾನು ಮೊದಲು ಅನೇಕ ಅಪೀಲುಗಳನ್ನು ಮಾಡಿಸಿದ್ದೇನೆ. ಒಂದರಲ್ಲ್ಯಾದರೂ ಗುಣಸಿಕ್ಕಲಿಲ್ಲ. ಅದೆಲ್ಲಾ 'ಅಂಥಾದರಬಾರು'. ನಮಗೇಕೆ ರಾಯರೇ?"

ಎಂದು ಭೀಮರಾಯನಿಗೂ ಸಂತಮಂಡಲಿಯವರಿಗೂ ಆಲೋಚನೆ ಹೇಳಲು, ಅವರೆಲ್ಲರೂ ಅದಕ್ಕೆ ಸಮ್ಮತಪಟ್ಟು ವಿಠೋಬನ ಮನಸ್ಸಿನಲ್ಲಿದ್ದ ಹಾಗಾಗಲಿ ಎಂದು ಹೇಳಿ ಸುಮ್ಮಗಾದರು. ಅಣ್ಣಪ್ಪಯ್ಯನು ಸಂತರು ಮುಂತಾದವರನ್ನು ನಮಸ್ಕರಿಸಿ, ತನ್ನ ಮನೆಗೆ ಹೋದನು.

## ೪೭

ಬಾಳಪ್ಪಯ್ಯನನ್ನು ಕಾರಾಗೃಹ ಬಂಧನದಿಂದ ಬಿಡಿಸುವುದಕ್ಕೆ ಯಾವ ಉಪಾಯಗಳನ್ನಾಲೋಚಿಸಿದರೂ ನಿಷ್ಫಲವೆಂದು ಕಂಡಿತು. ಸಂತಮಂಡಲಿಯವರು ಕಾಲಕ್ರಮದಲ್ಲಿ ಆ ವಿಷಯವನ್ನೇ ಮರೆತರು. ಇಂದಿರಾಬಾಯಿಯ ಮನಸ್ಸನ್ನು ತಿರುಗಿಸುವುದಕ್ಕೆ ಪಾರಾಯಣ, ಭಾಷಣ, ನಿರೂಪಣಗಳಿಂದ ಸಂತರು ಮಾಡಿದ ಪ್ರಯತ್ನಗಳೂ ತಾಯಿತಂದೆಗಳು ಮಾಡಿದ ಹಲವು ಉಪಾಯಗಳೂ ನಿಸ್ಸಾರ್ಥಕವಾಗಿ ಹೋದವು. ಇನ್ನೇನು ಮಾಡುವುದೆಂದು ಆಲೋಚಿಸುತ್ತಾ ಕೆಲವು ದಿವಸಗಳು ಹೋದವು. ಆ ಮೇಲೆ ಒಂದಾನೊಂದು ದಿವಸ ಭೀಮರಾಯನೂ ಅಂಬಾಬಾಯಿಯೂ ಅಧ್ಯಕ್ಷರೊಡನೆ ಪುನಃ ಅದೇ ವಿಷಯವನ್ನು ಪ್ರಸ್ತಾಪಿಸಿ, ಬಹು ವಿಧದಿಂದ ಹೇಳಿಕೊಳ್ಳಲು, ಅಧ್ಯಕ್ಷರು ಐದು ನಿಮಿಷಪರ್ಯಂತರ ಆಲೋಚಿಸಿ, "ರಾಯರೇ, ನಾನೊಂದು ಚಮತ್ಕಾರಿಕ ಉಪಾಯವನ್ನಾಲೋಚಿಸಿದ್ದೇನೆ. ಅದನ್ನು ನಡೆಯಿಸಿದರೆ ಕಾರ್ಯ ಸಿದ್ಧಿಯಾಗದೆ ಹೋಗದು. ಅದ್ಯಾವುದೆಂದು ಈಗ ಹೇಳಲಾರೆನು. ಈ ಹೊತ್ತೆ ಆ ಉಪಾಯವನ್ನು ನಡೆಯಿಸಿ, ನಾಳೆ ನೀವು ಅದರ ಫಲವನ್ನು ತಿಳಿಯಲು, ನಿಮಗಪರಿಮಿತವಾದ ಸಂತೋಷವೂ ವಿನೋದವೂ ಉಂಟಾಗದಿರದು" ಎಂದುತ್ತರ ಕೊಟ್ಟರು. ಅದನ್ನು ಕೇಳಿ ಅವರಿಬ್ಬರೂ ತುಂಬಾ ಹರುಷಪಟ್ಟರು. ಆದರೆ ಆ ಚಮತ್ಕಾರಿಕ ಉಪಾಯವೆಂಬುದು ಯಾವುದೆಂದು ಗೊತ್ತಾಗದುದರಿಂದ ಅದನ್ನು ಕುರಿತು ಆ ದಂಪತಿಗಳು ಬಹಳವಾಗಿ ಆಲೋಚಿಸಿದರೂ ಗೊತ್ತುಹರಿಯದೆ ಕಡೆಗೆ ಅಂಬಾಬಾಯಿಯು ಗಂಡನೊಡನೆ, 'ನಾವೇಕೆ ಸುಮ್ಮನೆ ಚಿಂತಿಸಿ ಚಿಂತಿಸಿ ಆಯಾಸಪಡುವುದು? ಹೇಗೂ ನಾಳಿಗೆ ಗೊತ್ತಾಗುವುದಷ್ಟೆ? ಅಪ್ಪ ತಿಂದರೆ ಸಾಲದೇ ಹೊಂಡಗಳ ಲೆಕ್ಕವೇತಕ್ಕೆ? ಅವರಪ್ಪಣೆಕೊಟ್ಟಂತೆ ಕಾರ್ಯಸಿದ್ಧಿಯಾದರೆ ನಾಳೆ ನಮ್ಮ ಸಂತೋಷಕ್ಕೆ ಮಿತಿ ಇರುವುದೇ?' ಎಂದು ಹೇಳಲು ಇಬ್ಬರೂ ನಿಶ್ಚಿಂತರಾದರು.

ಪಾರಾಯಣ ಮುಂತಾದ್ದು ಯಾವಾಗಲೂ ಹಗಲು ಸಮಯದಲ್ಲಿ ಮಾತ್ರವೇ ನಡೆಯುತ್ತಿತ್ತು. ಆದರೆ ಸಂತಶಿರೋಮಣಿಯು ಚಮತ್ಕಾರಿಕ ಉಪಾಯವನ್ನು ರಾತ್ರಿಯಲ್ಲಿ ನಡೆಯಿಸಿದರೆ, ಬೇಗನೆ ಫಲಪ್ರಾಪ್ತಿಯಾಗುವುದೆಂಬ ಕಾರಣದಿಂದಲೋ ಏನೋ, ಆ ದಿವಸ ಮಾತ್ರ ಪಾರಾಯಣ ಮುಂತಾದ್ದು ರಾತ್ರಿ ಹತ್ತುಗಂಟೆಯ ಬಳಿ ಪ್ರಾರಂಭವಾಯಿತು. ಇಂದಿರಾಬಾಯಿಯು ಇದರಲ್ಲೇನಾದರೂ ಕೌಶಲವಿರಬೇಕೆಂದೆಣಿಸಿ ತಾಯಿಯನ್ನು ಕರೆದು, ಗುಟ್ಟಿನಲ್ಲಿ "ಇದೇನವ್ವಾ? ಇಷ್ಟು ದಿವಸ ಇದೆಲ್ಲ ಹಗಲಿಗಿತ್ತು. ಈ ಹೊತ್ತೇನು ರಾತ್ರಿ ಕಾಲದಲ್ಲಿ ಮಾಡಿಸುತ್ತೀ?" ಎಂದು ಕೇಳಲು ಆಕೆಯು "ಅದು ನೀನಗೇತಕವ್ವಾ? ಹಗಲಿನಲ್ಲ್ಯಾದರೇನು? ಇರುಳಿನಲ್ಲ್ಯಾದರೇನು? ಈಶ್ವರ ಭಕ್ತಿಯ ಕಾರ್ಯವನ್ನು ಯಾವಾಗಲಾದರೂ ಮಾಡಬಹುದಲ್ಲವೇ?" ಎಂದುತ್ತರ ಕೊಡಲು, ಇಂದಿರಾಬಾಯಿಯು ನಿಶ್ಚಯವಾಗಿ, ಇದರಲ್ಲೇನೋ ಕೌಶಲವಿದೆ, ಏನೇ ಆಗಲಿ ನೋಡಿಕೊಳ್ಳುವೆನೆಂದು ಮನಸ್ಸಿನಲ್ಲೇ ಆಲೋಚಿಸಿ ಸುಮ್ಮಗಾದಳು. ಅಧ್ಯಕ್ಷರು ಪಾರಾಯಣವನ್ನು ಪ್ರಾರಂಭಿಸಿ ಯಮುನಾ ನದಿಯ ತೀರದಲ್ಲಿ ನಡೆದ ಕೃಷ್ಣ–ಸತ್ಯಭಾಮೆಯರ ಲೀಲೆಯನ್ನು ಒಂದು ಗಂಟೆಯ ವರೆಗೆ ಅಭಿನಯಾಲಂಕಾರದೊಡನೆ ವಿವರಿಸಿದರು. ಭೀಮರಾಯನಿಗೆ ಇತ್ತಲಾಗಿ ಮೂರುನಾಲ್ಕು ದಿವಸಗಳಿಂದ ಪಿತ್ತದಿಂದಲೇನೊ ಸ್ವಲ್ಪ ತಲೆಸಿಡಿತವಿದ್ದುದರಿಂದ ಆ ರಾತ್ರಿಯ ನಿತ್ಯನಿಯಮದ ಪ್ರಸಂಗವನ್ನು ಬೇಗನೆ ಹತ್ತುಗಂಟೆಯೊಳಗೆ ಹೇಳಿತೀರಿಸಿ, ಪಾರಾಯಣ ನಡೆಯುವಲ್ಲಿ ಒಂದು ಗಂಟೆ ವರೆಗೆ ಮಾತ್ರ ಕುಳಿತು, ಇನ್ನು ಹೆಚ್ಚು ರಾತ್ರಿ ವರೆಗೆ ನಿದ್ದೆಗೆಡುವುದರಿಂದ ಹೆಚ್ಚಿನ ಉಪದ್ರವವೇನಾದರೂ ಸಂಭವಿಸುವುದೆಂದು ವಿಚಾರಿಸಿ, ಹನ್ನೊಂದು ಘಂಟೆಯಾಗುತ್ತಲೇ ತನ್ನ ವಿದ್ಯಮಾನವನ್ನು ಅಧ್ಯಕ್ಷರಿಗರಿಕೆಮಾಡಿ, ಪವಡಿಸುವುದಕ್ಕೆ ಹೋದನು. ನಿರೂಪಣ ಪ್ರಾರಂಭಿಸಿ, ಮಧ್ಯರಾತ್ರಿ ಯಾಗುವಾಗ ಮುಗಿಯಿತು. ಸಂತ ಶಿಖಾಮಣಿಯು ಎದ್ದು ತನ್ನ ಸ್ಥಾನಕ್ಕೆ ಹೋಗುತ್ತಲೆ ಎಲ್ಲರೂ ಎದ್ದು ಮಲಗಿಕೊಳ್ಳುವುದಕ್ಕೆ ಹೋದರು. ಇಂದಿರಾಬಾಯಿಯು ತನ್ನ ಕೋಣೆಯ ಬಾಗಲುಗಳನ್ನು ಮುಚ್ಚಿ ಅಗಳಿ ಹಾಕಿ ಮಲಗಿಕೊಂಡರೂ ಆ ರಾತ್ರಿಯ ವಿಶೇಷವಾದ ಕ್ರಮ ಮತ್ತು ಭಾಷಣ ನಿರೂಪಣಗಳಲ್ಲಿ ಹೇಳಿದ ಅವಳ ಮನಸ್ಸಿಗೆ ಬಾರದ ಕೆಲವು ಸಂಗತಿಗಳನ್ನು ಕುರಿತು ಆಲೋಚಿಸುತ್ತಾ ಇದ್ದುದರಿಂದ ಅವಳಿಗೆ ನಿದ್ರೆ ಬರಲಿಲ್ಲ. ಮಲಗಿಕೊಂಡ ಒಂದು ಗಳಿಗೆಯ ಬಳಿಕ ಅವಳ ಕೋಣೆಯ ಪಶ್ಚಿಮ ದಿಕ್ಕಿನ ಕಿಟಕಿಯ ಬಾಗಲುಗಳು ಹೊರಗಿನಿಂದ ತೆಗೆಯಲ್ಪಡುವುದನ್ನು ಕಂಡು, ಒಮ್ಮೆ ತುಸ ಭಯಪಟ್ಟರೂ ಪುನಃ ಧೈರ್ಯ ತಾಳಿ, "ಅದ್ಯಾರು?" ಎಂದು ಕೇಳಲು, "ನಾನು ರಂಗಪ್ಪ, ಅಧ್ಯಕ್ಷ, ಬೆದರಬೇಡ, ನಿನ್ನೊಡನೆ ಕೆಲವು ಸಂಗತಿಗಳನ್ನು ಕುರಿತು ಮಾತನಾಡುವ ಅವಶ್ಯವಿದೆ– ವಿಠಲನಾಣೆ, ಯಾವುದೊಂದೂ ದುಷ್ಕಾರ್ಯವನ್ನಾಲೋಚಿಸಿ ಬಂದವನಲ್ಲ. ಐದು ನಿಮಿಷಗಳ ವರೆಗೆ ಮಾತನಾಡುವುದಕ್ಕೆ ಸಮಯ ಕೊಡುವಿಯಾ?"

"ಅಪ್ಪಯ್ಯನ ಹತ್ತಿರ ಮಾತನಾಡಿದರೆ ಉತ್ತಮವಲ್ಲವೆ? ನನ್ನ ಹತ್ತಿರವೇಕೆ?"

"ಅದು ನಿನ್ನ ಹತ್ತಿರವೇ ಮಾತನಾಡಬೇಕಾದ ಕಾರ್ಯ."

“ನಾಳೆ ಹಗಲು ಸಮಯದಲ್ಲಿ ಮಾತನಾಡಿದರಾಗದೆ?”

“ಆಗದು–ಅದ್ಯಾರಿಗೂ ತಿಳಿಯಬಾರದು. ನೀನಂಜುವುದೇಕೆ? ನನ್ನಲ್ಲಿ ಯಾವ ದೋಷಾಲೋಚನೆಯೂ ಇಲ್ಲ. ಹಾಗೇನಾದರೂ ನಿನಗೆ ಕಂಡುಬಂದರೆ ನಿನ್ನ ಮನಸ್ಸಿಗೆ ಬಂದಹಾಗೆ ಅದರ ನಿವೃತ್ತಿ ಮಾಡಬಹುದಷ್ಟೆ?”

ಇಂದಿರಾಬಾಯಿಯು ಈ ಗಂಡದಿಂದ ಪಾರಾಗಬೇಕಾದರೆ ಉಪಾಯವೇನು? ಗುಲ್ಲೆಬ್ಬಿಸಿದರೆ ಊರಲ್ಲೆಲ್ಲ ಸುದ್ದಿಯಾಗುವುದೇ ಹೊರತು ತನಗೆ ಪ್ರಯೋಜನವೇನು? ಈ ತರದ ಉಪದ್ರವವು ಮುಂದಾದರೂ ಸಂಭವಿಸಬಹುದು. ನಿವೃತ್ತಿಯ ಮಾರ್ಗವನ್ನು ಈಗಲೇ ನೋಡುವುದುತ್ತಮವೆಂದಾಲೋಚಿಸಿ ಮಾಡಬೇಕಾದ ಉಪಾಯವೇನೆಂದು ಮನಸ್ಸಿನಲ್ಲಿ ನಿಶ್ಚಯಿಸಿ, ಉತ್ತರ ಕೊಡುವುದಕ್ಕೆ ಬಾಯಿ ತೆರೆಯುವಷ್ಟರಲ್ಲಿ,

“ಇದೇನಿಷ್ಟು ನಿರ್ದಯ? ಒಂದುತ್ತರವಿಲ್ಲವೆ? ಭಯವೇನು?”

“ಭಯವೇನಿಲ್ಲ ಸ್ವಾಮಿ, ಕೋಣೆಯ ಬಾಗಲು ತೆರೆಯಬೇಕೆ?”

(ಉಲ್ಲಾಸದಿಂದ) “ಓಹೋ! ಯೋಗ್ಯವೆಂದು ನೀನಾಲೋಚಿಸುವುದಾದರೆ ತೆರೆ–ಜೈವಿಠಲ!”

ಇಂದಿರಾಬಾಯಿಯು ಮೆಲ್ಲಗೆ ಬಾಗಲು ತೆರೆದಳು. ಸಂತ ಶಿಖಾಮಣಿಯು ಕೋಣೆಯೊಳಗೆ ಬಂದು, “ಓಹೋ! ನಿನ್ನ ಭಕ್ತಿಗೆ ಮೆಚ್ಚಿ ಪ್ರಸನ್ನನಾದೆ”ನೆಂದು ಹೇಳಿ ನಗುತ್ತಾ ಅವಳ ಹತ್ತಿರಕ್ಕೆ ಹೋದರು. ಈ ಕೃತ್ಯಗಳನ್ನು ಕುರಿತು ಪ್ರಪಂಚಾಸಕ್ತರಾದ ನಾವು ಯಾವ ವಿಧದಿಂದಲೂ ಆಲೋಚಿಸಬಹುದಾದರೂ ದೇಹಾಭಿಮಾನವನ್ನು ತೊರೆದು ಜಿತೇಂದ್ರಿಯರಾದ ಸಂತ ಶಿರೋಮಣಿಯು ದುಷ್ಟವಿಚಾರದಿಂದಲೇ ಹೀಗೆ ಪ್ರವರ್ತಿಸಿದ್ದರೆಂದು ಹೇಳಬೇಕಾದರೆ ಹೆಚ್ಚಿನ ದೃಷ್ಟಾಂತಗಳು ಬೇಕು. ಆದುದರಿಂದ ಹೀಗೆ ಪ್ರವರ್ತಿಸಿದ್ದು ನಿಷ್ಕಲಂಕ ಮನಸ್ಸಿನಿಂದಲೇ ಆಗಿರಬಹುದು. ಅದು ಹೇಗಾದರೂ ಅವರು ಮೈಗೆ ಮೈ ಮುಟ್ಟುವಷ್ಟರ ವರೆಗೆ ಸಮೀಪಿಸಲು, ಇಂದಿರಾಬಾಯಿಯು ಹಿಂದು ಹಿಂದಕ್ಕೆ ಸೇರುತ್ತಾ “ಸ್ವಾಮಿ, ದಯಮಾಡಿ ಕುಳ್ಳಿರಿ. ಕಕ್ಕುಲತೆ ಪಡುವುದೇಕೆ? ಇಷ್ಟು ದಿವಸಗಳ ವರೆಗೆ ನಾನು ತಮ್ಮ ಮಾತುಗಳಿಗೆ ಕಿವಿಕೊಡದೆ ಇದ್ದ ನನ್ನ ಅಪರಾಧವನ್ನು ಕ್ಷಮಿಸಬೇಕು. ಸ್ವಾಮಿ, ತಮ್ಮ ಹತ್ತಿರ ಒಂದರೆಡು ಗಳಿಗೆ ಪರ್ಯಂತರ ಮಾತನಾಡಬೇಕೆಂದು ಮನಸ್ಸಿದೆ. ಆದರೆ ಮಾತನಾಡುವುದಕ್ಕೆ ಪ್ರಾರಂಭಿಸಿದ ಮೇಲೆ ಮಧ್ಯದಲ್ಲಿ ನಿಲ್ಲುಸುವುದು ಯುಕ್ತವಲ್ಲವಾದುದರಿಂದ ನಾನು ಮೂರು ನಿಮಿಷಗಳೊಳಗೆ ಹೊರಗೆ ಹೋಗಿಬರುತ್ತೇನೆ; ಕುಳ್ಳಿರಿ” ಎಂದು ನಗೆಮೊಗದೊಡನೆ ಹೇಳಿ ಕೋಣೆಯ ಮೂಲೆಯಲ್ಲಿದ್ದ ನೀರಿನ ಪಾತ್ರವನ್ನು ತೆಗೆದುಕೊಂಡು ಹೊರಗೆ ಹೊರಟು ಬಾಗಿಲುಗಳನ್ನೆಳೆದುಕೊಂಡು ಕೊಂಡಿಯಲ್ಲಿ ಸಂಕೋಲೆಯನ್ನು ಸಿಕ್ಕಿಸಿ, ಕತ್ತಲೆಯಲ್ಲೊಬ್ಬಳೇ ಅಂಗಳಕ್ಕಿಳಿದು ಆಕಾಶವನ್ನು ನೋಡಿ ಮಧ್ಯರಾತ್ರಿಯ ಸಮಯವೆಂದು ತಿಳಿದು, ‘ಆಹಾ! ದೇವರೇ! ನನ್ನ ದುರ್ಗತಿಯೇ! ಏನು ಮಾಡಲಿ! ಎಲ್ಲಿಗೆ ಹೋಗಲಿ!’ ಎಂದು ದುಃಖಿಸಿ ಎಲ್ಲಿಗೂ ಹೋಗಲಿಕ್ಕೂ ಉಪಾಯ ಕಾಣದೆ ಬಚ್ಚಲು ಕೊಟ್ಟಿಗೆಗೆ ಹೋಗಿ, ಅಲ್ಲಿರುವ ಒಂದು

ತಿಣ್ಣೆಯ ಮೇಲೆ ಕುಳಿತುಕೊಂಡು ಕಂಬನಿ ಇಕ್ಕುತ್ತಾ ಅತ್ಯಾಯಾಸದಿಂದ ರಾತ್ರಿಯನ್ನು ಕಳೆದು, ಬೆಳಗು ಬೆಳಗಾಗುತ್ತಿರುವಾಗ ಅಲ್ಲಿಂದೆದ್ದು, ನೆಟ್ಟಗೆ ಅಮೃತರಾಯನಲ್ಲಿಗೆ ಹೋಗಿ ಬಚ್ಚಲಿನ ಹತ್ತಿರವಿದ್ದ ಕಟ್ಟಿಗೆಯ ಕೋಣೆಯಲ್ಲಿ ಹೊಕ್ಕು, ಉಟ್ಟ ಸೀರೆಯ ಸೆರಗಿನಿಂದ ತಲೆಯನ್ನು ಮುಖವನ್ನು ಮುಚ್ಚಿಕೊಂಡು ಕುಳಿತುಕೊಂಡಳು.

ಇತ್ತಲಾಗಿ ಸಂತಶಿರೋಮಣಿಯು ಇಡೀ ರಾತ್ರಿ ನಿದ್ರೆ ಇಲ್ಲದೆ ಕೋಣೆಯಲ್ಲಿ ಯಾವ ರೀತಿಯಲ್ಲಿ ಕಾಲಕ್ಷೇಪ ಮಾಡಿದರೆಂದು ವಾಚಕರೇ ಆಲೋಚಿಸಿ ತಿಳಿದುಕೊಳ್ಳಲಿ, ಅಥವಾ ಮುಂದಿನ ಅಧ್ಯಾಯದಲ್ಲಿ ಸಂತಶಿರೋಮಣಿಯು ತಾನೇ ವಿವರಿಸಿ ಹೇಳಿದ್ದನ್ನು ಓದಿ ತಿಳಿಯಲಿ. ಏತಕ್ಕೆಂದರೆ ಅವರ ಶ್ರಮೆಯ ಚರಿತ್ರವನ್ನು ನಾವಾಗಿ ವಿವರಿಸಿ ಹೇಳುವುದು ಪಾಪಕರವಾದ್ದೆಂದು ನಾವು ಹೆದರುತ್ತೇವೆ.

## ೪೮

ರಾತ್ರಿ ಕಳೆದು ಬೆಳಗಾಯಿತು. ಹರಿಪಾಠ, ಭಜನೆ ಮುಂತಾದ್ದರ ಘೋಷವೇನೂ ಕೇಳಿಸುವುದಿಲ್ಲ. ಚೌಕಮನೆಯಲ್ಲಿದ್ದ ಸಂತರು, ಅಧ್ಯಕ್ಷರು ಹೆಚ್ಚು ರಾತ್ರಿ ವರೆಗೆ ಉಪದೇಶ ಕೊಡುತ್ತಿದ್ದರೇನೊ. ವೃದ್ಧರನ್ನು ನಿದ್ರೆಯಿಂದೆಬ್ಬಿಸಿದರೆ ಬುದ್ಧಿಶೂನ್ಯರೆನ್ನಿಸಿಕೊಳ್ಳಬೇಕಾದೀತೆಂದಂಜಿ ಈಗ ಬರುವರು, ಈಗ ಬರುವರು ಎಂದು ದಾರಿ ನೋಡುತ್ತಾ ಕುಳಿತರು. ಪ್ರತಿದಿವಸವು ಬಹು ಮುಂಜಾನೆ ಎಲ್ಲರೂ ಏಳುವುದಕ್ಕೆ ಮೊದಲೇ ಎದ್ದು ಮುಖಮಜ್ಜನ ಮುಂತಾದ್ದನ್ನು ಮಾಡುತ್ತಿದ್ದ ಇಂದಿರಾಬಾಯಿಯು ಹೊರಗೆ ಬಂದ ಸುಳಿವು ಕಾಣಿಸಲಿಲ್ಲ. ಹೆಚ್ಚು ರಾತ್ರಿ ವರೆಗೆ ಉಪದೇಶವನ್ನು ಕೇಳುತ್ತಾ ಇದ್ದಳೇನೋ. ಈ ವರೆಗೆ ವ್ಯಸನದಲ್ಲೇ ನಿದ್ದೆಗೆಟ್ಟು ರಾತ್ರಿ ಕಳೆಯುತ್ತಿದ್ದಳಲ್ಲವೆ? ಗಾಢ ನಿದ್ರೆ ಹತ್ತಿರಬಹುದೆಂದಾಲೋಚಿಸಿ, ಭೀಮರಾಯ ಅಂಬಾಬಾಯಿ ಸಹ ಆ ಕೋಣೆಯ ಕಡೆಗೆ ಹೋಗದೆ ತಂತಮ್ಮ ಬೇರೆ ಕೆಲಸಗಳಿಗೆ ಹೋದರು. ಗಂಟೆ ಏಳಾಯಿತು. ಮನೆಯಲ್ಲೆಲ್ಲ ಮಿಟಿಮಿಟಿ ಸ್ವರ್ಗವೇ. ಒಬ್ಬ ಸಂತನು ಇನ್ನೊಬ್ಬನೊಡನೆ "ಏನು? ಏನು?" ಎಂದು ಕಣ್ಣುಗಳಿಂದ ಸಂಜ್ಞೆಮಾಡಿ ಕೇಳುವುದು, ಇನ್ನೊಬ್ಬನು ಮತ್ತೊಬ್ಬನ ಕಿವಿಯಲ್ಲೇ "ಬಾಳಪ್ಪಯ್ಯನ ಮೊಕದ್ದಮೆಯು ತೀರಿ ಬಹಳ ದಿವಸಗಳಾಗಲಿಲ್ಲ. ಇನ್ನೊಂದಕ್ಕೆ ಬಗೆಯಾಯಿತೆ?" ಎಂದು ಕೇಳುವುದು, ಮತ್ತೊಬ್ಬನು "ನಮ್ಮ ಭಕ್ತರ ಸಂಖ್ಯೆಯನ್ನು ವೃದ್ಧಿಸುವ ಬಗೆ ಇದಲ್ಲವೇ ಅಲ್ಲ, ಇದರಿಂದ ಬೊಬ್ಬೆಯುಂಟಾಗುತ್ತೆ. ಬೊಬ್ಬೆಗೆ ಕಾರಣವನ್ನೇ ಉಂಟು ಮಾಡಬಾರದು. ಅದಲ್ಲದೆ ಅಧ್ಯಕ್ಷರೇ ಸಿಕ್ಕಿಬಿದ್ದರೆಂದರೆ ಮುಂದೆ ನಮ್ಮ ಮಂಡಲಿಯ ಗತಿಯೇನು? ಭಕ್ತರಾಗಲಪೇಕ್ಷಿಸುವವರು ತಾವಾಗಿಯೇ ನಮ್ಮ ಕಾಲಡಿಗಳಿದ್ದಲ್ಲಿ ಬರುವಂಥಾ ಉಪಾಯಗಳು ಧಾರಾಳವಾಗಿರುವಾಗ ಬೊಬ್ಬೆಗೆ ಕಾರಣಕೊಡುವುದು ಬರೇ ಹೆಡ್ಡುತನವೇ" ಎಂದು ಅಂತರಂಗವಾಗಿ ಮಾತನಾಡುವುದು, – ಹೀಗೆಲ್ಲ ಸಂತಮಂಡಲಿಯಲ್ಲಿ ಒಂದು ವಿಧದ ಗಲಿಬಿಲಿ ಹುಟ್ಟಿತು. ಕೆಲಸದ ಮೈರೆಯು ಸೋಮಯ್ಯನೊಡನೆ,

"ಉಂದು ದಾನೆಯಾ ಇನಿ, ಮೋಕುಳೆ ಗೌಜಿ ದಾಲಾ ಕೇಣುಜ್ಜಿ? ಯೆಡ್ಡೇನೆ ತಿಂದ್‌ದ್ ನಲಿತ್‌ದ್ ಜೆತ್ತೋಣೆನಾವತ್ತೆ? ಗೋಣೆರೆಲೆಕ್ಕೊ ಜೆಪ್ಪೆರೆಡೊ. ತಿನ್‌ಪಿನಿಲಾ ದಾನೆ! ಉಳೊ! ಇನಿ ಮಾಳ್ತಿ ಗೋದಿದ ಪೊಡಿ ಎಲ್ಲೆಗಿಜ್ಜಿ, ಎಲ್ಲೆದಾವು ಎಲ್ಲಾಂಜಿಗಿಜ್ಜಿ! ಉಳೊ! ಮೋಕ್‌ಳೆ ಬಂಜಿಳೆ! ಪೊಡಿ ಮಾಳ್ತ್ ಮಾಳ್ತ್‌ದ್ ಯೆನ ಕೈ ಮಾತಾ ದಡ್ಡ್ ಕಟ್‌ದ್ ಪೋಂಡೆ! ಮೊಕ್‌ಳೆಮಾರಿ ಏಪೊ ಜತ್ತ್‌ದ್ ಪೋಪುಂಡೊ! ಊರುಡಿತ್ತಿ ಪೊಣ್ಣುಳೆನ್ ಮಾತ ಲಕ್ಕಾಡ್ರುನವತ್ತೇ ಮೊಕುಳೆ ಬ್ಯಾರೊ? ಒರಿ ಪೊಯೆ ನೇಲ್ಯಾ ಇಲ್ಲಡೆಗ್. ಈ ಗೋಣೆರೆನ್ ಇಡೆಗ್ ಲೆಪ್ಪ್‌ಡಾಯಿನಿ ದಾಯೆಗ್‌ಗೆ? ಯೆನ ಬಾಲೆ ಇಂದಿರಮ್ಮ ಇನಿ ಓಳು? ಯಾನ್ ಇನಿ ತೂಯಿನೇ ಇಜ್ಜಿ. ಲಕ್ಕಾಡ್ರೆರೊಮಿನಿ?"

"ಇದೇನಯ್ಯಾ, ಈ ಹೊತ್ತು ಇವರ ಗೌಜಿ ಏನೂ ಕೇಳುವುದಿಲ್ಲ? ಚೆನ್ನಾಗಿ ತಿಂದು ಕುಣಿದು ಮಲಗಿಕೊಳ್ಳುವುದಲ್ಲವೇ? ಕೋಣ ಗಳಂತೆ ಮಲಗಿಕೊಂಡಿದ್ದಾರೇನೊ. ತಿನ್ನುವುದು ಸಹಾ ಏನು? ಅಯ್ಯೊ! ಈ ಹೊತ್ತು ಮಾಡಿದ ಗೋದಿಯ ಹುಡಿ ನಾಳೆಗಿಲ್ಲ, ನಾಳಿನದು ನಾಡದಿಗಿಲ್ಲ! ಅಯ್ಯೋ! ಇವರ ಹೊಟ್ಟೆಗಳೆ! ಹುಡಿ ಮಾಡಿ ಮಾಡಿ ನನ್ನ ಕೈಯೆಲ್ಲ ದಡ್ಡು ಕಟ್ಟಿ ಹೋಯಿತಷ್ಟೆ! ಇವರ ಮಾರಿಯು ಯಾವಾಗ ಇಳಿದು ಹೋಗುತ್ತೊ! ಊರಲ್ಲಿ ರುವ ಹೆಣ್ಣುಗಳನ್ನೆಲ್ಲ ಎಬ್ಬಿಸಿ ಹಾಕುವುದಲ್ಲವೇ ಇವರ ವ್ಯಾಪಾರ? ಒಬ್ಬನು ದೊಡ್ಡ ಮನೆಗೆ ಹೋದನು. ಈ ಕೋಣಗಳನ್ನು ಇಲ್ಲಿಗೆ ಕರೆಯಿಸಿದ್ದೇಕಂತೆ? ನನ್ನ ಮಗು ಇಂದಿರಾಬಾಯಿ ಈ ಹೊತ್ತು ಎಲ್ಲಿ? ನಾನು ಈ ಹೊತ್ತು ನೊಡಲೇ ಇಲ್ಲ. ಎಬ್ಬಿಸಿ ಹಾಕಿದರೆ ಮತ್ತೆ?"

ಎಂದು ಅವನನ್ನು ಒತ್ತಟ್ಟಿಗೆ ಕರೆದು ಮಾತನಾಡಲು, ಅವನು ಏನೋ ತನಗೇನೂ ತಿಳಿಯದೆಂದು ಹೇಳಿದನು. ತಾಸು ಎಂಟಾಯಿತು. ಅಂಬಾಬಾಯಿಯು ವಿಸ್ಮಯಪಟ್ಟು, ಇದೇನು ನೋಡೋಣವೆಂದು ಮೆಲ್ಲಗೆ ಇಂದಿರಾಬಾಯಿಯ ಕೋಣೆಯ ಬಳಿಗೆ ಹೋಗಲು, ಬಾಗಲಿಗೆ ಹೊರಗಿನಿಂದ ಸಂಕೋಲೆಯನ್ನು ಸಿಕ್ಕಿಸಿದ್ದನ್ನು ಕಂಡು 'ಇದ್ಯಾರ ಕುಚೇಷ್ಟೆ!' ಎಂದೊದರಿ ಸಂಕೋಲೆಯನ್ನು ಕೊಂಡಿಯಿಂದ ತಪ್ಪಿಸಿದ್ದೇ ಸರಿ, "ಪುಂಡಲೀಕ ವರದ ಪಾಂಡುರಂಗ ಹರಿವಿಠಲ್!" ಎಂದು ಆ ಸಂತಶಿಖಾಣಿಯು ಹೊರಗೆ ಹೊರಟು ಬಂದು "ಏನವ್ವಾ? ನಮಗೇನಾದರೂ ಗತಿಗೋತ್ರವಿಲ್ಲದೆ ನಿಮ್ಮಲ್ಲಿಗೆ ಬಂದು, ಸೇರದವರಲ್ಲ, ಕಂಡೆಯಾ? ಗಂಡನೂ ನೀನೂ ಕೂಡಿ ಆಲೋಚಿಸಿ, ಮಗಳಿಂದ ನನಗೆ ಇಡೀ ರಾತ್ರಿ ಈ ಕೋಣೆಯಲ್ಲಿ ಬಂಧನದಲ್ಲಿರಿಸಿದಿರಾ?"

"ಅಯ್ಯೋ! ಸ್ವಾಮಿ! ಇದೇನು ಹೀಗಪ್ಪಣೆ ಕೊಡುತ್ತೀರಿ? ಇಂದಿರೆಯೆಲ್ಲಿ? ಕೋಣೆಯಲ್ಲಿಲ್ಲವೇ?"

"ಏನವ್ವಾ? ಉರಿಯುವ ಬೆಂಕಿಗೆ ಎಣ್ಣೆ ಹೊಯ್ಯುತ್ತೀಯಾ?"

"ಸ್ವಾಮಿ! ಇಂಥಾ ಕಠಿಣ ವಚನಗಳನ್ನಾಡಬೇಡಿರಿ; ನಾವೆಂದರೆ ತಮ್ಮ ಪಾದಸೇವಕರು. ಇಂದಿರೆಯೆಲ್ಲಿ?"

"ಇಂದಿರೆಯನ್ನು ನೀವೇ ಅಲ್ಲವೇ ರಾತ್ರಿ ಇಲ್ಲಿಂದ ಉಪಾಯದಿಂದ ತಪ್ಪಿಸಿ ನನ್ನನ್ನು ಈ ಬಂಧನದಲ್ಲಿರಿಸಿ ಈಗ 'ಇಂದಿರೆಯೆಲ್ಲಿ? ಇಂದಿರೆಯೆಲ್ಲಿ?' ಎಂದು ಪೋಕಾಟಿಕೆ ಮಾಡುತ್ತೀಯಾ? ಶ್ರೀ ವಿಠೋಬನ ದಯವಿದ್ದರೆ ನಿಮ್ಮ–"

"ಅಯ್ಯೋ! ದಮ್ಮಯ್ಯ ಸ್ವಾಮಿ! ಶಪಿಸಬೇಡಿರಿ. ಮೊದಲೇ ನಾವು ಬಹಳ ಕಷ್ಟಗಳನ್ನನುಭವಿಸಿ ಬಳಲಿ ಬೆಂಡಾದವರು. ನಾವು ಯಾವ ಪಾಪಪುಣ್ಯವನ್ನಾದರೂ ಅರಿಯೆವು. ಈಗಲೇ ತಮ್ಮನ್ನು ಸಮಾಧಾನಪಡಿಸುವೆನು. ಯಾವುದಕ್ಕೂ ಇಂದಿರೆಯೆಲ್ಲಿ?"

"ಇಂದಿರೆ ಎಲ್ಲೋ ಯಾರು ಬಲ್ಲರು? ರಾತ್ರಿ ನೀವು ಇಲ್ಲಿಂದೆದ್ದು ಹೋದಕೂಡಲೆ ನಾಲ್ಕು ಮಾತುಗಳನ್ನಾಡುವಷ್ಟರಲ್ಲಿ ತಾನು ಬೇಗನೆ ಹೊರಗೆ ಹೋಗಿ, ಕೈಕಾಲು ತೊಳೆದು ಬರುತ್ತೇನೆಂದು ಹೋದವಳನ್ನು ಆ ಮೇಲೆ ಯಾರು ಕಂಡಿದ್ದಾರೆ? ಸುಮಾರು ಒಂದು ತಾಸುವರೆಗೆ ಕಾದು ಕೂತೆನು, ಬರಲಿಲ್ಲ; ಹೊರಗೆ ಹೋಗಿ ನೋಡೋಣವೆಂದು ಬಾಗಲು ತೆರೆಯುವುದಕ್ಕೆ ಹೋದಾಗ, ಅದಕ್ಕೆ ಹೊರಗಿನಿಂದ ಸಂಕೋಲೆ ಹಾಕಿರುತ್ತಿತ್ತು. ಐದಾರು ಸಾರಿ ಮೆಲ್ಲಗೆ ಕರೆದೆನು, – ಉತ್ತರ ಸಿಕ್ಕಲಿಲ್ಲ. ಇನ್ನು ತುಸಾ ಹೊತ್ತು ಕಾದು ನಿಂತೆನು. ಅಷ್ಟರಲ್ಲಿ ಎಣ್ಣೆ ಆರಿ ದೀಪ ನಂದಿಹೋಯಿತು. ಬೆಂಕೀ ಕಡ್ಡಿಗಳ ಕರಡಿಗೆ ಎಲ್ಲ್ಯಾದರೂ ಇದೆಯೋ ಎಂದು ಬಗ್ಗಿಕೊಂಡು ಅತ್ತಿತ್ತ ತಡವಿ ನೋಡುವಾಗ ಒಂದೆರಡು ಸಾರಿ ತಲೆಯು ಗೋಡೆಗೆ ತಟ್ಟಿತು. ಕರಡಿಗೆ ಎಂತೂ ಸಿಕ್ಕಲಿಲ್ಲ. ಇನ್ನು ಕೋಣೆಯಲ್ಲೇ ಮಲಗಿಕೊಳ್ಳೋಣ ವೆಂದಾಲೋಚಿಸಲು, ಒಂದು ಅಂಗವಸ್ತ್ರವಲ್ಲದೆ ಬೇರೆ ವಸ್ತ್ರವೂ ಇದ್ದಿಲ್ಲ. ಕೆಲವು ಹೊತ್ತು ವರೆಗೆ ನಿಂತುಕೊಂಡೆನು. ಕಾಲು ಬಚ್ಚುತ್ತಲೆ ಕುಳಿತುಕೊಂಡೆನು. ಸೊಂಟ ಬಚ್ಚುತ್ತಲೆ ನೆಲದಲ್ಲಿ ಮಲಗಿದೆನು. ಛಳಿಯಾಯಿತೆಂದು ಪುನಃ ಎದ್ದು ನಿಂತೆನು. ನಿಂತು ನಿಂತು ಸಾಕಾಯಿತು. ಇನ್ನು ಬಾಗಲನ್ನು ಎಳೆದು ಹೇಗೂ ಸಂಕೋಲೆಯನ್ನು ಕಡಿದು ತುಂಡು ತುಂಡು ಮಾಡೋಣವೆಂದಾಲೋಚಿಸಿ, ಒಂದು ಬಾಗಲನ್ನು ಪ್ರಯತ್ನದಿಂದ ಎಳೆದಾಗ ಅದು ಫಕ್ಕನೇ ತಪ್ಪಿಹೋಗಿ ಬೆರಳುಗಳು ಎಡೆಯಲ್ಲಿ ಸಿಕ್ಕಿಕೊಂಡವು. ಅವುಗಳನ್ನು ತಪ್ಪಿಸುವುದರಲ್ಲಿ ಅಷ್ಟಿಷ್ಟೆಂದು ಹೇಳಕೂಡದಷ್ಟು ವೇದನೆಯಾಗಿ, ಇಗೋ ಬೆರಳುಗಳೆಲ್ಲ ಬಾತು ಹೋಗಿವೆ. ಕಡೆಗೆ ಬಿಡುಗಡೆಯ ಉಪಾಯವ್ಯಾವುದನ್ನೂ ಕಾಣದೆ ಅಂಗವಸ್ತ್ರವನ್ನು ನೆಲದಲ್ಲಿ ಹಾಸಿ ನೇಲೆಯಲ್ಲಿ ತೂಗಾಡುತ್ತಿದ್ದ ಒಂದು ಗಂಟನ್ನು ತೆಗೆದು ತಲೆಯಡಿಗಿಟ್ಟು ಮಲಗಿಕೊಂಡದ್ದೆ ಸರಿ, ಕುಚ್ಚೆಂದು ತಲೆಗೇನೋ ಕಚ್ಚಿತು. ಆ ಗಂಟನ್ನುಪಯೋಗಿಸದೆ ತಲೆಯಡಿಗೇನೂ ಇಲ್ಲದೆಯಾದರೂ ಮಲಗಿಕೊಳ್ಳೋಣವೆಂದು ಆಲೋಚಿಸಿದೆ. ಆದರೆ ಆ ಚೇಳು ಗಂಟಿನಿಂದ ಹೊರಟುಬಂದು ಪುನಃ ಕಚ್ಚುವುದೋ ಏನೋ ಎಂಬ ಬೆದರಿಕೆಯಿಂದಲೂ ಏನು ಮಾಡಿದರೂ ಪರಿಣಾಮವಾಗದೆಂದು ತಿಳಿದು ಬೆಳಗಾಗುವ ಪರ್ಯಂತರ ನಿಂತುಕೊಂಡೇ ಕಾಲಕ್ಷೇಪ ಮಾಡಿದೆನು. (ಯಥಾರ್ಥದಲ್ಲಿ ಅದು ಚೇಳಲ್ಲ, ಕಸೂತಿಯ ಕೆಲಸದ ಕಂತಾಣಿಯಾಗಿತ್ತು.) ಶಪಿಸುವುದಕ್ಕೆ ಬಾಯಿ ತೆರೆಯುವಷ್ಟರಲ್ಲಿ ನಾನು ಹೀಗಾಗಿ ಇಡೀ ರಾತ್ರಿ ಯಮಯಾತನೆಯನ್ನನುಭವಿಸಿದ್ದು ಸಾಲದೆ ಈಗ ನಿನ್ನ ಕುಚೇಷ್ಟೆಯನ್ನು ಸಹ ಸಹಿಸಿಕೊಳ್ಳಬೇಕೆ?

'ಇಂದಿರೆಯೆಲ್ಲಿ? ಇಂದಿರೆಯೆಲ್ಲಿ' ಎಂದು ಕೇಳುವುದರ ಅರ್ಥವೇನು? ನನ್ನನ್ನು ಸಹ ಬಾಳಪ್ಪಯ್ಯನಿದ್ದಲ್ಲಿಗೆ ಕಳುಹಿಸುವ ಆಲೋಚನೆಯೇ? ನಿನ್ನ ಕುಲ–"

"ದಮ್ಮಯ್ಯ ಸ್ವಾಮಿ! ದಮ್ಮಯ್ಯ! ಇದೇನೊ ನಮಗೆ ಹಿಡಿದ ದೈವ! ಪತಿಗಳನ್ನು ಕರೆದುಕೊಂಡು ಬರುತ್ತೇನೆ. ಸ್ವಲ್ಪ ತಡೆಯಿರಿ" ಎಂದು ಹೇಳಿ ಭೀಮರಾಯನ ಬಳಿಗೆ ಹೋಗಿ, "ನಮ್ಮ ಗತಿ ಏನೆಂದು ನನಗೆ ತಿಳಿಯುವುದಿಲ್ಲ. ಇಂದಿರೆಯು ಕಾಣುವುದಿಲ್ಲ. ಅವಳ ಕೋಣೆಯ ಬಾಗಿಲಿಗೆ ಹೊರಗಿನಿಂದ ಸಂಕೋಲೆ ಹಾಕಿತ್ತು. ಅಧ್ಯಕ್ಷರು ತಾನೊಬ್ಬನೆ ಇಡೀ ರಾತ್ರಿ ಕೋಣೆಯಲ್ಲಿದ್ದೆನೆಂತಲೂ ಇಂದಿರೆಯನ್ನು ನಾವೇ ಅಲ್ಲಿಂದ ತಪ್ಪಿಸಿ ತನ್ನನ್ನು ಕೋಣೆಯಲ್ಲಿ ಬಂಧಿಸಿ ಉಪದ್ರವಿಸಿದೆವೆಂತಲೂ ಹೇಳಿ, ಮಹಾಕೋಪದಿಂದ ಎರಡೆರಡು ಸಾರಿ–ಸೆರಗೊಡ್ಡಿ ಕ್ಷಮೆಬೇಡಿದುದರಿಂದ ಶಪಿಸಲಿಲ್ಲವಾದರೂ ಅವರು ಶಾನೆ ಸಿಟ್ಟಿನಲ್ಲಿದ್ದಾರೆ. ನಮಗೆ ಒಂದೆರಡು ತರದಲ್ಲಲ್ಲ ಗ್ರಹಚಾರ ಹಿಡಿದಿರುವುದು. ಒಮ್ಮೆ ಅವರಿದ್ದಲ್ಲಿಗೆ ಎದ್ದು ಬಂದು ಅವರನ್ನು ಪ್ರಥಮತಃ ಸಂತೈಸಿ, ಆ ಮೇಲೆ ಹುಡುಗಿ ಎಲ್ಲಿದ್ದಾಳೆಂದು ಗೊತ್ತುಮಾಡಿಕೊಳ್ಳಬೇಕಷ್ಟೆ? ದೇವರೆ! ಏಕಪ್ಪಾ ನಮಗಿಂತಹ ಕಷ್ಟಗಳನ್ನು ಕೊಡುತ್ತಿದ್ದಿ!" ಎನಲು, ಭೀಮರಾಯನು ಥಟ್ಟೆಂದು ಎದ್ದು ಹೋಗಿ, ಆ ಸಂತಶಿಖಾಮಣಿಗಡ್ಡಬಿದ್ದು, "ಸ್ವಾಮಿ, ನಾವು ಕೇವಲ ನಿರಪರಾಧಿಗಳು. ನಮ್ಮ ಗುಣಸ್ವಭಾವಗಳೆಲ್ಲ ತಮ್ಮ ಚಿತ್ತಕ್ಕೇನೇ ವೇದ್ಯವಿರಬಹುದು. ದಾಸನು ಹೆಚ್ಚು ಅರಿಕೆ ಮಾಡಲು ಶಕ್ತನಲ್ಲ. ಕೃಪಾಕಟಾಕ್ಷವು ಏಕ ಪ್ರಕಾರವೇ ಇರಬೇಕು. ವಿದ್ಯಮಾನಗಳನ್ನೆಲ್ಲ ನೋಡುವಾಗ ದೊಡ್ಡ ಒಂದೊಗಟಿನಂತೆ ಕಾಣುತ್ತೆ. ಕಣ್ಣುಕಟ್ಟಿದ ಹಾಗಾಗುತ್ತೆ. ತಾವು ಸಮಾಧಾನ ತೆಗೆದುಕೊಂಡು ತಮ್ಮ ನಿತ್ಯಾನುಷ್ಠಾನಗಳನ್ನು ಕೈಕೊಳ್ಳುವುದಕ್ಕೆ ದಯಮಾಡಿಸಿರಿ. ನಾವು ಎಲ್ಲಾ ಸಂಗತಿಗಳನ್ನು ವಿಚಾರಿಸಿ ನೋಡಿ ಬೇಕಾದ ಪರಿಹಾರ ಮಾಡಿಸುತ್ತೇನೆ; ದಯಮಾಡಿಸಿರಿ" ಎಂದು ಹೇಳಿಕೊಳ್ಳಲು, "ಇನ್ನು ನಮಗೆ ಇಲ್ಲಿರುವುದು ಸರ್ವಥಾ ಸಲ್ಲದು. ಈಗಲೇ ಸ್ನಾನ ಅನುಷ್ಠಾನ ತೀರಿಸಿ, ನಮ್ಮ ಮಂಡಲಿಯು ಊರಿಗೆ ನಡೆಯುವ ಹಾಗೆ ಬೇಕಾದ ಏರ್ಪಾಡುಗಳನ್ನು ಮಾಡಿರಿ. ನಾವು ಸ್ನಾನದ ನಂತರ ಒಂದೇ ಕ್ಷಣಕ್ಕಾದರೂ ಇಲ್ಲಿರಲಾರೆವು" ಎಂದುತ್ತರ ಸಿಕ್ಕಿದ ಕೂಡಲೆ ಭೀಮರಾಯನು ಶಾಪವನ್ನು ಹೇಗೂ ತಪ್ಪಿಸಿಕೊಂಡೆನಷ್ಟೆ ಎಂದು ಮನಸ್ಸಿನಲ್ಲೇ ಹೇಳಿಕೊಂಡು ಚಾವಡಿಗೆ ಬಂದು, ಇಂದಿರಾಬಾಯಿಯನ್ನು ಹುಡುಕುವುದಕ್ಕೋಸ್ಕರ ನಾಲ್ಕೈದು ಜನರನ್ನು ನೇಮಿಸಿ ಕಳುಹಿಸಿ, ಒಡನೆ ಸಂತಮಂಡಲಿಯ ಪ್ರಯಾಣದ ಏರ್ಪಾಡುಗಳೆಲ್ಲವನ್ನು ಮಾಡಿ ದಾರಿಯ ಖರ್ಚಿಗೆ ಇನ್ನೂರು ರೂಪಾಯಿ ಕಾಣಿಕೆ ಮಾಡಿ, ಭೋಜನ ತೀರಿದೊಡನೆ ಮಂಡಲಿಯು ಹೊರಟು "ವಿಠಲ ಜೈ ಜೈ ವಿಠಲ" ಎಂದು ಭಜನೆ ಮಾಡುತ್ತಾ ಝುಂಜ್ರಿಗಳನ್ನು ಬಡೆಯುತ್ತಾ ಅಲ್ಲಲ್ಲಿ ಮಾರ್ಗದಲ್ಲಿ ಕುಣಿಯುತ್ತಾ ನಡೆದು ಹೋಗುವಾಗ, ಭೀಮರಾಯನೂ ಸ್ವಲ್ಪ ದೂರ ವರೆಗೆ ಹೋಗಿ, ಅವರೆಲ್ಲರನ್ನಾಲಂಗಿಸಿ ಅಧ್ಯಕ್ಷರಿಂದ ಆಶೀರ್ವಾದ ಬುಕ್ಕಿಟ್ಟು ಮುಂತಾದ ಪ್ರಸಾದಗಳನ್ನು ಪಡೆದು, ತಿರುಗಿ ಮನೆಗೆ ಬಂದು, ಇಂದಿರೆಯು ಎಲ್ಲಿದ್ದಾಳೆಂಬ ಗೊತ್ತು ಹರಿಯಲಿಲ್ಲವೆಂದು ಕೇಳಿ, ಬಹು

ದುಃಖದಿಂದಲೂ ಬೆದರಿಕೆಯಿಂದಲೂ ಪುನಃ ಅನೇಕರನ್ನು ಅನೇಕ ಕಡೆಗಳಿಗೆ ಹುಡುಕುವುದಕ್ಕೆ ಕಳುಹಿಸಿದ್ದಲ್ಲದೆ, ಸಮೀಪದಲ್ಲಿದ್ದ ಕೆರೆಗಳಲ್ಲಿಯೂ ಬಾವಿಗಳಲ್ಲಿಯೂ ಸ್ವತಃ ತಾನಿದ್ದು ಶೋಧನೆಮಾಡಿಸಿದರೂ ಪ್ರಯೋಜನವಾಗದೆ ಕಕ್ಕಾವಿಕ್ಕಪಟ್ಟು ಬೆದರಿ, "ಹೇ ಸ್ವಾಮಿ! ಅಣುರೇಣು ತೃಣಕಾಷ್ಠದಲ್ಲಿಯೂ ವ್ಯಾಪಿಸಿರುವ ಹೇ ಪರಮಾತ್ಮನೇ!" ಎಂದು ಕೂಗಿದನು. ಅಂಬಾಬಾಯಿಯು "ಅಯ್ಯೋ! ಮಗುವಿಗೆ ನಾನೇ ಮೃತ್ಯುವಾದೆನಲ್ಲೋ? ಹೇ ಜಗದೀಶ್ವರನೇ!" ಎಂದು ನಾನಾ ಪ್ರಕಾರದಲ್ಲಿ ದುಃಖಿಸಿ ಗಂಡನೊಡನೆ ಹೇಳಿ, ಇನ್ನು ಹೆಚ್ಚು ಹೆಚ್ಚಾಗಿ ಶೋಧನೆ ಮಾಡಿಸಿದಳು. ಅಧ್ಯಕ್ಷರ ಚಮತ್ಕಾರಿಕ ಉಪಾಯವೆಂಬುದೇನೆಂದಿನ್ನು ವಿವರಿಸಿ ಹೇಳ ಬೇಕೆಂದಿಲ್ಲವಷ್ಟೆ?

## ೪೯

ಇತ್ತಲಾಗಿ ಅಮೃತರಾಯನಲ್ಲಿಯ ತೊತ್ತು ಸುಬ್ಬಿ ಎಂಬವಳು ಬಚ್ಚಲು ಕೊಟ್ಟಿಗೆಯಲ್ಲಿ ಒಲೆಯುರಿಸುವುದಕ್ಕೆ ಕಟ್ಟಿಗೆ ತರುವುದಕ್ಕೋಸ್ಕರ ಕಟ್ಟಿಗೆ ಕೋಣೆಯ ಬಾಗಲನ್ನು ತೆರೆಯಲು, ಮುಸುಕು ಹಾಕಿಕೊಂಡು ಮೂಲೆಯಲ್ಲಿ ನಿಂತಿರುವುದ್ಯಾರೆಂದರಿಯದೆ, ಬೆಚ್ಚಿಬೆದರಿ, "ಉಳಪ್ಪಾ! ಬೂತೊ!" ಎಂದು ಕೂಗಲು, ಇಂದಿರಾಬಾಯಿಯು,

"ಸುಬ್ಬಿ, ಬುತೊ ಅತ್ತ್, ಪೋಡ್ಯಡಾ. ಯಾನ್ ಭೀಮರಾಯೆರೆ ಮಗಳ್ ಇಂದಿರೆ, ಯೆನ ಹಣೆಬರೊನು ಈ ಪಿಂಬನೆ? ಏರೆಗ್ಲಾ ಸುದ್ದಿ ಪಣಂದೆ ಜಲಜಾಕ್ಷ್ಯಮ್ಮನ್ ಒರ ಇಡೆಗ್ ಲೆತ್ತೊಂಡ್ದು ಕೊಂಡು ಬರ್ವಾನಾ?"

"ಸುಬ್ಬಿ, ಭೂತವಲ್ಲ, ಬೆದರಬೇಡ! ನಾನು ಭೀಮರಾಯರ ಮಗಳು ಇಂದಿರೆ. ನನ್ನ ಹಣೆಬರಹ ನೀನು ಬಲ್ಲೆಯಷ್ಟೆ? ಯಾರಿಗೂ ಸುದ್ದಿ ಹೇಳದೆ ಜಲಜಾಕ್ಷ್ಯಮ್ಮ ನವರನ್ನು ಒಮ್ಮೆ ಇಲ್ಲಿಗೆ ಕರೆದುಕೊಂಡು ಬರುವೆಯಾ?"

ಎಂದು ಕೇಳಿದಳು.

ಆಗಳವಳು,

"ಉಳೊ! ಯೆನ ಬಾಲೆ! ಇಂದಿರಮ್ಮಾ! ಇಂಚ ದೆಂಗ್‌ದ್ ಉಂತುನ ಕಾಲೊಲಾ ನಾರಾಯಣ ದೇವೆರ್ ಕೊರಿಯೆರೆ! ಲೆತ್ತೊಂಡ್ದು ಕೊಂಡು ಬರ್ಪೆ, ಮಗಾ."

"ಅಯ್ಯೊ! ನನ್ನ ಮಗು! ಇಂದಿರಮ್ಮಾ! ಹೀಗೆ ಅಡಗಿ ನಿಲ್ಲುವ ಕಾಲ ಸಹ, ನಾರಾಯಣ ದೇವರು ಕೊಟ್ಟರಷ್ಟೆ! ಕರೆದು ಕೊಂಡು ಬರುತ್ತೇನೆ, ಮಗು."

ಎಂದು ಹೇಳಿ ಓಡುತ್ತಾ ಹೋಗಿ, ಅಂತರಂಗವಾಗಿ ಜಲಜಾಕ್ಷಿಗೆ ವರ್ತಮಾನಕೊಡಲು, ಆಕೆಯು ಕೂಡಲೇ ಆ ಕೋಣೆಯ ಬಳಿಗೆ ಬಂದು, ಹಣಿಕಿ ನೋಡಿದಾಗ, ಮುಸುಕು ಹಾಕಿ

ಮುಖವನ್ನು ಗೋಡೆಯ ಕಡೆಗೆ ತಿರುಗಿಸಿ ಅಳುತ್ತಾ ನಿಂತಿರುವ ಇಂದಿರಾಬಾಯಿಯನ್ನು ಕಂಡು, ತುಂಬಾ ವ್ಯಸನದೊಡನೆ "ಏನವ್ವಾ, ಏತಕ್ಕಿಲ್ಲಿ ಬಂದು ನಿಂತೆ? ನನ್ನಿಂದಾಗಬೇಕಾದ್ದೇನೆಂದು ಹೇಳು, ಅಯ್ಯೋ! ಹೆಣ್ಣು ಜನ್ಮವೇ!" ಎಂದು ಮಾತನಾಡಲು, ಇಂದಿರಾಬಾಯಿಯು ದುಃಖಿಸುತ್ತಾ ಪತಿವಿಯೋಗದ ನಂತರ ಕಳೆದ ರಾತ್ರಿಯ ವರೆಗೆ ನಡೆದ ವಿದ್ಯಮಾನಗಳೆಲ್ಲವನ್ನು ಸಂಕ್ಷೇಪವಾಗಿ ತಿಳುಹಿಸಿ, ತಾನು ಹೇಗೆ ತಪ್ಪಿಸಿಕೊಂಡು ಬಂದೆನೆಂಬುದನ್ನು ಸಹ ಹೇಳಿದಳು. ಜಲಜಾಕ್ಷಿಯು ಮನಸ್ಸು ಕರಗಿದವಳಾಗಿ "ಅವ್ವಾ, ಒಳಗೆ ಬಂದು ಒಂದು ಕೋಣೆಯಲ್ಲಿ ಸ್ವಸ್ಥವಾಗಿರು. ನಿನ್ನ ವಿಷಯವೆಲ್ಲವನ್ನು ಪತಿಗೆ ಅರಿಕೆ ಮಾಡಿ, ನಮ್ಮಿಂದ ನಿನಗೇನಾದರೂ ಒತ್ತಾಸೆ ಸಿಕ್ಕುವ ಹಾಗಿದ್ದರೆ ನೋಡುತ್ತೇನೆ. ಬಾ, ನೀನು ಮುಖವನ್ನು ಮುಚ್ಚಡಗಿಸಬೇಕೆಂದಿಲ್ಲ. ಅಂತಹ ದುಷ್ಟಾಚಾರಗಳಿಗೆ ನಾವ್ಯಾರೂ ಮನಸ್ಸು ಕೊಡುವವರಲ್ಲ, ಬಾರೇ" ಎಂದು ಹೇಳಿ, ಆಕೆಯ ಕೈ ಹಿಡಿದುಕೊಂಡು ಮನೆಯೊಳಗೆ ಕರೆದು ತಂದು ಕುಳ್ಳಿರಿಸಿ, ಅನೇಕ ಪ್ರಕಾರದಿಂದ ಅವಳನ್ನು ಸಂತೈಸಿ, "ಅವ್ವಾ, ನೀನು ಕಂಗೆಡಬೇಕೆಂದಿಲ್ಲ. ನಿನ್ನ ವಿಷಯವೆಲ್ಲವನ್ನು ಈಗಲೇ ಆಲೋಚಿಸುವೆವು. ಮುಖ ಮಜ್ಜನವಾಗಿದೆಯೇ?" ಎಂದು ಕೇಳಲು, ಇಲ್ಲವೆಂದು ಹೇಳಲಾಗಿ, "ಎದ್ದು ಹೋಗಿ ಮುಖ ಮಜ್ಜನ ಮಾಡಿ ಬಾ" ಎಂದು ಹೇಳಿ ಸುಬ್ಬಿಯನ್ನು ಕರೆದು, ನೀರು ಚಂಬು ಮುಂತಾದುವನ್ನು ಕೊಡ ಹೇಳಿದಳು. ಇಂದಿರೆಯು ಸುಬ್ಬಿಯ ಸಂಗಡ ಹೊರಗೆ ಹೋದಾಗ, ಜಲಜಾಕ್ಷಿಯು ತನ್ನ ಪತಿಯನ್ನು ಒಳಗೆ ಕರೆದು, "ಹೆಣ್ಣು ಜನ್ಮದ ಪಾಲಿಗೆ ಬರುವ ಬಟ್ಟೆಬವಣೆಗಳೆಲ್ಲ ತಾವರಿಯದವುಗಳಲ್ಲವಷ್ಟೆ? ಭೀಮರಾಯನ ಮಗಳು ಆ ಬಡ ಪ್ರಾಣಿ ಇಂದಿರೆಯು ತೌರಮನೆಯಲ್ಲಿ ಅನೇಕ ವಿಧದ ಯಾತನೆಯನ್ನನುಭವಿಸಿ, ಕಡೆಗೆ ಸಂತರ ಬಲೆಯಲ್ಲಿ ಸಿಕ್ಕಿ ದುರ್ಮಾರ್ಗದಲ್ಲಿ ಪ್ರವರ್ತಿಸದೆ ನಿವೃತ್ತಿ ಇಲ್ಲವೆಂದು ಕಂಡು, ನಿನ್ನೆ ರಾತ್ರಿ ತಪ್ಪಿಸಿಕೊಂಡು ಓಡಿ ಬಂದು, ನಮ್ಮ ಕಟ್ಟೆಗೆಯ ಕೋಣೆಯಲ್ಲಿ ಅಡಗಿ ನಿಂತದ್ದೂ ಈಗಲೇ ನನ್ನ ತಿಳುವಳಿಕೆಗೆ ಬಂದು, ನಾನವಳನ್ನು ಒಳಗೆ ಕರೆದು ತಂದು ಸಂತೈಸಿ, ಮುಖ ಕೈಕಾಲುಗಳನ್ನು ತೊಳೆದು ಬರುವುದಕ್ಕೋಸ್ಕರ ಹೊರಗೆ ಕಳುಹಿಸಿದ್ದೇನೆ. ನಮಗಂತೂ ದೇವರು ಈ ವರೆಗೆ ಸಂತತಿ ಕೊಡಲಿಕ್ಕೆ ಸಂತೋಷಪಡಲಿಲ್ಲ. ಬಡ ಭಾಸ್ಕರನಿಗೆ ಹೇಗೂ ಒಂದು ಮಾರ್ಗ ತೋರಿಸಿದೆವು. ಈ ಪ್ರಾಣಿಯೂ ಒಂದು ಒಳ್ಳೆ ಮಾರ್ಗಕ್ಕೆ ಸೇರುವ ಹಾಗೆ ನಾವೇನಾದರೂ ಪ್ರಯತ್ನಿಸಿದರೆ ನಮಗೆ ಈ ಜನ್ಮದಲ್ಲಲ್ಲದಿದ್ದರೆ ಮುಂದಿನ ಜನ್ಮದಲ್ಲಾದರೂ ಸಂತತಿ ಎಂಬ ಸುಖವು ಪ್ರಾಪ್ತಿಯಾಗದಿರದಷ್ಟೆ?" ಎಂದು ಮೆಲ್ಲನೆ ಮಾತನಾಡುತ್ತಿರುವಷ್ಟರಲ್ಲಿ ಅಮೃತರಾಯನು ಆ ಕೋಣೆಯಲ್ಲಿದ್ದದ್ದನ್ನರಿಯದೆ ಇಂದಿರಾಬಾಯಿಯು ಫಕ್ಕನೆ ಒಳಗೆ ಬಂದು, ಅಮೃತರಾಯನಲ್ಲಿರುವುದನ್ನು ಕಂಡು, ಪುನಃ ಫಕ್ಕನೆ ಹೊರಗೆ ಹೋದ್ದನ್ನು ನೋಡಿ, ಜಲಜಾಕ್ಷಿಯು "ಇಂದಿರೇ, ಇತ್ತ ಬಾರವ್ವಾ! ಏತಕ್ಕಂಜುತ್ತಿ? ನೀನು ನಮ್ಮ ಮಗುವಿಗೆ ಸಮಾನಳಲ್ಲವೆ? ಬಾ" ಎಂದು ಕರೆಯಲು, ಅವಳು ಒಳಗೆ ಬಂದು ನಿಂತಳು. ಅಮೃತರಾಯನು ಅವಳನ್ನು ಕಂಡು, ಕೆಲವು ಮಾತುಗಳನ್ನಾಡಿ, ಅವಳ ಜೀವನ ಚರಿತ್ರವೆಲ್ಲವನ್ನು ಅವಳಿಂದ ಸವಿಸ್ತಾರವಾಗಿ ಕೇಳಿ ತಿಳಿದು, ಒಂದು ಕಡೆಯಿಂದ

ದುಃಖಪಡುವಾಗ ಮತ್ತೊಂದು ಕಡೆಯಿಂದ ಅವಳ ಧೈರ್ಯಕ್ಕೂ ಬುದ್ಧಿಗೂ ಮೆಚ್ಚಿ, "ಅವ್ವಾ, ನೀನು ಇಲ್ಲೇ ಇದ್ದಿರು, ಅಂಜಬೇಡ. ಮುಂದಿನ ನಿನ್ನ ಜೀವನ ಸ್ಥಿತಿಯನ್ನು ಕುರಿತು ನಾನು ಚೆನ್ನಾಗಿ ಆಲೋಚಿಸಿ, ಬೇಕಾದಂತೆ ಪ್ರವರ್ತಿಸುವೆನು" ಎಂದು ಸಂತೈಸಿ ಹೆಂಡತಿಯೊಡನೆ, "ಕೇಳಿದೆಯಾ, ಎಲ್ಲಾ ವಿಷಯದಲ್ಲಿಯೂ ಈ ಮಗುವು ನಮ್ಮದೇ ಎಂದು ಭಾವಿಸಿ ಇವಳನ್ನು ನೋಡಿಕೊಂಡಿರು. ಇವಳು ನಮ್ಮಲ್ಲಿರುವ ಸಂಗತಿಯನ್ನು ನಾವಾಗಲೀ ಸೇವಕರಾಗಲೀ ಬೇಕೆಂದು ಪ್ರಕಟಪಡಿಸುವುದು ಅವಶ್ಯವಿಲ್ಲ" ಎಂದು ಹೇಳಿ ಹೊರಗೆ ತನ್ನ ಕೆಲಸಕ್ಕೆ ಹೋದನು. ಅದೇ ಪ್ರಕಾರ ಜಲಜಾಕ್ಷಿಯು ಎಲ್ಲರಿಗೂ ಎಚ್ಚರಿಸಿ ಹೇಳಿದಳು. ಆ ಬಳಿಕ ಜಲಜಾಕ್ಷಿಯು ಅಕ್ಕರೆಯಿಂದ ತಾನೇ ಇಂದಿರಾಬಾಯಿಯ ತಲೆ ಬಾಚುವುದೋ, ಅವಳ ಆರೈಕೆಯನ್ನು ನೋಡುವುದೋ, ಶಾರದಾಬಾಯಿಯಲ್ಲಿ ಕಂಡಂಥಾ ಪುಸ್ತಕಗಳು, ಕಸೂತಿ ತೆಗಿಯಲಿಕ್ಕೆ ಬೇಕಾದ ವಿವಿಧ ವರ್ಣಗಳ ನೂಲು ಮುಂತಾದ್ದನ್ನು ಬೇಕೆಂದಾಗ ತರಿಸಿ ಕೊಡುವುದೊ ಹೀಗೆಲ್ಲ ತನ್ನ ಮಗುವಿನಂತೆ ಅವಳ ಜಾಗ್ರತೆಯನ್ನು ತೆಗೆದುಕೊಳ್ಳುತ್ತಾ ಇರುವಾಗ, ಇಂದಿರಾಬಾಯಿಯು ಜಲಜಾಕ್ಷಿಯೇ ತನ್ನ ಸಾಕ್ಷಾತ್ ತಾಯಿ ಎಂದು ಭಾವಿಸಿ, ಭಕ್ತಿಯಿಂದಲೂ ಬುದ್ಧಿಯಿಂದಲೂ ನಡೆದುಕೊಳ್ಳುತ್ತಾ ಕೆಲವು ಕಾಲ ಕಳೆದ ಮೇಲೆ, ಒಂದಾನೊಂದು ದಿವಸ ಇಂದಿರಾಬಾಯಿಯು ಜಲಜಾಕ್ಷಿಯೊಡನೆ, "ಅವ್ವಾ, ಇಂಗ್ಲಿಷ ಭಾಷೆ, ಗಣಿತ ಶಾಸ್ತ್ರ, ಲೋಕ ಚರಿತ್ರ ಇವೇ ಮುಂತಾದ ವಿಷಯಗಳನ್ನು ಹೆಂಗಸರು ಕಲಿಯಬಾರದಂತೆ, ಹೌದೇ" ಎಂದು ಪ್ರಶ್ನೆ ಮಾಡಲು ಅವಳು, ಕಿರಿನಗೆಯೊಡನೆ, "ಅದ್ಯಾರವ್ವಾ ನಿನಗೆ ಹೇಳಿದ್ದು? ಕೆಲವರು ಹಾಗೆ ಹೇಳುವುದನ್ನು ನಾನೂ ಕೇಳಿದ್ದೇನೆ. ಆದರೆ ನನಗೆ ಆ ಮಾತಿನ ಮೇಲೆ ವಿಶ್ವಾಸ ಕಡಿಮೆ" ಎಂದುತ್ತರ ಕೊಡಲು, ಇಂದಿರಾಬಾಯಿಯು ಪುನಃ "ಅವೆಲ್ಲವನ್ನು ಕಲಿತವರು ಜಾತಿಕೆಟ್ಟು ದುರ್ನಡತೆಯಲ್ಲಿ ಪ್ರವರ್ತಿಸುತ್ತಾರಂತೆ. ವಿದ್ಯೆ ಕಲಿಯುವುದರಿಂದ ಒಬ್ಬಳ ನಡತೆ ತಿದ್ದುಪಡಿಯಾದೀತಲ್ಲದೆ ಕೆಟ್ಟು ಹೋದೀತೆಂದು ನನ್ನ ಬುದ್ಧಿಗೆ ಕಾಣುವುದಿಲ್ಲ. ನಿನ್ನಭಿಪ್ರಾಯವೇನು?"

"ನನ್ನಭಿಪ್ರಾಯವೂ ಅದೇ. ಏನೂ ಕಲಿಯದಿದ್ದ ನಿರಕ್ಷರಕುಕ್ಷಿಗಳೇ ಹೆಚ್ಚಾಗಿ ದುರ್ನಡತೆಯಲ್ಲಿ ಪ್ರವರ್ತಿಸುವುದೆಂದು ನನ್ನ ಪತಿ ನನ್ನ ಕೂಡೆ ಪ್ರಸ್ತಾಪತ್ವೇನ ಅನೇಕ ಸಾರಿ ಹೇಳುತ್ತಿದ್ದರು. ನಿನಗೇಕೀಗ ಆ ವಿಷಯವು ನೆನಪಿಗೆ ಬಂದದ್ದು?" ಎಂದು ಹೆಚ್ಚಿಗೆ ಮಾತನಾಡುವಷ್ಟರಲ್ಲಿ ಅಮೃತರಾಯನು ಫಕ್ಕನೆ ಏನೋ ಕಾರ್ಯವಶಾತ್ ಆ ಕೋಣೆಗೆ ಬರುವಾಗ ಒಂದೆರಡು ಶಬ್ದಗಳು ಅವನ ಕಿವಿಯಲ್ಲಿ ಬಿದ್ದುದರಿಂದ ಒಳಗೆ ಬಂದು ಜಲಜಾಕ್ಷಿಯೊಡನೆ,

"ಎಂತಹ ಪ್ರಸ್ತಾಪ?"

"ಹೆಂಗಸರು ವಿದ್ಯೆ ಕಲಿಯುವುದರಿಂದ ದುರ್ನಡತೆಯಲ್ಲಿ ಪ್ರವರ್ತಿಸುವುದಾಗಿ ನಮ್ಮ ಇಂದಿರೆಯೊಡನೆ ಯಾರೋ ಮಾತನಾಡುತ್ತಿದ್ದರಂತೆ. ಆ ವಿಷಯದಲ್ಲಿ ನನ್ನ ಅಭಿಪ್ರಾಯವೇನೆಂದು ಕೇಳುತ್ತಾಳೆ."

"ನಿನ್ನಭಿಪ್ರಾಯವೇನೆಂದು ಹೇಳಿದೆ?"

"ನನಗೆ ಆ ಮಾತಿನಲ್ಲಿ ವಿಶ್ವಾಸವಿಲ್ಲೆಂದು ಹೇಳಿದೆ. ಹೇಗೆ? ತಪ್ಪೇ ನನ್ನ ಗ್ರಹಿಕೆ?"

"ಅದು ಹೇಗೂ ಇರಲಿ, ಇಂದಿರೇ, ನಿನ್ನ ಸ್ವಂತ ಅಭಿಪ್ರಾಯವೇನವ್ವಾ?"

"ನಾನೆಷ್ಟಾದರೂ ಅಲ್ಪ ಬುದ್ಧಿಯವಳು. ನನ್ನಭಿಪ್ರಾಯ ಒಂದು ವೇಳೆಗೆ ತಪ್ಪಾಗಿರಬಹುದು. ನನಗೆ ತಾವೇ ಬುದ್ಧಿ ಹೇಳಿ ಕೊಡಬೇಕಲ್ಲವೇ?"

"ನೀನು ಹೇಳು, ತಪ್ಪಿದ್ದರೆ ತಿದ್ದಬಹುದು, ಅಂಜಬೇಡ."

"ನನ್ನ ಬುದ್ಧಿಗೆ ತೋರುವುದೇನೆಂದರೆ, ವಿದ್ಯೆ ಕಲಿಯುವುದರಿಂದ ಯಾವುದೊಂದೂ ಕೇಡಿಲ್ಲ. ಮಾತ್ರವಲ್ಲ, ಎಲ್ಲಾ ಕೇಡುಗಳಿಂದಲೂ ತಪ್ಪಿಸಿಕೊಳ್ಳಬಹುದು. ನಮ್ಮ ಬುದ್ಧಿಗೆ ಮಾತ್ರ ಒಳ್ಳೇ ಸ್ಥಿರತೆ ಬೇಕು. ನಮ್ಮ ಹೃದಯವೂ ನಿರ್ಮಲವಾಗಿರಬೇಕು" ಎಂದು ಹೇಳಿ, ಬಂದ ಕಿರುನಗೆಯನ್ನಡಗಿಸಿ, ಸೀರೆಯ ಸೆರಗನ್ನು ಬಾಯಿಯ ಮೇಲೆ ತಂದು ಹಿಡಿದು, ಮರ್ಯಾದೆಯಿಂದ ತಲೆ ಬಗ್ಗಿಸಿ ನಿಂತಳು. ಅಮೃತರಾಯನು ಆ ಮಾತನ್ನು ಕೇಳಿ, ಮನಸ್ಸಿನಲ್ಲೇ 'ದೇವರೇ, ಇಂತಹ ಮಗುವು ನನ್ನಲ್ಲೇ ಹುಟ್ಟಬಾರದಿತ್ತೇ!' ಎಂದಂದುಕೊಂಡು "ಇಂದಿರೇ, ನಿನ್ನಭಿಪ್ರಾಯ ಸರಿಯಾದ್ದೇ. ನೀನು ಜಲಜಾಕ್ಷಿಯೊಡನೆ ಈ ಪ್ರಸ್ತಾಪವನ್ನೇಕೆ ಮಾಡಿದೆ ಎಂಬುದೂ ನನ್ನ ಮನಸ್ಸಿಗೆ ಗೊತ್ತಾಯಿತು. ನೀನು ಎಲ್ಲಿ ಹೇಗೆ ಕಲಿಯಬೇಕೆಂಬ ವಿಷಯವನ್ನು ನಾನು ಚೆನ್ನಾಗಿ ಆಲೋಚಿಸಿ ಅದಕ್ಕೆ ಬೇಕಾದ ಏರ್ಪಾಡುಗಳನ್ನೆಲ್ಲ ಜಾಗ್ರತೆಯಾಗಿ ಮಾಡುವೆನು. ನಿನಗೆ ವಿದ್ಯೆ ಬುದ್ಧಿ ಕಲಿಸಿ, ಸನ್ಮಾರ್ಗವನ್ನು ತೋರಿಸುವುದರಿಂದ ನನಗೆ ತುಂಬಾ ಸಂತೋಷವುಂಟಾಗುವುದು" ಎಂದು ಹೇಳಲು, ತನ್ನ ಕೃತಜ್ಞತೆಯನ್ನು ಹೇಗೆ ತೋರಿಸುವುದೆಂದು ತಿಳಿಯದೆ, ತಲೆಯನ್ನು ಅವನ ಕಾಲಡಿಗಳ ಮೇಲಿಟ್ಟು ಕಣ್ಣೀರು ಸುರಿಸಿದಳು. ಜಲಜಾಕ್ಷಿಯು ಅವಳನ್ನೆತ್ತಿ ಕುಳ್ಳಿರಿಸಿ ಸಂತೈಸಿದಳು. ಅಮೃತರಾಯನು ಒಂದು ಪೆಟ್ಟಿಗೆಯಿಂದ ಕೆಲವು ಕಾಗದಗಳನ್ನು ತೆಗೆದುಕೊಂಡು ಹೊರಗೆ ತನ್ನ ಕೆಲಸಕ್ಕೆ ಹೋದನು.

## ೫೦

ಕಮಲಪುರದಲ್ಲಿ ಮುಕ್ಕಣ್ಣೇಶ್ವರ ದೇವಸ್ಥಾನದ ಹಿಂದಣ ಕೆರೆಯಲ್ಲಿ ಅದರ ನೆರೆಕರೆಯಲ್ಲಿರುವ ಮನೆಗಳಿಂದ ಹೊರಕೆಲಸದ ಹೆಂಗಸರು ವಸ್ತ್ರಗಳನ್ನೊಗೆಯುವುದಕ್ಕೆ ಪ್ರತಿದಿವಸವೂ ಮಧ್ಯಾಹ್ನ ಸಮಯದಲ್ಲಿ ಒಟ್ಟುಗೂಡುವುದೂ, ಆಗ ಊರಲ್ಲಿ ನಡೆಯುವ ಬೇರೆ ಬೇರೆ ವಿಷಯಗಳನ್ನು ಕುರಿತು ಅವರೆಲ್ಲರೂ ಮಾತನಾಡುವುದೂ, ಅನೇಕ ಸಾರಿ ಅವರಲ್ಲಿ ತರ್ಕಗಳೂ ಕಲಹಗಳೂ ಉಂಟಾಗಿ ಜಗಳಾಡಿ ಮಾರಾಮಾರಿ ಮಾಡುವುದೂ ಅನೇಕ ವರುಷಗಳಿಂದ ನಡೆದು ಬಂದ ಸಂಪ್ರದಾಯವಾಗಿದೆ. ಒಂದಾನೊಂದು ದಿವಸ ದೇಯಿ, ಪೊಪೆ, ಮೈರೆ, ದುಗ್ಗೆ, ಸುಬ್ಬಿ, ದಾರು, ಲಕ್ಷ್ಮಿ, ಪೊಣ್ಣು, ಲಿಂಗು, ಉಜ್ಜು, ಬಿರ್ಮು, ಚೋಮು, ರುಕ್ಕಿ, ಯಲ್ಲು ಇವರೆ ಮುಂತಾದ ಅನೇಕ ತೊತ್ತುಗಳು ಅಲ್ಲಿ ವಸ್ತ್ರಗಳನ್ನೊಗೆಯುವುದಕ್ಕೆ ಬಂದಾಗ, ಅನೇಕ

ವಿಷಯಗಳನ್ನು ಕುರಿತು ಮಾತನಾಡುತ್ತಾ ಇಂದಿರಾಬಾಯಿಯು ಕಾಣದೆ ಹೋಗಿರುವ ಸಂಗತಿಯನ್ನು ಸಹ ಮಾತನಾಡತೊಡಗಿದರು.

ದಾರು–"ಅಂದಾ, ರುಕ್ಕಿ, ಆ ಗೋಣೇರ್ ನಾಕುಳು ಪೊಣ್ಣನ್ ಲಕ್ಕಾಡ್ರೇರೊ?"

ದಾರು–"ಹೌದೇ, ರುಕ್ಕಿ, ಆ ಕೋಣಗಳು ಹುಡುಗಿಯನ್ನು ಎಬ್ಬಿಸಿ ಹಾಕಿದರೇ?"

ರುಕ್ಕಿ–"ಲಕ್ಕಾಡ್ರೊಡಂದತೇ ಅಪ್ಪೆ ಅಮ್ಮೆ ಆಕುಳೆನ್ ಲೆಪ್ಪಾಡಿಯಿನೆಡೊ, ಇಜ್ಜಿಡ ದಾಯೆ?"

ರುಕ್ಕಿ–"ಎಬ್ಬಿಸಿಹಾಕಬೇಕೆಂದೇ ತಾಯಿ ತಂದೆಗಳು ಅವರನ್ನು ಕರೆಯಿಸಿದ್ದೇನೊ, ಇಲ್ಲವಾದರೇಕೆ?"

ಲಿಂಗು–"ಎಂಚಿ ಪೊರ್ಲುದಾ ಕಂಡೆ! ಗೋಣೆರ್ ಕೊಂಡು ಪೊಪಿನೆಡ್ದ್ ಲಾ ಸೂಳೇರೆ ಒಟ್ಟುಗ್ ಕೂಡುದ್ವಾಳೆ?"

ಲಿಂಗು–"ಎಂಥಾ ಚೆಲುವೆ? ಆ ಕೋಣಗಳು ತೆಗೆದುಕೊಂಡು ಹೋಗುವುದಕ್ಕಿಂತ ಸೂಳೆಯರ ಸಂಗಡ ಕೂಡಬಹುದಿತ್ತಷ್ಟೆ?"

ಮೈರೆ–"ಈ ದಾನೆಯಾ ಬಗ್ಳ್ವಾ? ಯೆನಾ ಬಾಲೆ, ಇಂದಿರಮ್ಮ ಸೂಳೇರೆ ಒಟ್ಟುಗ್ ಕೂಡುನಾಳೊ? ಕಂಡಣ್ಯೆ ಸೈತಿ ಬೊಕ್ಕ ಯೆನಾ ಬಾಲೆನ ಮೋನೆ ತೂಯಿ ಮಗೆ ಏರುಳ್ಳೆ?"

ಮೈರೆ–"ನೀನೇನೆ ಬೊಗಳುತ್ತಿ? ನನ್ನ ಮಗು, ಇಂದಿರಮ್ಮ, ಸೂಳೆಯರ ಸಂಗಡ ಕೂಡುವವಳೆ? ಗಂಡ ಸತ್ತ ಬಳಿಕ ನನ್ನ ಮಗುವಿನ ಮುಖ ನೋಡಿದವನ್ಯಾರಿದ್ದಾನೆ?"

ದುಗ್ಗೆ–"ನಿನ್ನ ಪರ್ಸಂಗೊ ಮಾತಾ ಕಟ್ಟ್‌ದ್ ದೀಡ್ಡ್. ಅಂಚಾಂಡ ಆಳ್ ಇತ್ತೆ ವೋಳ್ ಉಳ್ಳಲ್?"

ದುಗ್ಗೆ–"ನಿನ್ನ ಪ್ರಸಂಗವೆಲ್ಲ ಕಟ್ಟಿಡು. ಹಾಗಾದರೆ ಅವಳೀಗ ಎಲ್ಲಿದ್ದಾಳೆ?"

ಬಿರ್ಮು– "ಮುರಾಣೆ ಅತ್ತಯಾ ವೊರಿ ಜೈಲ್‌ಗ್ ಪೋಯಿನಿ? ಆತ್ ಬೇಗ ಕುಡಾ ಒರ್ತಿನ್ ಲಕ್ಕಡ್ರೆವೇರೊ? ಆಕುಳು ದಾನೆ ಸೈಯೆರೆ ಪಿದಾಡ್‌ದೆರೊ?"

ಬಿರ್ಮು–"ಮೊನ್ನೆಯಲ್ಲವೆ ಒಬ್ಬ ಜೈಲಿಗೆ ಹೋದ್ದು? ಅದಷ್ಟು ಬೇಗ ಮತ್ತೊಬ್ಬಳನ್ನು ಎತ್ತಿ ಹಾಕುವರೋ? ಅವರೇನು ಸಾಯುವುದಕ್ಕೆ ಹೊರಟಿದ್ದಾರೆಯೆ?"

ಲಕ್ಷ್ಮಿ–"ಆಪಗ ಈತ್ ದಿನೊ ಮೂಳು ಇತ್ತಿನಾಕುಳು ಬಾಲೆ ತೂವರೆ ತಿಕ್ಕಂದಿನಾನಿಯೇ ಊರು ಬುಡುದು ದಾಯೆ ಪೋಯೆರ್?"

ಲಕ್ಷ್ಮಿ–"ಹಾಗಾದರೆ ಇಷ್ಟು ದಿನ ಇಲ್ಲಿದ್ದವರು ಮಗು ಕಾಣಸಿಕ್ಕದಿದ್ದ ದಿವಸವೇ ಊರು ಬಿಟ್ಟೇಕೆ ಹೋದರು?"

ಪೊಪೆ–"ಈ ದುಂಬು ಪೋಲಾ, ಯೆಂಕುಳು ಪಿರಾವುಡೆ ಬರ್ಪೆ ಅಂದ್‌ದ್ ಪಂಡ್‌ದ್ ಕಡಾಪುಡ್ದೆರೊಡೊ."

ಪೊಪೆ–"ನೀನು ಮುಂದೆ ಹೋಗು ತಾವು ಹಿಂದಿನಿಂದ ಬರುತ್ತೇವೆಂದು ಹೇಳಿ ಕಳುಹಿಸಿದ್ದಾರೇನೊ."

ಮೈರೆ–"ಸುಡ್ ನಿನ್ನ ನಾಲಯಿ! ನಿಕುಳು ಮಾತ ದಾನೆಲಾ ಬಗ್‌ಳ್ವಾರ್."

ಮೈರೆ–"ಸುಡು ನಿನ್ನ ನಾಲಿಗೆ! ನೀವೆಲ್ಲರೂ ಏನು ಬೊಗಳುವಿರಿ."

ಉಜ್ಜು–ಈ ದಾನೆ ಪಣ್ವ ಮೈರೆ? ಪೊಣ್ಣು ವೋಳುಂಡು? ತುಪಾವ್."

ಉಜ್ಜು–"ನೀನೇನು ಹೇಳುತ್ತಿ ಮೈರೆ? ಹುಡುಗಿ ಎಲ್ಲಿದ್ದಾಳೆ, ತೋರಿಸು."

ದೇಯಿ–"ಆಳೆಗ್ ಮರ್ಲ್! ಏತೋ ಪೊಣ್ಣುಳು ಮಿಂಡೆರೆ ಒಟ್ಟುಗು ಪಾರ್ದೆರ್."

ದೇಯಿ–"ಅವಳಿಗೆ ಹುಚ್ಚು! ಎಷ್ಟೊ ಹುಡುಗಿಯರು ಮಿಂಡರ ಸಂಗಡ ಓಡಿದ್ದಾರೆ."

ಚೋಮು–"ಮುರಾಣೆ ಅತ್ತಯಾ ಬಸಪ್ಪೆ ಒರ್ತಿನ್ ಬೊಂಬಾಯಿಗ್ ಕೊಂಡು ಪೋಯಿನಿ?"

ಚೋಮು–"ಮೊನ್ನೆಯಲ್ಲವೇ ಬಸಪ್ಪನು ಒಬ್ಬಾಕೆಯನ್ನು ಬೊಂಬಾಯಿಗೆ ಕೊಂಡು ಹೋದುದ್ದು?"

ಪೊಣ್ಣು–"ಒರ್ತಿ ಪೋಯಳಂದ್‌ದ್ ಮಾತೆರ್‌ಲಾ ಪೋಪೇರೊ?"

ಪೊಣ್ಣು–"ಒಬ್ಬಳು ಹೋದಳೆಂದು ಎಲ್ಲರು ಹೋಗುತ್ತಾರೆಯೇ?"

ಯಲ್ಲು– "ಉಂದು ದಾಯಿತಾವೆಯಾ ನಿಕುಳೆ ಪಂಚ್ಯಾತಿಕೆ? ತೂವಂದೆ ಪತ್ತಂದೆ ದಾನ್ಯಾಂಡ್ಲಾ ಬಗ್‌ಳುನವು ಯೆಡ್ಡೆ ಅತ್ತ್, ಕೂಲಿ ಪೋವು. ಮುರಾಣೆ ಓಳೋ ಒಂಜಿ ಕಣಕ್‌ದ ಕೊಟ್ಯಡ್ ಒಂಜಿ ಪೊಣ್ಣು ತಿಕ್ಕ್‌ದಿಂಡ್‌ಗೆ, ಅವು ಓಳುಗೆ? ಏರ್‌ಲಾ ಪಿಂಬಾರೊ?"

ಯಲ್ಲು–"ಇದು ಏನೆ ನಿಮ್ಮ ಪಂಚ್ಯಾತಿಕೆ? ನೋಡದೆ ಹಿಡಿಯದೆ ಏನಾದರೂ ಬೊಗಳುವುದು ಒಳ್ಳೆದಲ್ಲ, ಹಲ್ಲು ಹೋಗುವದು. ಮೊನ್ನೆ ಎಲ್ಲ್ಯೊ ಒಂದು ಕಟ್ಟಿಗೆಯ ಕೋಣೆಯಲ್ಲಿ ಒಬ್ಬ ಹುಡುಗಿ ಕಾಣಸಿಕ್ಕಿದಳಂತೆ. ಅದು ಎಲ್ಲ್ಯಂತೆ? ಯಾರೂ ತಿಳಿದಿದ್ದಿರಾ?"

ಸುಬ್ಬಿ–"ಆ ಸುದ್ದಿ ನಿಕುಳೆಗ್ ಯೆಂಚ ತಿಕ್ಕ್‌ಂಡ್‌ಯಾ?"

ಸುಬ್ಬಿ–"ಆ ಸುದ್ದಿ ನಿಮಗೆ ಹೇಗೆ ಸಿಕ್ಕಿತೆ?"

ಯಲ್ಲು–"ಅವು ನಿಜೊನೊ? ನಿಜೊ ಆಂಡ ಓಳುಗೆ?"

ಯಲ್ಲು–"ಅದು ನಿಜವೇ? ನಿಜವಾದರೆ ಎಲ್ಲ್ಯಂತೆ?"

ಸುಬ್ಬಿಯೂ ಯಲ್ಲುವೂ ಸಮೀಪ ಸಮೀಪದಲ್ಲೇ ಒಗೆಯುತ್ತಿದ್ದರು. ಸುಬ್ಬಿಯು ಯಲ್ಲುವಿಗೆ ಕಣ್ಣು ಒತ್ತಿ ಸುಮ್ಮಗಿರು ಎಂದರ್ಥವಾಗುವ ಹಾಗೆ ಸಂಜ್ಞೆಮಾಡಿದಳು. ಅದನ್ನು ಕಂಡು,

ಮೈರೆ–"ಗೊಂತಾಂಡ್‌ಯಾ, ಮಂಗಟಾವ ಯೇರೆನ್? ಗೊಂತಾಂಡ್. ಉಂದೆಟ್ ದಾನೆ ದಾನೆ ಆಪುಂಡಂದ್ ತೂವಾ."

ಮೈರೆ–"ಗೊತ್ತಾಯಿತೇ, ಯಾರನ್ನು ಮಂಗಾಡಿಸುತ್ತಿ? ಗೊತ್ತಾಯಿತು. ಇದರಲ್ಲೇ ನೇನಾಗುತ್ತದೆಂದು ನೋಡುವಿ."

ಎಂದು ಹೀಗೆಲ್ಲ ಅವರವರೊಳಗೆ ಮಾತುಕಥೆಗಳು ನಡೆದು, ಮೈರೆಯು ಭೀಮರಾಯನ ಮನೆಗೆ ಬಂದಕೂಡಲೆ ಕೆರೆಬಳಿಯಲ್ಲಿ ನಡೆದ ವೃತ್ತಾಂತವೆಲ್ಲವನ್ನು ಅಂಬಾಬಾಯಿಯೊಡನೆ ಹೇಳಿದಳು. ಇತ್ತಲಾಗಿ ಸುಬ್ಬಿಯು ಅಮೃತರಾಯನಲ್ಲಿಗೆ ಬಂದು, ಜಲಜಾಕ್ಷಿಯೊಡನೆ, ಇಂದಿರಾಬಾಯಿಯು ಎಲ್ಲಿದ್ದಾಳೆಂದು ಮೈರೆಗೆ ಹೇಗೋ ಗುಟ್ಟು ಗೊತ್ತಾಗಿದೆ ಎಂದು ತಿಳಿಸಿದಳು. ಜಲಜಾಕ್ಷಿಯು ಆ ವರ್ತಮಾನವನ್ನು ಒಡನೆ ಗಂಡನಿಗೆ ತಿಳುಹಿಸಲು, ಅವನು, "ನೀನೇಕೆ ಹೆದರುತ್ತಿ? ಇಂದಿರೆಯನ್ನು ಯಾರೂ ಕಾಣದಂತೆ ಜಾಗ್ರತೆ ನೋಡಿಕೊಂಡಿರು. ಉಳಿದದ್ದಕ್ಕೆಲ್ಲ ನಾನಿದ್ದೇನೆ. ಲೇಶಮಾತ್ರ ಚಿಂತಿಸಬೇಡ, ಹುಡುಗಿಯನ್ನು ಬಿಟ್ಟುಕೊಟ್ಟೇನೆಂದು ಸ್ವಪ್ನದಲ್ಲಾದರೂ ಗ್ರಹಿಸಬೇಡ. ಇನ್ನು ಅವಳು ನಮ್ಮ ಮಗುವಲ್ಲದೆ ಬೇರೆ ಮಾತಿದೆಯೇ?" ಎಂದನು.

ಭೀಮರಾಯನು ಸಾಯಂಕಾಲಕ್ಕೆ ಮನೆಗೆ ಬರುತ್ತಲೆ ಅಂಬಾಬಾಯಿಯು ಮೈರೆಯಿಂದ ತಿಳಿದ ಸಂಗತಿಗಳೆಲ್ಲವನ್ನು ಅವನಿಗೆ ತಿಳುಹಿಸಿ, ಈಗಲೇ ಹೋಗಿ ಹುಡುಗಿಯನ್ನು ಕರೆದು ತರಬೇಕಾಗಿ ಛಲಹಿಡಿದಳು. ಅವನು ಕೂಡಲೇ ಹೊರಟು ದಾರಿನಡೆದು ಹೋಗುತ್ತಾ, 'ಅಮೃತರಾಯನೆಂದರೆ ಸಾಧಾರಣ ಮೂರ್ತಿಯಲ್ಲ. ಸರ್ವರಿಗೂ ಬೇಕಾದವನು. ಅವನ ಒಂದು ಮಾತಿಗೆ ನನ್ನ ಸಾವಿರ ಮಾತು ಈಡಲ್ಲ. ಒಂದು ವೇಳೆಗೆ ಹುಡುಗಿ ಅವನಲ್ಲಿದ್ದರೂ ನನ್ನನ್ನು ಕಂಡಕೂಡಲೆ ಸ್ಥಳಾಂತರ ಮಾಡಿದರೆ, ನಾನು ಅವನ ಮೇಲೆ ದೂಷಣೆ ಮಾತನಾಡಿದ ತಪ್ಪಿಗೆ ಗುರಿಯಾಗುವುದು ಮಾತ್ರವಲ್ಲದೆ ಬೇರೇನೂ ಫಲಸಿಕ್ಕದು. ಏನು ಮಾಡಲಿ' ಎಂದಾಲೋಚಿಸುತ್ತಾ ಅಮೃತರಾಯನಿದ್ದಲ್ಲಿಗೆ ಬಂದುಮುಟ್ಟಿದನು. ಅಮೃತರಾಯನು "ಓಹೋ! ಅಪರೂಪದಿಂದ ಸವಾರಿ ಬಂತು. ನಮ್ಮ ಮೇಲೆ ಇಷ್ಟು ಅನುಗ್ರಹ ಮಾಡಿದ್ದರ ಕಾರಣವೇನು? ಹೇಳೋಣಾಗಲಿ. ದೂಮಾ, ತಾಂಬೂಲದ ಹರಿವಾಣ ತಾರೆಲೊ" ಎಂದು ಆದರಿಸಿದನು. ಭೀಮರಾಯನು ವೀಳ್ಯ ಹಾಕಿಕೊಂಡು,

"ಸ್ವಾಮಿ, ತಮ್ಮಲ್ಲಿ ಒಂದು ಕಟ್ಟಿಗೆಯ ಕೊಟ್ಟಿಗೆ ಇದೆಯೇ?"

"ಇದೆ, ಏನಾಯಿತು? ನನ್ನಲ್ಲಿ ಒಂದಿದ್ದರೆ ನಿಮ್ಮಲ್ಲಿ ಎರಡಿರಬಹುದಷ್ಟೆ? ಅದೇನು ದೊಡ್ಡ ಮಾತು?"

"ಹಾಗಲ್ಲ, ಸ್ವಾಮಿ, ನಮ್ಮ ಇಂದಿರೆಯು ಅದರಲ್ಲಿ ಕಾಣಸಿಕ್ಕಿದಳಂತೆ, ಹೌದೆ?"

"ಹೌದು."

"ಆಕೆ ಈಗೆಲ್ಲಿ?"

"ಇಲ್ಲೇ ಮನೆಯಲ್ಲಿದ್ದಾಳೆ."

"ನನ್ನ ಸಂಗಡ ಕಳುಹಿಸುತ್ತೀರಷ್ಟೆ?"

"ಕಳುಹಿಸಲಾರೆನು. ನಿಮ್ಮ ಮತ್ತು ನಿಮ್ಮ ಹೆಂಡತಿಯ ಮದ್ದತ್ತಿನಿಂದ ಆ ಸಂತರು ಆ ಬಡ ಹುಡುಗಿಯ ಪತಿವ್ರತಾ ಧರ್ಮಕ್ಕೆ ಭಂಗಬರುವ ಹಾಗೆ ಅವಳ ಇಷ್ಟಕ್ಕೆ ವಿರೋಧವಾಗಿ– ಅಯ್ಯೋ! ಆ ದುಷ್ಕರ್ಮವನ್ನು ಹೇಳುವುದಕ್ಕೆ ನನಗೆ ಬಾಯಿ ಬರುವುದಿಲ್ಲ–

ಮೊದಲಿನ ನಿಮ್ಮ ಸಂಗತಿಗಳನ್ನು ಮರೆತು, ಪರರ ಮಗಳನ್ನು ಕೊಂಡುಹೋದವನಿಗೆ ಸಹಾಯಮಾಡಿ ಅದರಿಂದಲೂ ತೃಪ್ತಿಹೊಂದದೆ, ನಿಮ್ಮ ಸ್ವಂತ ಮಗಳನ್ನೇ ಸಂತರಿಗೆ ಕೊಡುತ್ತಿದ್ದಿರಷ್ಟೆ? ಅವಳ ತಲೆಯ ಒಂದು ಕೂದಲು ಸಹಾ ಸಿಕ್ಕದು. ಏನಿರೈಯಾ? ಎಷ್ಟು ದುಷ್ಕರ್ಮಗಳನ್ನು ಮಾಡಿದರೂ ಪ್ರತಿಫಲ ಸಿಕ್ಕದೆ ಹೋಗುವುದೆಂದು ಗ್ರಹಿಸುತ್ತೀರಾ? ಈ ಮೊಕದ್ದಮೆಯಲ್ಲಿ ನಿಮಗೂ ನಿಮ್ಮ ಹೆಂಡತಿಗೂ ಎಂತಹ ಗತಿ ಬರುವುದೆಂದು ಬೇಗನೆ ಗೊತ್ತಾಗುವುದು. ನಿಮ್ಮಿಬ್ಬರ ಸಮೇತ ಆ ಸಂತರ ಕೂಟವನ್ನೇ ಜೈಲಿಗೆ ಕಳುಹಿಸುವುದಕ್ಕೆ ಕೂಡುತ್ತದೋ ಇಲ್ಲವೋ ನೋಡುವೆನು. ಇಂದಿರೆ ಎಂದರೆ ಯಾರೆಂದು ತಿಳಿದಿದ್ದಿರಾ? ಅವಳ ಕಾಲು ತೊಳೆದು ಒಂದಿಷ್ಟು ನೀರನ್ನು ಕುಡಿದರೆ ನಿಮ್ಮ ಜನ್ಮ ಸಾರ್ಥಕವಾಗುವುದು. ಒಂದೇ ಕ್ಷಣಕ್ಕಾದರು ಹುಡುಗಿಯನ್ನು ಬಿಟ್ಟುಕೊಡಲಾರೆನು."

ಭೀಮರಾಯನು ಈ ಮಾತುಗಳನ್ನು ಕೇಳಿ ಕಳವಳಿಸಿ– "ಸ್ವಾಮಿ, ತಮಗೆ ಸಂತೋಷ ವಿದ್ದರೆ ಮಾತ್ರ ಹುಡುಗಿಯನ್ನು ಬಿಟ್ಟುಕೊಡಿರಿ. ಇಲ್ಲವಾದರೆ ನನ್ನ ತರ್ಕವಿಲ್ಲ."

"ನಿಮ್ಮ ತರ್ಕ! ಸುಡಬಾರದೇ ಈ ಬಾಳು? ಇಂದಿರೆಯಂತಹ ಮಗು ನೀವು ಜನ್ಮಾಂತರದಲ್ಲಿ ತಪಸ್ಸು ಮಾಡಿದರೂ ನಿಮಗೆ ಸಿಕ್ಕುವುದೆ? ಏನೊ ಅವಳ ಪೂರ್ವಕರ್ಮದ ಫಲದಿಂದ ನಿಮ್ಮಲ್ಲಿ ಹುಟ್ಟಿದ್ದಕ್ಕೆ ನೀವೇ ಅವಳಿಗೆ ಮೃತ್ಯುವಾದಿರಿ. ಇನ್ನೇನಾಗಬೇಕೆಂದು ನಿಮ್ಮಪೇಕ್ಷೆ? ಅವಳ ಹೊಗೆ ನೋಡುವ ವರೆಗೂ ಅವಳ ಮೇಲೆ ಸಾಧನೆಯುಂಟೇ? 'ನಮ್ಮ ಇಂದಿರೆ!'–ಯಾವ ಬಾಯಿಂದ ಹೇಗೆ ಹೇಳುತ್ತೀರಿ? ನಿಮ್ಮ ಇಂದಿರೆಯೊ ಯಾರ ಇಂದಿರೆಯೊ ಎಂದು ಬೇಗನೆ ತಿಳಿಯುವುದು."

"ಸ್ವಾಮಿ, ಸಿಟ್ಟಾಗಬೇಡಿರಿ. ಹುಡುಗಿಯು ನನ್ನ ಸಂಗಡ ಬರಬೇಕೆಂದಿಲ್ಲ. ನನ್ನನ್ನು ಮಾತ್ರ ಯಾವುದೊಂದೂ ಪೀಕಲಾಟದಲ್ಲಿ ಸಿಕ್ಕಿಹಾಕಬೇಡಿರಿ. ಅಪ್ಪಣೆಕೊಡಿರಿ, ನಾನು ಹೋಗುತ್ತೇನೆ" ಎಂದೆದ್ದು ನಮಸ್ಕಾರಮಾಡಿ, ಎಲೆ ಅಡಿಕೆಯ ಬಟುವೆಯನ್ನು ಹೆಗಲಮೇಲೆ ಹಾಕಿಕೊಂಡು ಮನೆಗೆ ತಿರುಗಿ ಬಂದು, ಅಂಬಾಬಾಯಿಯೊಡನೆ ನಡೆದ ವೃತ್ತಾಂತವೆಲ್ಲವನ್ನು ತಿಳುಹಿಸಲು, ಅವಳು– "ತಾವು ಯಕ್ಷಗಾನ ಪ್ರಸಂಗ ಹಾಡುವುದಕ್ಕೂ, ಉತ್ತರಕುಮಾರನಂತೆ ನನ್ನೆದಿರಿನಲ್ಲಿ ಬಡಾಯಿ ಕೊಚ್ಚುವುದಕ್ಕೂ ಹುರುಳಿಯ ತಾಳದ ತಿಂದು ಕಾಫಿ ಕುಡಿಯುವುದಕ್ಕೂ ಆದೀರಿ. ಮೀಸೆ ಹೊತ್ತ ಗಂಡಸಾದರೆ ಈ ಹೊತ್ತು ಮಗಳನ್ನು ಬಿಟ್ಟು ಬರುತ್ತಿದ್ದಿಲ್ಲ. ನಮ್ಮ ಮಗುವಿನ ಮೇಲೆ ಅವರಿಗೇನಂತೆ ಅಧಿಕಾರ? ತಮ್ಮ ಬಾಯಿಂದ ಇಷ್ಟೊಂದು ಮಾತಾದರೂ ಹೊರಡಲಿಲ್ಲವೆಂದು ತೋರುತ್ತೆ. ತಮ್ಮ ಸ್ಥಿತಿ 'ನಮ್ಮ ರಾಯರು ಬಾಯಿ ತೆರೆಯಬೇಕಾದರೆ ಜೋಡಿ ಇಕ್ಕಳು ಬೇಕು' ಎಂಬ ಗಾದೆಯಂತಲ್ಲದೆ ಮತ್ತೇನು? ನಾಳೆ ಬೆಳಿಗ್ಗೆ ನಾನೇ ಹೋಗಿ ಒಂದೇ ನಿಮಿಷದಲ್ಲಿ ಹುಡುಗಿಯನ್ನು ಕರೆದುಕೊಂಡು ಬರುವ ಬಗೆಯನ್ನು ನೋಡುವಿರಿ" ಎಂದು ಗಂಡನನ್ನು ನಾನಾತರವಾಗಿ ಜರೆದು ಮಾತನಾಡಿದಳು. ಭೀಮರಾಯನು, 'ಅಯ್ಯೋ! ನನ್ನ ಪ್ರಾಪ್ತಿಯೆ! ಯಾವ ಕಾಲು ಜಾರಿದರೂ ಕುಂಡೆಗೆ ಕೇಡು, ಎಂಬ ಗಾದೆಯಂತಾಯಿತಷ್ಟೆ ನನ್ನ ಬಾಳುವೆ!' ಎಂದು ತುಂಬಾ ವ್ಯಸನಪಟ್ಟನು.

## ೫೧

ಭೀಮರಾಯನು ಎದ್ದು ಹೋದಬಳಿಕ ಅಮೃತರಾಯನು ಮನೆಯೊಳಗೆ ಬಂದು, ಭೀಮರಾಯನಿಗೂ ತನಗೂ ನಡೆದ ಸಂಭಾಷಣೆಯ ವಿವರಗಳೆಲ್ಲವನ್ನು ಜಲಜಾಕ್ಷಿಯೊಡನೆ ಹೇಳಲು, ಅವಳು "ಅದೆಲ್ಲ ಸರಿಯಷ್ಟೆ. ಇಂದಿರೆಯ ತಾಯಿ ಎಂದರೆ ದೊಡ್ಡ ಶೂರ್ಪನಖಿಯೇ ತಾನೇ. ಒಂದು ವೇಳೆಗೆ ನಾಳೆಯೇ ಬಂದು ಮಗಳನ್ನು ಬಿಟ್ಟುಕೊಡಬೇಕಾಗಿ ತನ್ನ ಅವತಾರವನ್ನು ತೋರಿಸಿಬಿಟ್ಟರೆ ಮಾಡತಕ್ಕದ್ದೇನು?" ಎಂದು ಕೇಳಲು, "ಅದನ್ನೆಲ್ಲ ನಾಳೆ ನೋಡಿಕೊಳ್ಳಬಹುದು. ಪ್ರಥಮತಃ ಇಂದಿರೆಯ ಮನಸ್ಸು ಹೇಗೆಂದು ನೋಡೋಣ, ಬಾ" ಎಂದು ಜಲಜಾಕ್ಷಿಯ ಸಮೇತ ಬಂದು, ಇಂದಿರಾಬಾಯಿಯನ್ನು ಕುರಿತು–

"ಏನೇ? ನಿನ್ನ ತಂದೆಯು ಈಗಲೇ ಇಲ್ಲಿಗೆ ಬಂದು ಹೋದನು. ತಾಯಿ ನಾಳೆ ಬರುವಳೇನೊ."

"ನನಗೀಗ ತಾಯಿತಂದೆಗಳೆಂದರೆ ನೀವಿಬ್ಬರೇ ಎಂದು ನಂಬಿದ್ದೇನೆ."

"ಭೀಮರಾಯ, ಅಂಬಾಬಾಯಿ, ಇವರೊ?"

"ಅವರ ಉದರದಲ್ಲಿ ನಾನು ಜನಿಸಿದೆ. ಆ ಬಗೆಯಲ್ಲಿ ಮಾತ್ರ ಅವರು ಸಹ ತಂದೆತಾಯಿಗಳು."

"ನೀನೇಕೆ ಹೀಗೆ ಮಾತನಾಡುತ್ತಿ? ಅಂಬಾಬಾಯಿಯು ನಿನ್ನನ್ನು ಒಂಭತ್ತು ತಿಂಗಳು ಗರ್ಭದಲ್ಲಿ ಹೊರಲಿಲ್ಲವೆ?"

"ಹೊತ್ತಳು."

"ಆ ಬಳಿಕ ಬುದ್ಧಿಯೂ ಪ್ರಾಯವೂ ತುಂಬುವ ವರೆಗೆ ನಿನ್ನನ್ನು ಅಕ್ಕರೆಯಿಂದ ಸಾಕಿ ಸಂರಕ್ಷಿಸಲಿಲ್ಲವೆ?"

"ಒಬ್ಬ ಕಟುಕರವನು ಆಡಿನ ಮರಿಯನ್ನು ಅದು ಹುಟ್ಟಿದಂದಿನಿಂದ ಅಕ್ಕರೆಯಿಂದ ಸಾಕಿ, ಬೆಳೆಯಿಸಿ, ಕಡೆಗೇನು ಮಾಡುವನು? ನನ್ನ ಗತಿಯೂ ಹಾಗೆಯೇ ಆಗಲಿಲ್ಲವೆ?"

"ಅಂಬಾಬಾಯಿಯು ನಿನ್ನನ್ನು ಕರೆದುಕೊಂಡು ಹೋಗುವುದಕ್ಕೆ ಬರುತ್ತಾಳೇನೋ."

"ನೀವು ನನ್ನನ್ನು ಬಿಟ್ಟುಹಾಕಲಿಕ್ಕಿಲ್ಲವೆಂದು ನನ್ನ ನಂಬಿಕೆ."

"ಅಂಬಾಬಾಯಿಯು ಬಾ ಎಂದು ನಿನ್ನನ್ನು ಬಹುತರವಾಗಿ ಹೇಳಿದರೇನು ಮಾಡುವಿ?"

"ಏನು ಮಾಡುವುದುತ್ತಮ? ಇದೇನಪ್ಪಯ್ಯಾ! ನನ್ನ ಮನಸ್ಸನ್ನು ಪರೀಕ್ಷಿಸಿ ನೋಡುತ್ತಿಯಾ? ನೀನೇ ನನ್ನ ತಂದೆ, ಇವಳೇ ನನ್ನ ತಾಯಿ" ಎಂದು ಜಲಜಾಕ್ಷಿಯನ್ನು ಅಪ್ಪಿ ಹಿಡಿದುಕೊಂಡು "ಅವ್ವಾ, ನಾನು ಅನಾಥೆಯಾಗಿ ಬಂದು ನಿಮ್ಮ ಮರೆಹೊಕ್ಕಿದೆನು. ನನ್ನ ಬಿಟ್ಟು ಹಾಕಬಾರದಷ್ಟೆ" ಎಂದು ನಿಟ್ಟುಸುರಿಟ್ಟಳು. ಆಗ ಜಲಜಾಕ್ಷಿಯು, "ಅವ್ವಾ, ನಿನ್ನ ಮನಸ್ಸಿನ ಸ್ಥಿತಿಯನ್ನು ಪರೀಕ್ಷಿಸಿ ನೋಡುವುದಕ್ಕೆ ಹೀಗೆಲ್ಲ ಮಾತನಾಡಿದ್ದು. ದುಃಖಿಸಬೇಡ. ನಿನ್ನನ್ನು ಎಂದೆಂದಿಗೂ ಬಿಟ್ಟುಹಾಕುವುದುಂಟೆ? ನಾಳೆ ಅಂಬಾಬಾಯಿ ಬಂದು ಕರೆದರೆ, ಬರಲಾರೆನೆಂದು

ಖಂಡಿತವಾಗಿ ಹೇಳಿಬಿಡು” ಎಂದು ಸಂತೈಸಿ, ತನ್ನ ಸೀರೆಯ ಸೆರಗಿನಿಂದ ಅವಳ ಕಣ್ಣುಗಳನ್ನೊರಸಿದಳು.

ರಾತ್ರಿಯಾಯಿತು. ಊಟ ತೀರಿಸಿ ಎಲ್ಲರೂ ಅಲ್ಲಲ್ಲಿ ಮಲಗಿಕೊಂಡರು. ಅಮೃತರಾಯನು ಹೆಂಡತಿಯೊಡನೆ– “ಇಂದಿರೆಯೆಂದರೆ ಒಂದು ರತ್ನವಲ್ಲವೆ? ಎಂತಹ ಬುದ್ಧಿ! ವಿದ್ಯೆ ಇಲ್ಲದೇನೆ ಅವಳಲ್ಲಿಷ್ಟು ಜಾಣತನವಿರುವುದಾದರೆ ವಿದ್ಯೆ ಪ್ರಾಪ್ತಿಯಾದರೆ ಆಕೆಯ ಬುದ್ಧಿವಂತಿಕೆಗೆ ಮಿತಿ ಇರುವುದೆ?”

“ವಿಹಿತವೇ. ಆದರೆ ಅವಳಿಗೆ ವಿದ್ಯಾಪ್ರಾಪ್ತಿಗೆ ಮಾರ್ಗವೆಲ್ಲಿ? ಮನೆಯಲ್ಲೇ ಕುಳಿತರೆ ವಿದ್ಯಾಪ್ರಾಪ್ತಿಯಾಗಲಾರದಷ್ಟೆ?”

“ಅದಕ್ಕೆ ನಾನು ಬೇಕಾದ ಉಪಾಯಗಳನ್ನೆಲ್ಲ ಆಲೋಚಿಸಿಟ್ಟಿದ್ದೇನೆ. ಸತಾರಾನಗರದಲ್ಲಿ ಪಂಡಿತಾ ಆನಂದಿಬಾಯಿಯು ಸರಸ್ವತಿ ಮಂದಿರವೆಂಬ ವಿದ್ಯಾ ಶಾಲೆಯನ್ನು ಸ್ಥಾಪಿಸಿ ಚಿಕ್ಕಪ್ರಾಯದ ವಿಧವೆಯರಿಗೆ, ಇಂಗ್ಲಿಷ, ಸಂಸ್ಕೃತವೇ ಮುಂತಾದ ಭಾಷೆಗಳನ್ನೂ, ಗಣಿತಶಾಸ್ತ್ರ, ಚರಿತ್ರ, ಸ್ತ್ರೀಧರ್ಮ ನೀತಿ ಇವೆ ಮುಂತಾದ ಅನೇಕ ವಿಷಯಗಳನ್ನೂ ಕಲಿಸುತ್ತಾಳೆ. ಇಂದಿರೆಯನ್ನು ಅಲ್ಲಿಗೆ ಕಳುಹಿಸುವುದೆಂದು ನಿಶ್ಚಯಿಸಿ, ಆನಂದಿಬಾಯಿಗೂ ಅಲ್ಲಿರುವ ನನ್ನ ಸ್ನೇಹಿತರಿಗೂ ಪತ್ರಗಳನ್ನು ಬರೆದಿದ್ದೇನೆ. ನಾಡದು ಇಲ್ಲಿಗೆ ಬರುವ ಹೊಗೆ ಹಡಗದಲ್ಲಿ ಇಂದಿರೆಯನ್ನು ಕಳುಹಿಸುತ್ತೇನೆ.”

“ಹುಡುಗಿಯು ಅಲ್ಲಿ ಸುಖದಿಂದಿರಬಹುದಷ್ಟೆ?”

“ಅಲ್ಲಿ ಯಾವುದೊಂದು ಉಪದ್ರವವೂ ಇರಲಾರದು. ಅಲ್ಲಿ ಅವಳು ಎರಡು ವರುಷ ಕಲಿತು ಪರೀಕ್ಷೆಯಲ್ಲಿ ತೇರ್ಗಡೆ ಪಡೆದ ಮೇಲೆ ತಿರುಗಿ ಇಲ್ಲಿಗೆ ಕರೆಯಿಸಿಕೊಳ್ಳುವುದೆಂದು ಆಲೋಚಿಸಿದ್ದೇನೆ.”

“ಹಾಗಾಗಲಿ. ಹುಡುಗಿಯನ್ನು ನಾವು ಕಡೆಯ ವರೆಗೆ ಆದರಿಸಿ ಅವಳು ಒಳ್ಳೇ ಸ್ಥಿತಿಯಲ್ಲಿರಬೇಕಾದ್ದೇ ಮುಖ್ಯ ವಿಷಯವಾಗಿದೆ” ಎಂದು ದಂಪತಿಗಳು ಮಾತನಾಡಿ ನಿಶ್ಚಯಿಸಿದರು.

ರಾತ್ರಿ ಕಳೆದು ಬೆಳಗಾಯಿತು. ಮೈರೆಯನ್ನು ಸಂಗಡ ಕರೆದುಕೊಂಡು ಅಂಬಾಬಾಯಿಯು ಜಲಜಾಕ್ಷಿ ಇದ್ದಲ್ಲಿಗೆ ಬರಲು, ಅವಳು ಆದರಾತಿಶಯದೊಡನೆ “ಬನ್ನಿರವ್ವಾ ಕುಳ್ಳಿರಿ” ಎಂದುಪಚರಿಸಿ, ಅಡಿಗೆಯನಾದ ಶ್ರೀನಿವಾಸನನ್ನು ಕರೆದು, ಅವನಿಂದ ಕಾಫಿ ಫಲಾಹಾರವನ್ನು ತರಿಸಿಟ್ಟಳು. ಆಗ ಅಂಬಾಬಾಯಿಯು– “ನಾನು ಉಪಚಾರಗಳನ್ನೆಲ್ಲ ಅನುಭವಿಸುವುದಕ್ಕೆ ಬಂದವಳಲ್ಲ. ಮಗುವನ್ನು ಕರೆದುಕೊಂಡು ಹೋಗುವುದಕ್ಕೆ ಬಂದವಳು. ಇಂದಿರೆ ಎಲ್ಲಿ?” ಎಂದು ಕೇಳಿದಳು. “ಅವಳಿಲ್ಲೇ ಇದ್ದಾಳೆ. ಕರೆದುಕೊಂಡು ಹೋಗಬಹುದಷ್ಟೆ. ಫಲಾಹಾರ ಮಾಡಿರಿ” ಎಂದು ಜಲಜಾಕ್ಷಿಯು ಪುನಃ ಉಪಚರಿಸಿ ಫಲಾಹಾರ ಮಾಡಿಸಿದಳು. ಆ ಬಳಿಕ ಮತ್ತೊಂದು ಕೋಣೆಯಲ್ಲಿದ್ದ ಇಂದಿರೆಯನ್ನು ಕರೆದು, “ಇತ್ತ ಬಾರೆ, ಇಗೋ ನಿನ್ನ ತಾಯಿ ಬಂದಿದ್ದಾರೆ, ಮಾತನಾಡು” ಎಂದು ಹೇಳಲು, ಅವಳು ಬಂದು ಸಮೀಪದಲ್ಲಿ ಕುಳಿತುಕೊಂಡಳು. ಅಂಬಾಬಾಯಿಯು ಆಕೆಯನ್ನು ನೋಡಿ,

"ಓಹೋ! ಒಳ್ಳೇ ಮೋಜು! ತಲೆ ಬಾಚಿ ಜಡೆ ಕಟ್ಟಿದೆ! ಓಹೋ! ಗದಗಿನ ಸೀರೆ! ಧಡಾಕು! ರೇಶ್ಮೆ ಕುಪ್ಪಸ! ಇನ್ನೇನು ಕಡಿಮೆ! ಸಾಮ್ರಾಜ್ಯವನ್ನೆಲ್ಲ ವಿವರಿಸಿ ಹೇಳಬಾರದೆ? ಚಪ್ರಮಂಚ, ಹಾಸಿಗೆ ದಿಂಬುಗಳೆಲ್ಲಿ? ಆ ಕೋಣೆಯಲ್ಲಿವೆ ಏನೊ! ಝುಮ್ಮರುಗಳೂ ಗ್ಲಾಸುಗಳೂ ಎಷ್ಟಿವೆ? ಮೈಕೈಕಾಲುಗಳನ್ನು ಹಿಸುಕುವುದಕ್ಕೆ ದಾಸಿಯರು ಎಷ್ಟು ಮಂದಿ ಇದ್ದಾರೆ?"

ಇಂದಿರೆಯು ಉತ್ತರ ಕೊಡದೆ ಸುಮ್ಮಗೆ ಕುಳಿತುಕೊಂಡಳು. ಅಂಬಾಬಾಯಿಯು ಪುನಃ–

"ಏನೇ? ಮಾತನಾಡುವುದಿಲ್ಲ? ಈ ಸಾಮ್ರಾಜ್ಯವನ್ನನುಭವಿಸುವುದರಲ್ಲಿ ನಮ್ಮೆಲ್ಲರನ್ನು ಮರೆತೆಯಾ?"

"ನಿನ್ನನ್ನು ನಾನು ಹೇಗೆ ಮರೆಯಲಿ!"

"ನಿನ್ನನ್ನು ಒಂಭತ್ತು ತಿಂಗಳು ಹೊಟ್ಟೆಯಲ್ಲಿ ಹೊತ್ತವಳ್ಯಾರು?"

"ನೀನೇ."

"ಆ ಮೇಲೆ ನೀನು ಚಿಕ್ಕ ಮಗುವಾಗಿದ್ದಾಗ ಲಾಲಿಸಿಪಾಲಿಸಿದವಳ್ಯಾರು?"

"ನೀನೇ."

"ನಿನಗೊಂದು ಕ್ಷಣಕ್ಕೆ ತುಸು ತಲೆ ನೋವೆಂದಾಗ, ಅಯ್ಯೋ! ಕುಯ್ಯೋ! ಎಂದು ವ್ಯಸನಪಟ್ಟು, ಆ ವೈದ್ಯನನ್ನು ತಾ, ಈ ವೈದ್ಯನನ್ನು ತಾ ಎಂದು ಅತ್ತಿತ್ತ ಸೇವಕರನ್ನೋಡಿಸಿ ವೈದ್ಯನನ್ನು ಕರೆಯಿಸಿ ಬೇಕಾದ ಔಷಧೋಪಚಾರಗಳನ್ನು ಮಾಡಿಸಿ ಆರೈಕೆ ನೋಡಿದವಳ್ಯಾರು?"

"ನೀನೇ."

"ಇಷ್ಟು ಅಕ್ಕರೆಯಿಂದ ನಿನ್ನನ್ನು ಸಾಕಿ ಬೆಳೆಯಿಸಿದ್ದೇಕೆ?"

(ಇಂದಿರೆಯು ಉತ್ತರ ಕೊಡಲಿಲ್ಲ.)

"ಏಕೆ? ಹೇಳು, ನಾಲಿಗೆ ತಿರುಗುವುದಿಲ್ಲವೆ?"

"ನಾಲಿಗೆ ಈ ವರೆಗೆ ದೇವರ ದಯದಿಂದ ಸರಿಯಾಗಿ ತಿರುಗುತ್ತೆ."

"ಹಾಗಾದರೆ ಥಟ್ಟನೆ ಹೇಳು."

"ಹೇಳಲೇ?"

"ಹೇಳು."

"ನನ್ನನ್ನು ಸಂತರಿಗೆ ಬಲಿಕೊಡುವುದಕ್ಕೆ."

"ಇದನ್ನೆಲ್ಲ ಎಲ್ಲಿಂದ ಕಲಿತೆ?"

"ಅಲ್ಲೇ, ಮನೆಯಲ್ಲಿ ತಾನೇ."

ಅಂಬಾಬಾಯಿಯು "ಹೂಂ!" ಎಂಬ ದೀರ್ಘವಾದ ಒಂದು ಶ್ವಾಸವನ್ನು ಬಿಟ್ಟು "ಪ್ರಾಚೀನ ಕರ್ಮ! ಅಡಿಕೆಯಾಗಿದ್ದಾಗ ಉಡಿಯಲ್ಲಿಡಬಹುದು. ಮರವಾದ ಮೇಲೆ ಹೇಗಿಡುವುದು!–ಅದೆಲ್ಲ ಹಾಗಿರಲಿ, ಈಗ ನನ್ನ ಸಂಗಡ ಮನೆಗೆ ಬಾ, ಎದ್ದೇಳು."

"ಏಕೆ? ಸಂತರು ಕಾಯುತ್ತಿದ್ದಾರೇನು?"

"ಸಾಕು! ಸಾಕು! ಬಾಯಿಮುಚ್ಚು! ಮಿತಿಮೀರಿ ಜಾಣತನ ತೋರಿಸಬೇಡ,– ಎದ್ದೇಳು."

"ನಾನು ಸರ್ವಥಾ ಬರಲಾರೆನು."

"ನಾನು ನಿನ್ನ ತಾಯಿಯಲ್ಲವೆ?"

"ತಾಯಿಯಾದರೆ ನನ್ನನ್ನು ಸಂತರಿಗೆ ಬಲಿಕೊಡುತ್ತಿದ್ದೆಯಾ?"

"ನಿನ್ನೆ ಯಜಮಾನರಿಲ್ಲಿಗೆ ಬಂದವರು ನಿನ್ನನ್ನು ಕಂಡು ಮಾತನಾಡಿದರೆ?"

"ಅವನೇಕೆ ನನ್ನನ್ನು ಕಂಡು ಮಾತಾಡುವನು? ನಾನು ಮಗಳೆಂದು ಅವನ ಮನಸ್ಸಿನಲ್ಲಿರುತ್ತಿದ್ದರೆ ಕಂಡು ಮಾತನಾಡುತ್ತಿದ್ದನು."

"ಇದೇನು ಒಟ್ಟಿನಲ್ಲಿ ನಿನ್ನ ಸ್ಥಿತಿ ಹೀಗಾಯಿತು? ಉಪದೇಶವು ಚೆನ್ನಾಗಿ ಬೇರ್ಗೊಂಡಿದೆಯೆ?"

"ನನಗೆ ಉಪದೇಶ ತಾಗುತ್ತಿದೆಯೆ? ನೀನಲ್ಲವೆ ನನ್ನನ್ನು ಸಂತಧರ್ಮೋಪದೇಶವನ್ನು ಕೊಡಿಸಲಿಕ್ಕೆ ಹಗಲು ರಾತ್ರಿ ಪ್ರಯತ್ನಿಸಿದ್ದು? ಆ ಉಪದೇಶ ನನಗೆ ತಾಗಿತೆ?"

"ನೀನೀಗ ಬರುತ್ತಿಯೋ ಇಲ್ಲವೋ?"

"ಬರುವುದಿಲ್ಲ."

"ನಿಶ್ಚಯವೇ?"

"ನಿಶ್ಚಯವೇ."

"ಮತ್ತೆ ಪಶ್ಚಾತ್ತಾಪ ಪಡುವಿ."

"ಎಂದೆಂದಿಗೂ ಪಶ್ಚಾತ್ತಾಪ ಪಡಲಾರೆನು."

ಈ ಮಾತುಗಳನ್ನು ಕೇಳಿ, ಅಂಬಾಬಾಯಿಯು ಅಪರಿಮಿತ ಸಿಟ್ಟಿನಿಂದ ಥಟ್ಟನೆ ಎದ್ದು ನೆಟ್ಟಗೆ ಮನೆಗೆ ಹೋಗಿ ಪತಿಯನ್ನು ಕಂಡು, "ಹುಡುಗಿ ಹೋದಲೆಕ್ಕದಲ್ಲೇ. ನನ್ನ ಉಪಾಯಗಳೂ ನಡೆಯಲಿಲ್ಲ. ನನ್ನ ಸಂಗಡ ಮನೆಗೆ ಬರಲಾರೆನೆಂದು ಕಂಡಾತುಂಡವಾಗಿ ಹೇಳಿಬಿಟ್ಟಳು. ನಮ್ಮ ಪ್ರಾಪ್ತಿ! ನಿನ್ನೆ ನಾನು ತಮ್ಮನ್ನು ಸುಮ್ಮಗೆ ಜರೆದು ಮಾತನಾಡಿದೆ. ಆ ಅಪರಾಧವನ್ನು ಕ್ಷಮಿಸಬೇಕಷ್ಟೆ" ಎಂದು ಹೇಳಿ, ಕೆಲವು ಸಮಯದವರೆಗಿಬ್ಬರೂ ಚಿಂತಿಸಿ ಮತ್ತೆ ಸುಮ್ಮಗಾದರು.

## ೫೨

ಅಂಬಾಬಾಯಿ, ಇಂದಿರಾಬಾಯಿ ಇವರ ಸಂಭಾಷಣೆಯನ್ನು ಅಮೃತರಾಯನು ಹೊರಗಿನಿಂದ ಕೇಳಿದ್ದನು. ಅಂಬಾಬಾಯಿಯು ಹೋದಬಳಿಕ ಅಮೃತರಾಯನು ಕೋಣೆಯೊಳಗೆ ಹೋಗಿ, ಇಂದಿರಾಬಾಯಿಯನ್ನು ಸರಸ್ವತಿ ಮಂದಿರಕ್ಕೆ ಕಳುಹಿಸಿಕೊಡುವ ಆಲೋಚನೆಯನ್ನೂ ಹಾಗೆ ಕಳುಹಿಸುವುದರಿಂದೇನು ಪ್ರಯೋಜನವೆಂಬುದನ್ನೂ ಅವಳಿಗೆ ವಿವರಿಸಿ ಹೇಳಲು,

ಅವಳು ಮನಸ್ಸಿನಲ್ಲಿ ಬಹಳ ಸಂತೋಷಪಟ್ಟು, ಹಾಗಾಗಲೆಂದು ಹೇಳಿದಳು. ಮರುದಿವಸ ಹೊಗೆಹಡಗು ಬಂತು. ಅಮೃತರಾಯನು ಇಂದಿರಾಬಾಯಿಗೆ ಉಡಿಗೆಯೆ ಮುಂತಾದ ಬೇಕಾದ ಎಲ್ಲಾ ವಸ್ತುಗಳನ್ನು ಕೊಟ್ಟು, ಅವಳನ್ನು ಆನಂದಿಬಾಯಿ ಇರುವಲ್ಲಿವರೆಗೆ ಮುಟ್ಟಿಸಿ ಬರುವಂತೆ ಒಬ್ಬ ಗಂಡಸು ಒಬ್ಬ ಹೆಂಗಸು, ಹೀಗೆ ಎರಡು ಮಂದಿ ಸೇವಕರನ್ನು ಸಂಗಡ ಕೊಟ್ಟು ಹೊರಡಿಸಲು, ಅವಳು ಜಲಜಾಕ್ಷಿಯ ಕಾಲುಗಳನ್ನು ಹಿಡಿದು ನಮಸ್ಕರಿಸಿ "ಅವ್ವಾ ಹೋಗಿ ಬರುತ್ತೇನೆ" ಎಂದು ಹೇಳಿ, ಹೊರಗೆ ಹೋಗುತ್ತಲೇ ಅಮೃತರಾಯನು ತಾನೇ ಅವಳ ಸಂಗಡ ಹಡಗದ ವರೆಗೆ ಹೋಗಿ ಮುಟ್ಟಿಸಿ, ಮನೆಗೆ ತಿರುಗಿ ಬರುವುದಕ್ಕೆ ಹೊರಟಾಗ, ಇಂದಿರಾಬಾಯಿಯನ್ನು ಕರೆದು "ಮಗುವೇ, ನಾನು ನಿನ್ನನ್ನು ಕಳುಹಿಸಿದ್ದು ಸಾರ್ಥಕವಾಯಿತೆಂದು ಹೇಳಿಸುವೆ ಎಂದು ನಂಬುತ್ತೇನೆ" ಎನ್ನಲು, "ಅದು ಮುಂದೆ ತಿಳಿಯುವುದು" ಎಂದುತ್ತರ ಕೊಟ್ಟು, ಸಂತೋಷವೂ ದುಃಖವೂ ಬೆರಕೆಯಾದುದರಿಂದುಂಟಾದ ಒಂದು ವಿಧದ ಕಳವಳದಿಂದ ಹೆಚ್ಚು ಮಾತನಾಡಕೂಡದೆ ಅವನನ್ನು ನಮಸ್ಕರಿಸಿ, "ಹೋಗಿ ಬರುತ್ತೇನೆ" ಎಂದಳು. ಅಮೃತರಾಯನು ಮನೆಗೆ ತಿರುಗಿ ಬಂದು, ವಿವರಗಳನ್ನು ಹೆಂಡತಿಗೆ ತಿಳಿಸಿದನು.

ಕೆಲವು ದಿವಸಗಳು ಹೋದವು. ಮಗಳನ್ನು ಪುನಃ ಮನೆಗೆ ಕರೆದುತರುವುದಕ್ಕೆ ಕೂಡದಿದ್ದ ದೆಸೆಯಿಂದುಂಟಾದ ಮನೋವ್ಯಥೆಯನ್ನು ಸೈರಿಸಕೂಡದೆ, ಒಂದು ದಿವಸ ಅಂಬಾಬಾಯಿಯು ಗಂಡನನ್ನು ಒತ್ತಟ್ಟಿಗೆ ಕರೆದು "ಈಗೇನು? ಇದ್ದ ಒಬ್ಬ ಹುಡುಗಿಯನ್ನು ಕಳೆದುಕೊಂಡು, ಸುಮ್ಮಗೆ ಕೂಡ್ರುವುದೆಂದು ಮಾಡಿದ್ದೀರಾ?" ಎಂದು ಪ್ರಶ್ನೆಮಾಡಲು, ಅವನು "ನಾನು ಮಾಡಬೇಕಾದ್ದೇನೆಂದು ಹೇಳು, ನನಗೆ ಸಾಮರ್ಥ್ಯ ಸಾಲದೆಂದು ನೀನೇ ಹೋಗಿ ಪ್ರಯತ್ನಿಸಿದೆಯಷ್ಟೆ? ನಿನ್ನಿಂದಲೂ ಸಾಧ್ಯವಾಗಲಿಲ್ಲ. ಇನ್ನೇನು ಮಾಡಬೇಕೆಂದು ನನಗೆ ಸೂಚಿಸುವುದಿಲ್ಲ" ಎಂದುತ್ತರ ಕೊಟ್ಟದ್ದನ್ನು ಕೇಳಿ,

"ಆ ದಿವಸ ಸಂತ ಬಾಳಪ್ಪಯ್ಯನು ಕಲ್ಯಾಣಿ ಎಂಬ ಹುಡುಗಿಯನ್ನು ಕೊಂಡುಹೋದನೆಂದು ಮೊಕದ್ದಮೆಯಾಗಿ ಅವನನ್ನು ಜೈಲಿಗೆ ಕಳುಹಿಸಿದರಷ್ಟೆ? ಈತ ಅಮೃತರಾಯನು ಏಕೆ ಜೈಲಿಗೆ ಹೋಗಬಾರದು?"

"ಕಲ್ಯಾಣಿಯ ವಿದ್ಯಮಾನಗಳೇ ಬೇರೆ. ಇಂದಿರೆಯ ವಿದ್ಯಮಾನಗಳೇ ಬೇರೆ."

"ಅಮೃತರಾಯನು ಹುಡುಗಿಯನ್ನು ಪುಸಲಾಯಿಸಿಕೊಂಡು ಹೋದ್ದೆಂದು ಎರಡು ಸಾಕ್ಷಿಗಳಿಂದ ನುಡಿಸುವುದೇನು ಅಗಾಧವೆ?"

"ಅಪ್ಪಪ್ಪಾ! ಅದು ಹೇಗೊ! ಪ್ರಥಮತಃ ಅಮೃತರಾಯನ ಮೇಲೆ ಸಾಕ್ಷಿ ಹೇಳುವುದ್ಯಾರು!"

"ಅದನ್ನು ತಾವೇ ಗೊತ್ತುಮಾಡಬೇಕು. ಹೆಂಗಸಾದ ನನ್ನ ಹತ್ತಿರ ಕೇಳುವುದೇನು?"

"ಒಂದು ವೇಳೆ ಸಾಕ್ಷಿಗಾರರು ಸಿಕ್ಕಿ, ಅಮೃತರಾಯನ ಮೇಲೇನಾದರೂ ಸಾಕ್ಷಿ ನುಡಿದರೂ ಅದನ್ನು ನಂಬುವುದ್ಯಾರು? ಅಮೃತರಾಯನು ಸಾಮಾನ್ಯದ ಮನುಷ್ಯನೇನಲ್ಲ.

ನೀನೇಕೀಗಿಷ್ಟು ವ್ಯಥೆಪಡುವುದು? ಹುಡುಗಿಯು ಈಗ ಸುಖದಲ್ಲಿದ್ದಾಳಷ್ಟೆ? ಕಾಲಕ್ರಮದಲ್ಲೇನಾದರೂ ಉಪಾಯ ದೊರಕಿದರೆ,"

"ಅವಳನ್ನು ಸತಾರೆಗೋ ಎಲ್ಲಿಗೋ ಕಳುಹಿಸಿದರೆಂದು ಕೇಳಿದ್ದೇನೆ. ಜಾತಿ ಕೆಡುವಳೊ ಏನೊ?"

"ಕುಲಗೆಟ್ಟರೂ ಸುಖಪಡೆಯಬೇಕೆಂಬ ಗಾದೆ. ನಾವು ಸದ್ಯ ಸುಮ್ಮಗಿರುವುದೇ ಒಳ್ಳೇದೆಂದು ಗ್ರಹಿಸುತ್ತೇನೆ."

"ಕುಲಗೆಡದೆ ಸುಖಪಡೆಯಬಹುದಾದ ಮಾರ್ಗವನ್ನು ನಾವಿಲ್ಲಿ ತೋರಿಸಿಕೊಟ್ಟಿದ್ದೆವಷ್ಟೆ?"

"ಅದು ಆಕೆಯ ಮನಸ್ಸಿಗೆ ಬರಲಿಲ್ಲವೆಂದಮೇಲೆ ಯಾರೇನು ಮಾಡಬಹುದು?"

"ಅಯ್ಯೋ! ವಿಧಿಯೇ! ಹೊನ್ನು ಕೈಯಲ್ಲಿ ಹಿಡಿದರೆ ಮಣ್ಣಾಗುವ ಕಾಲ ಬಂತಷ್ಟೆ?"

"ಮಾಡತಕ್ಕದೇನು! ಬಂದ ದಿವಸಗಳನ್ನು ಕಳೆಯೋಣ. ನಮ್ಮ ದಶಾನಾಥನೇ ನಮ್ಮ ಮೇಲೆ ಮುನಿದಿದ್ದಾನೇನೊ. ವೃಥಾ ವ್ಯಥೆಪಡಬೇಡ" ಎಂದು ಹೆಂಡತಿಯನ್ನು ಸಂತೈಸಿದನು.

ದಿವಸ ಹೋಗುತ್ತಾ ಹೋಗುತ್ತಾ ಇಂದಿರಾಬಾಯಿಯ ತಾಯಿ ತಂದೆಗಳು ಅವಳನ್ನು ಮರೆಯುತ್ತಾ ಬಂದರು. ಅವಳು ಸರಸ್ವತಿ ಮಂದಿರದಲ್ಲಿ ಹಗಲಿರುಳು ಮನಸ್ಸು ಕೊಟ್ಟು ಕಲಿಯುತ್ತಾ, ಬೇರೆ ಯಾವ ವಿಷಯಗಳ ಕಡೆಗೂ ಲಕ್ಷ್ಯಕೊಡದೆ ಪಾಠಗಳನ್ನು ಚೆನ್ನಾಗಿ ಕಲಿತು ಒಪ್ಪಿಸುತ್ತಾ ಆನಂದಿಬಾಯಿಯ ಪ್ರೀತಿಯನ್ನು ಗಳಿಸಿ, ತಾನಿಂತಿಂತಹ ವಿಷಯಗಳನ್ನೇ ಕಲಿಯುತ್ತಿದ್ದೇನೆಂದು ಆಗಾಗ್ಗೆ ಪತ್ರಗಳನ್ನು ಬರೆದು ಅಮೃತರಾಯ ಜಲಜಾಕ್ಷಿಗೂ ಸಂತೋಷಪಡಿಸಿ, ಹೆಚ್ಚು ಹೆಚ್ಚು ಕಲಿಯುತ್ತಾ ಕೊಟ್ಟ ಕೊಟ್ಟ ಪರೀಕ್ಷೆಗಳಲ್ಲಿ ಜಯಿಸಿ, ಎರಡು ವರುಷದೊಳಗೆ ಮೆಟ್ರಿಕ್ಯುಲೇಶನ್ ಎಂಬ ಪರೀಕ್ಷೆಯನ್ನು ಕೊಟ್ಟು, ಆ ವಿದ್ಯಾಶಾಲೆಯ ಹುಡುಗಿಯರಲ್ಲಿ ಮೊದಲನೆಯವಳಾಗಿ ತೇರ್ಗಡೆಹೊಂದಿದಳು. ಈ ವರ್ತಮಾನವು ಅವಳು ಬರೆದ ಪತ್ರದಿಂದಲೂ ವರ್ತಮಾನಪತ್ರಗಳಿಂದಲೂ ಅಮೃತರಾಯನಿಗೂ ಊರಜನರಿಗೂ ಗೊತ್ತಾಗಿ ಎಲ್ಲರೂ ಸಂತೋಷಪಟ್ಟು, ಅನೇಕರು "ಶಾಭಾಸು! ಶಾಭಾಸು!" ಎಂದು ಹೊಗಳಿದರು. ಭೀಮರಾಯ, ಅಂಬಾಬಾಯಿ ಮಾತ್ರ "ಪಾಸು ಮಾಡಿದಳಂತೆ. ಇನ್ನು ಕಲೇಕಟ್ರಿಯ ಉದ್ಯೋಗಕ್ಕೆ ಬರುತ್ತಾಳೋ, ಅಲ್ಲ, ಕಲೇಕಟ್ರನ ಹೆಂಡತಿಯಾಗಿ ಬರುತ್ತಾಳೋ ನೋಡಬೇಕು. ಅದೊಂದು ಸೊಗಸು ನೋಡಲಿಕ್ಕಿದೆ" ಎಂದು ಹೀಗೆಲ್ಲ ಒಂದೊಂದು ಸಾರಿ ಕುಚ್ಯೋದವಾಗಿ ಮಾತನಾಡುತ್ತಾ ತಮ್ಮ ಹಿಡಿಯಲ್ಲಿ ಸಿಕ್ಕಲಿಲ್ಲವಷ್ಟೇ ಎಂದು ಒಂದೊಂದು ಸಾರಿ ವ್ಯಸನಪಡುತ್ತಾ ದಿನಗಳನ್ನು ಕಳೆದರು.

ಆ ಸರಸ್ವತಿ ಮಂದಿರದಲ್ಲಿ ಒಟ್ಟಿಗೆ ಹನ್ನೆರಡು ಮಂದಿ ಹುಡುಗಿಯರು ಮೆಟ್ರಿಕ್ಯುಲೇಶನ್ ಪರೀಕ್ಷೆಯಲ್ಲಿ ತೇರ್ಗಡೆಪಟ್ಟಿದ್ದರು. ಒಂದು ವಾರ ಕಳೆಯುತ್ತಲೆ ಆ ಹುಡುಗಿಯರಲ್ಲಿ ಅನೇಕರು ಆನಂದಿಬಾಯಿಯ ಬೋಧನೆಗೆ ಒಳಗಾಗಿ ಕಿರಾನೀ ಮತವನ್ನವಲಂಬಿಸಿದರೆಂದು ವರ್ತಮಾನ ಪತ್ರಗಳಲ್ಲಿ ಬರೆದುಬಂತು. ಅಮೃತರಾಯನೂ ಜಲಜಾಕ್ಷಿಯೂ ಈ ವರ್ತಮಾನವನ್ನು ಕೇಳಿ, ಇಂದಿರಾಬಾಯಿಯ ಅವಸ್ಥೆ ಏನೋ ಎಂದು ಚಿಂತಿಸತೊಡಗಿದರು. ಭೀಮರಾಯ,

ಅಂಬಾಬಾಯಿ ಇವರು ಕಂಡಕಂಡವರೊಡನೆ "ಹೇಗೆ ನಮ್ಮ ಮಾತು? ಇಂಗ್ರೇಜಿ ಕಲಿತವರು ಜಾತಿ ಕೆಡದೆ ಇರಲಾರರೆಂದು ನಮ್ಮಂತಹವರು ಹೇಳಿದರೆ ಕೆಲವರೆಲ್ಲ ಕುಚೋದ್ಯ ಮಾಡುತ್ತಿದ್ದರಷ್ಟೆ. ಈಗ ಹೇಗೆ ನಮ್ಮ ಮಾತು! ಪಾದ್ರಿಗಳ ಪುಸ್ತಕಗಳನ್ನು ಓದುವುದು, ಇಂಗ್ರೇಜಿ ಕಲಿಯುವುದು, ಹೀಗೆಲ್ಲ ದುರ್ಬುದ್ಧಿ ಮಾಡಬೇಡವೆಂದು ಇಂದಿರೆಗೆ ನಾವು ಕಡ್ಡಿ ಮುರಿದು ಸಾರಿ ಹೇಳಿದರೂ ಕೇಳದೆ ಸೆಣಸಾಡಿಕೊಂಡು, ಮನೆಬಿಟ್ಟು ಹೋಗಿ, ಈಗ ಪರವೂರಲ್ಲಿ ಜಾತಿಗೆಟ್ಟು, ಪರರ ಕೈಯಲ್ಲಿ ಬಿದ್ದು ಸಾಯುವ ಕಾಲ ಬಂತಷ್ಟೆ? ಹಾಗೆಯೇ ಆಗಬೇಕು. ಯಾವಾಗ ತಾಯಿ ತಂದೆಗಳು ಹೇಳಿದ ಬುದ್ಧಿಯನ್ನು ಕೇಳದೆ ಗಾಳಿಗೆ ಬಿದ್ದ ಅನ್ನದ ಕಾಳಿನಂತೆ ಗಟ್ಟಿಯಾಗಿ ಪರರ ಮಾತು ಕೇಳಿ ಮನಸ್ವಿಯಾಗಿ ನಡೆಯುವುದಕ್ಕೆ ತೊಡಗಿದಳೊ ಆಗಲೇ ನಾವು ಅವಳ ಆಶೆಯನ್ನು ತೊರೆದುಬಿಟ್ಟಿದ್ದೇವೆ. ಜಾತಿನೀತಿ, ತಾಯಿತಂದೆ, ಕಟ್ಟುಕಟ್ಟಳೆ ಇವೇ ಮುಂತಾದ ವಿಷಯಗಳನ್ನು ಧಿಕ್ಕರಿಸಿ ನಡೆಯುವವರಿಗೆ ಕಟ್ಟಕಡೆಗೆ ಬರುವ ಗತಿಯೇ ಇದಾಗಿದೆ. 'ಕೆಟ್ಟ ಮೇಲೆ ಬುದ್ಧಿ, ಅಟ್ಟಮೇಲೆ ಒಲೆಯುರಿ!' ಈಗ ಬುದ್ಧಿ ಬರುವುದು" ಎಂದು ಕದಕದ ನಕ್ಕು, ಅಪಹಾಸ್ಯ ಮಾಡಿದ್ದಲ್ಲದೆ, ಭೀಮರಾಯನು ಆಗಾಗ್ಗೆ ಮಹಾ ಪ್ರಣಾಲದೊಡನೆ,

ಕೆಟ್ಟ ಮೇಲೆ ಬುದ್ಧಿ ಬರುವುದೂ–
(ಕಿಡ್‌ಕಿಡ್‌ಥಾ, ಕಿಡ್‌ಕಿಡ್‌ಥಾ
ಕಿಡ್‌ಕಿಡ್ ತತ್ತಥಾಕಿಡ ಥಕಿಡಥಾಕಿಡ
ತತ್ತಳಾಂಗ ತಳಾಂಗ ತದಿಜಣಥೊ!)

ಕೆಟ್ಟ ಮೇಲೆ ಬುದ್ಧಿ ಬರುವುದು, ನೀ ಗಂಟಾ
ಕಟ್ಟಿಕೊ ಸೆರಗಿನಲೀ।
ದಿಟ್ಟೆ ಹೆಂಗಸು ನೀನು ಕೆಡಬೇಡ, ಇದರಿಂದ
ಕಷ್ಟ ಕಾರ್ಯಗಳಹುದು॥

(ಕಿಡ್‌ಕಿಡ್‌ಥಾ ಕಿಡತಕಿಡಥಾಕಿಡ
ತತ್ತಳಾಂಗತಳಾಂಗ ತಿದಿಜಣಥೋ)

ಎಂಬೀ ಪದ್ಯವನ್ನು ವಿಪರೀತವಾದ ಅಭಿನಯಾತಿಶಯ ಕಂಕಮಾಳದೊಡನೆ ಹಾಡಿ, "ಶ್ರೀರಾಮನ ಮಾತು ಎಂದಾದರೂ ಸುಳ್ಳಾದೀತೆ? ಜಗನ್ಮಾತೆಯಾದ ಸೀತಾದೇವಿಯು ಎಷ್ಟು ಹೇಳಿದರೂ ಕೇಳದೆ, ರಾವಣೇಶ್ವರನಿಂದ ಒಯ್ಯಲ್ಪಟ್ಟ ಮೇಲೆ ಇಂದಿರೆಯ ಪಾಡೇನು! ಎಷ್ಟು ಹೇಳಿದರೂ ಕೇಳದೆ, ದುರ್ಬುದ್ಧಿಯಿಂದ ಜಾತಿಗೆಟ್ಟು, ಈಗ ಕಂಡವರಿಂದ ಒಯ್ಯಲ್ಪಡುವಳಲ್ಲವೆ? ಹಣೆಯಲ್ಲಿ ಬರೆದುದೆಲ್ಲಿ ತಪ್ಪುತ್ತೆ?" ಎಂದು, ನಿಜವಾದ ವರ್ತಮಾನ ಸಿಕ್ಕುವ ಮೊದಲೇ ಹೀಗೆಲ್ಲ ಕಿಲಿಕಿಲಾರ್ಭಟವಾದ ಘೋರಘೋಷಣೆಯಿಂದ ನಗರದಲ್ಲೆಲ್ಲ ಬ್ರಹ್ಮಾಂಡ ಗಲಭೆಯನ್ನೆಬ್ಬಿಸಿದನು.

ಆ ಬಳಿಕ ಒಂದೆರಡು ದಿವಸಗಳಲ್ಲಿ ಅಮೃತರಾಯನಿಗೆ ಇಂದಿರಾಬಾಯಿಯು ಸ್ವಹಸ್ತಾಕ್ಷರದಲ್ಲಿ ಬರೆದ ಪತ್ರವೂ ಮತ್ತೊಂದು ವರ್ತಮಾನಪತ್ರವೂ ಬರಲು, ಮೊದಲಿನ ವರ್ತಮಾನ ನಿಜವಾದ್ದಲ್ಲವೆಂತಲೂ, ಗತಿಗೋತ್ರವಿಲ್ಲದ ಎರಡು ಮೂರು ಮಂದಿ ಹುಡುಗಿಯರು ಮಾತ್ರ ಕಾಲಕ್ಷೇಪಕ್ಕುಪಾಯವೇನೂ ಕಾಣದೆ, ಮತಾಂತರ ಪಡೆದರೆಂತಲೂ ಕಂಡುಬಂದದ್ದಲ್ಲದೆ, ತಾನು ಬರುವ ವಾರದ ಹಡಗದಲ್ಲಿ ಕಮಲಪುರಕ್ಕೆ ಮರಳಿ ಬರುವೆನು. ರೇವಿನಿಂದ ಮನೆಗೆ ಕರೆದುಕೊಂಡು ಹೋಗುವುದಕ್ಕೆ ಏರ್ಪಾಡು ಮಾಡಬೇಕಾಗಿ ಅವಳು ಸ್ಪಷ್ಟವಾಗಿ ಬರೆದುದರಿಂದ ಈ ವರ್ತಮಾನವು ಊರಲ್ಲೆಲ್ಲ ಗೊತ್ತಾಗಿ, ಭೀಮರಾಯನ ಹಾರಾಟವು ತುಸಾ ಕಡಿಮೆಯಾಯಿತು. ಮರುವಾರದಲ್ಲಿ ಹಡಗ ಬಂತೇ ಬಂತು. ಅಮೃತರಾಯನು ಪತ್ನಿಸಹಿತವಾಗಿ ರೇವಿಗೆ ಹೋಗಿ, ಇಂದಿರಾಬಾಯಿಯನ್ನು ಕಂಡು, ಶಾನೆ ಸಂತೋಷದಿಂದ ಅವಳನ್ನು ತನ್ನ ಸಾರೋಟಿನಲ್ಲಿ ಕುಳ್ಳಿರಿಸಿಕೊಂಡು, ಮನೆಗೆ ಕರೆದು ತಂದು, ಕ್ಷೇಮಸಮಾಚಾರವೆ ಮೊದಲಾದ ಅನೇಕ ವಿಷಯಗಳನ್ನು ಕುರಿತು ಮಾತನಾಡುತ್ತಾ, ಅವಳು ಮಾಡಿದ ವಿದ್ಯಾಭಿವೃದ್ಧಿ, ಅವಳ ಮಾತುಕಥೆ, ವಾಗ್ಜಾಲ ಮುಂತಾದ್ದನ್ನು ಕಂಡು, ಆಶ್ಚರ್ಯಪಟ್ಟು, "ಸೈ! ಸಾರ್ಥಕವಾಯಿತು!" ಎಂದು ಅವರು ಸಂತೋಷಪಟ್ಟರು.

## ೫೩

ಇಂದಿರಾಬಾಯಿಗೆ ಈಗ ಹದಿನೆಂಟು ವರುಷಗಳು ತುಂಬಿದವು. ದಿನ ಹೋಗುತ್ತಾ ಹೋಗುತ್ತಾ ಬುದ್ಧಿಯೂ ಯೌವನವೂ ದೇಹ ಚೈತನ್ಯವೂ ವೃದ್ಧಿಯಾಗುತ್ತಾ ಬಂತು. ಆದರೆ ಅವಳ ಮಾತುಕತೆಯಲ್ಲಿಯೂ ನಡತೆಯಲ್ಲಿಯೂ ಮುಂದಿನ ಜೀವನದ ವಿಷಯದಲ್ಲಿ ಅವಳ ಅಭಿಪ್ರಾಯವೇನೆಂದು, ಅಂದರೆ ಜನ್ಮಾಂತ್ಯದ ವರೆಗೂ ಈಗಿನಂತೇ ಗಡುಸಾದ ಬ್ರಹ್ಮಚರ್ಯವೊ ಹೇಗೆಂದು, ಯಾವುದೊಂದು ಸೂಚನೆಯೂ ಹೊರಡುತ್ತಿದ್ದಿಲ್ಲ. ಹೀಗೆಯೇ ಕೆಲವು ತಿಂಗಳು ಕಳೆದವು. ಅವಳು ಪ್ರತಿ ದಿವಸವೂ ಮುಂಜಾವಿಗೆ ಎದ್ದು, ಮುಖಮಜ್ಜನ, ಸ್ನಾನ ಮುಂತಾದ್ದನ್ನು ತೀರಿಸಿದ ನಂತರ ಒಂದೆರಡು ಗಳಿಗೆ ಓದುತ್ತಾ ಬರೆಯುತ್ತಾ ಕಳೆದು, ಆ ಬಳಿಕ ಅಡಿಗೆಯ ಕೋಣೆಗೆ ಹೋಗಿ, ಅಡಿಗೆ ಭಟ್ಟನು ಭಕ್ಷಾನ್ನ ಮೇಲೋಗರಗಳನ್ನು ಮಾಡುತ್ತಿರುವಾಗ ನೋಡುತ್ತಾ ಭೋಜನವಾದ ಮೇಲೆ ಕೆಲವು ಸಮಯದ ವರೆಗೆ ಜಲಜಾಕ್ಷಿಯೊಡನೆ ವಿವಿಧ ವಿಷಯಗಳನ್ನು ಕುರಿತು ಮಾತನಾಡುತ್ತಾ, ಪುನಃ ಓದುತ್ತಾ ಬರೆಯುತ್ತಾ ಕೆಲವು ಸಾರಿ ಬಣ್ಣದ ನೂಲಿಂದ ವಿಧವಿಧವಾದ ಕಸೂತಿಯ ಕೆಲಸಗಳನ್ನು ಮಾಡುತ್ತಾ ಇರುವಳು. ಒಂದಾನೊಂದು ದಿವಸ ಅಮೃತರಾಯನು ಜಲಜಾಕ್ಷಿಯೊಡನೆ–

"ನಮ್ಮ ಇಂದಿರೆಯು ಮುಂದಿನ ಸ್ಥಿತಿಗತಿಯ ಕುರಿತು ಅವಳ ಮನೋಭಿಪ್ರಾಯವೇನೆಂದು ನೀನೇನಾದರೂ ಈ ವರೆಗೆ ತಿಳಿದಿದ್ದೀಯಾ?"

"ನನಗೇನೂ ಈ ವರೆಗೆ ಗೊತ್ತುಹತ್ತಲಿಲ್ಲ."

"ಅವಳು ಯಾವುದಾದರೊಂದು ಸಮಯದಲ್ಲಿ ಒಬ್ಬಳೇ ಇದ್ದಾಗ, ನೀನು ಅವಳ ಮುಖಚರ್ಯೆ ಲಕ್ಷಣಗಳನ್ನು ಚೆನ್ನಾಗಿ ಪರಿಶೋಧಿಸಿ ನೋಡಿದ್ದೀಯಾ?"

"ಕೆಲವು ಸಾರಿ ನೋಡಿದ್ದೇನೆ, ಆದರೂ ವಿಶೇಷವಾದ ಯಾವುದೊಂದೂ ಸೂಚನೆ ಕಂಡುಕೊಳ್ಳಲಿಲ್ಲ. ಅವಳು ಜಾಣೆಯಲ್ಲವೆ? ತನ್ನ ನಡತೆ ಮಾತುಕತೆಯಲ್ಲಿ ಜಾಗರೂಕತೆ ಎಂಬುದು ಅಷ್ಟಿಷ್ಟಲ್ಲ."

"ನಾನು ಕೋರ್ಟಿಗೆ ಹೋದಾಗ ಅಥವಾ ನೀನೇನಾದರೂ ಗೃಹಕೃತ್ಯದ ಕೆಲಸದಲ್ಲಿರುವಾಗ ಅವಳು ಹೇಗೆ ಸಮಯ ಕಳೆಯುತ್ತಿದ್ದಾಳೆ?"

"ಒಂದೇ ಕ್ಷಣವಾದರೂ ವೃಥಾ ಕಳೆಯುವುದಿಲ್ಲ. ಓದುತ್ತಾ ಅಥವಾ ಬರೆಯುತ್ತಾ, ಅಲ್ಲ, ಏನಾದರೂ ಚಿತ್ರವಿಚಿತ್ರವಾದ ಕಸೂತಿಗಳನ್ನು ತೆಗೆಯುತ್ತಾ ಇರುತ್ತಾಳೆ."

"ಗೃಹಕೃತ್ಯದ ವಿಷಯವಾಗಲೀ ದಂಪತಿಗಳ ವಿಷಯವಾಗಲೀ ಏನಾದರೂ ಮಾತನಾಡುತ್ತಾಳೆಯೇ?"

"ಕೆಲವು ಸಾರಿ ಮಾತನಾಡುತ್ತಾಳೆ. ಆದರೆ ಅವಳಲ್ಲಿದ್ದಷ್ಟು ಬುದ್ಧಿಚಾತುರ್ಯ, ಯುಕ್ತಿ ನನ್ನಲ್ಲಿಲ್ಲದ್ದರಿಂದ ಅನೇಕ ಸಾರಿ ಅವಳ ಅರ್ಥವೇ ನನಗೆ ಚೆನ್ನಾಗಿ ಗ್ರಾಹ್ಯವಾಗುವುದಿಲ್ಲ."

"ಮಾತನಾಡುತ್ತಿರುವಾಗ ಮುಖದಲ್ಲಿ ಚಿಂತೆಯೊ ನಗೆಯೊ?"

"ಚಿಂತೆಯ ಕುರುಹುಗಳನ್ನು ನಾನು ಕಾಣಲಿಲ್ಲ. ಹೆಚ್ಚಾಗಿ ಕಿರಿನಗೆಯೇ. ಕೆಲವು ಸಾರಿ ಗಾಂಭೀರ್ಯ."

"ಇರಲಿ, ನೋಡೋಣ. ಅವಳ ಮನೋಭಿಪ್ರಾಯವೇನೆಂದು ನಮಗೆ ತಿಳಿದರೆ ಒಳ್ಳೇದಿತ್ತು. ಈಗಿರುವ ಸ್ಥಿತಿಯಲ್ಲೇ ಅವಳನ್ನಿರಗೊಡಿಸುವುದು ಮಹಾ ಕ್ರೂರತೆ ಎಂದು ನಾನು ತಿಳಿದುಕೊಳ್ಳುತ್ತೇನೆ."

"ಹಾಗೆಂದರೇನು? ನನಗೆ ಚೆನ್ನಾಗಿ ಮನಸ್ಸಿಗೆ ಹೊಂದಲಿಲ್ಲ. ಪುನರ್ವಿವಾಹದ ಆಲೋಚನೆಯೆ?"

"ಅಂತಹ ನಿಶ್ಚಯವೇನೂ ನಾನು ಈ ವರೆಗೆ ಮಾಡಲಿಲ್ಲ. ಒಂದು ವೇಳೆಗೆ ಹಾಗೆನ್ನುವಾ, ನಿನ್ನಭಿಪ್ರಾಯವೇನು?"

"ಅದೇನೊ ನಮ್ಮ ಭಾಸ್ಕರರಾಯನನ್ನು ನಾವು ವಿಲಾಯತಿಗೆ ಕಳುಹಿಸಿದ್ದೇವೆಂದು ನಮ್ಮ ಮೇಲೆ ಮೊದಲೇ ಒಂದು ಪುಕಾರಿದೆ. ಗುರುಮಠದಿಂದ ಇತ್ತಲಾಗಿ ಎರಡು ಪುಸ್ತಕಗಳು– ಅವುಗಳ ಹೆಸರೇನು? ಉಚ್ಚಾರಕ್ಕೆ ತರಲಿಕ್ಕೇನೇ ನನಗೆ ಪ್ರಯಾಸವಾಗುತ್ತೆ,–"

"ಅವುಗಳನ್ನು ನಾನು ಓದಿದ್ದೇನೆ. ಒಂದರ ಹೆಸರು 'ವಿಧವಾವಿವಾಹ ಮತ ಖಂಡನಂ' ಇನ್ನೊಂದರದ್ದು 'ಬಾಲವಿವಾಹ ಮತ ಖಂಡನಂ' ಎಂಬವುಗಳಲ್ಲವೆ?"

"ಹೌದು, ಅವುಗಳಲ್ಲೇನು ಹೇಳಿದೆ?"

"ಅದೆಲ್ಲ 'ಮುದ್ರಿಕೆ ಇಲ್ಲದ ಮುನ್ನೂರು ಪದ'."

"ಅದೇನು! ಅನೇಕರು ಅವುಗಳನ್ನು ಹೊಗಳುತ್ತಾರಂತೆ."

"ಸರಿ. ಬೂದಿಕಾಣದವರು ಹಿಟ್ಟುಕಂಡರೆ ಹೊಗಳದೆ ಮತ್ತೇನು?"

"ಸರಿಯೆ!"

"ಸರಿ, ಸರಿ. ಅದು ಹೇಗೂ ಇರಲಿ, ಮುಂದೆ ಆಲೋಚಿಸೋಣ!" ಎಂದು ಸಂಭಾಷಣೆಯನ್ನು ನಿಲ್ಲಿಸಿ ಆ ದಿವಸ ಸುಮ್ಮಗಾದರು.

ಮರುದಿವಸ ಇಂದಿರಾಬಾಯಿಯು ಮುಂಜಾನೆ ಎದ್ದು ಸ್ನಾನಪಾನಗಳನ್ನು ತೀರಿಸಿ, ಅಡಿಗೆಯ ಕೋಣೆಗೆ ಹೋದ ಸಮಯವನ್ನು ನೋಡಿ ಅಮೃತರಾಯನು ಅವಳ ಕೋಣೆಯೊಳಗೆ ಹೋಗಿ, ಅವಳು ಓದುತ್ತಿದ್ದ ಪುಸ್ತಕಗಳ್ಯಾವುವೆಂಬುದನ್ನು ನೋಡೋಣವೆಂದು ಒಂದೊಂದನ್ನೇ ಮೇಜಿನಿಂದ ತೆಗೆದುನೋಡುವಾಗ ಅವುಗಳಲ್ಲಿ 'ಗೃಹನಿರ್ವಾಹ ಕಾರ್ಯ', 'ಪಾಕಶಾಸ್ತ್ರ', 'ಪ್ರಾಚೀನ ಅರ್ವಾಚೀನ ವಿವಾಹನಿರ್ಣಯ', 'ಸ್ತ್ರೀ ಧರ್ಮರತ್ನಾಕರ' ಎಂಬೀ ಮೊದಲಾದ ಅಮೌಲ್ಯವಾದ ಅನೇಕ ಪುಸ್ತಕಗಳನ್ನು ಕಂಡು, ತನ್ನಲ್ಲಿ ತಾನೇ, ಸರಿ, ಇವುಗಳಿಂದ ಅವಳ ಮನೋಭಿಪ್ರಾಯವೇನೆಂದು ತಕ್ಕಮಟ್ಟಿಗೆ ಗೊತ್ತಾದಂತಾಯಿತು, ಹೇಗೂ ಈ ಹೊತ್ತು ಕೋರ್ಟಿನಿಂದ ಬೇಗನೆ ಬಂದು, ಅವಳೊಡನೆ ಕೆಲವು ಮಾತುಗಳನ್ನಾಡುವುದು ಯೋಗ್ಯವೆಂದಾಲೋಚಿಸಿ, ಹೊರಗೆ ಹೋಗಿ, ತನ್ನ ಬೇರೆ ಕೆಲಸಗಳನ್ನು ಮುಗಿಸಿ, ಸ್ನಾನ ಭೋಜನಾನಂತರ, "ಈ ಹೊತ್ತು ನಾನು ವಾಡಿಕೆಯ ಸಮಯಕ್ಕಿಂತ ಸ್ವಲ್ಪ ಬೇಗನೆ ಬರುವೆನು" ಎಂದು ಜಲಜಾಕ್ಷಿಯೊಡನೆ ಹೇಳಿ ಕೋರ್ಟಿಗೆ ಹೋಗಿ, ಅಲ್ಲಿಯ ಕೆಲಸವೆಲ್ಲವನ್ನು ಬೇಗ ತೀರಿಸಿ, ಮೂರು ಗಂಟೆಗೆ ತಿರಿಗಿ ಮನೆಗೆ ಬಂದು, ಸ್ವಲ್ಪ ಚಾ ಫಲಾಹಾರವನ್ನು ತೆಗೆದುಕೊಂಡು, ಇಂದಿರಾಬಾಯಿ ಇದ್ದಲ್ಲಿಗೆ ಹೋಗಿ ನೋಡುವಾಗ ಅವಳು ಎದ್ದುನಿಂತು, "ಈ ಹೊತ್ತೇನು ಕೋರ್ಟಿನಿಂದ ಬೇಗನೆ ಬಂದೆ?" ಎಂದು ಕೇಳಲಾಗಿ, ಅವನು "ನೀನು ಸತಾರೆಯಿಂದ ಬಂದಂದಿನಿಂದ ಸಾವಕಾಶದಲ್ಲಿ ಒಂದೆರಡು ಗಳಿಗೆ ನಿನ್ನೊಡನೆ ಮಾತನಾಡುವುದಕ್ಕೆ ಸಮಯ ದೊರೆಯಲಿಲ್ಲ. ಈ ಹೊತ್ತು ಸಮಯ ಸಿಕ್ಕಿತು. ಕುಳಿತುಕೊ" ಎಂದು ತಾನು ಸಹಾ ಒಂದು ಕುರ್ಚಿ ಎಳೆದುಕೊಂಡು ಕುಳಿತನು. ಅಷ್ಟರಲ್ಲಿ ಜಲಜಾಕ್ಷಿಯೂ ಅಲ್ಲಿಗೆ ಬಂದು ಕೂಡಿದಳು.

ಅಮೃತರಾಯ– "ನೀನು ಅನೇಕ ಪುಸ್ತಕಗಳನ್ನು ಓದಿದ್ದಿ. ಅನೇಕ ವಿಷಯಗಳನ್ನು ಬಲ್ಲೆ. ಇನ್ನೂ ಓದುತ್ತಾ ಕಲಿಯುತ್ತಾ ಇರುವೆ. ಇದರಿಂದೆಲ್ಲ ಸಿಕ್ಕಿದ ಅಥವಾ ಸಿಕ್ಕಲಿಕ್ಕಿರುವ ಫಲವೇನು?"

ಇಂದಿರಾಬಾಯಿ– "ನಿನ್ನ ಪ್ರಶ್ನೆಗೆ ಸರಿಯಾದ ಉತ್ತರ ಕೊಡುವೆನೆಂದು ಪೂರ್ಣ ಧೈರ್ಯವಿಲ್ಲದಿದ್ದರೂ, ಕಾರ್ಯವಿದ್ದಲ್ಲಿ ಫಲವಿದೆ, ಫಲವಿಲ್ಲದ ಕಾರ್ಯವೇ ಇಲ್ಲ. ನಮ್ಮಲ್ಲಿ ಫಲಾಪೇಕ್ಷೆ ಇದ್ದರೂ ಇಲ್ಲದಿದ್ದರೂ ನಾವು ಮಾಡುವ ಕಾರ್ಯದಿಂದ ಫಲ ಹುಟ್ಟುತ್ತೆ."

"ನೀನೀಗ ಎರಡು ಮೂರು ವರ್ಷಗಳಿಂದ ಕಷ್ಟಪಡುತ್ತಿದ್ದಿಯಷ್ಟೆ? ನಿನಗೆ ಸಿಕ್ಕಿರುವ ಫಲವೇನು?"

"ನಾನು ಪ್ರಥಮತಃ ನಿನ್ನ ಕಾಲಡಿಗಳಿಗೆ ಬಂದಾಗ ಹೇಗಿದ್ದೆ? ಈಗ ಹೇಗಿದ್ದೇನೆ?

ಇದು ನಿನ್ನ ಕಾರ್ಯದ ಫಲ. ನಾನು ಕಷ್ಟ ಮಾಡಿದ್ದರಿಂದ ನನಗೆ ಸಿಕ್ಕಿರುವ ಫಲವನ್ನು ಒಂದೆರಡು ಮಾತಿನಲ್ಲೇ ವಿವರಿಸಿ ಹೇಳಕೂಡದು. ಅದೇಕೆ? ಅದು ನಿನಗೂ ಗೊತ್ತಿದೆ."

"ಮುಂದಿನ್ನು ನೀನು ಈಗ ಇರುವ ಸ್ಥಿತಿಯಲ್ಲೇ ಇರುವ ಮನಸ್ಸೋ, ಅಲ್ಲ ಬೇರೇನು?"

"ಸೃಷ್ಟಿಯಲ್ಲಿ ಸಕಲ ಪ್ರಾಣಿಗಳಿಗೂ ಸ್ಥಿತ್ಯಂತರಗಳಿವೆ. ಯಾವುದೊಂದು ಪ್ರಾಣಿಯೂ ಇದ್ದಂತೆಯೇ ಇರುವುದಿಲ್ಲವಷ್ಟೆ? ನಾವು ನಮಗಿರುವ ಬುದ್ಧಿಯನ್ನು ಸ್ಥಿರತೆಯಲ್ಲಿಟ್ಟುಕೊಂಡು ಸತ್ಕಾರ್ಯಗಳನ್ನೇ ಮಾಡುತ್ತಾ ಇದ್ದರೆ, ಯಾವ ಸ್ಥಿತಿಯಲ್ಲಿದ್ದರೂ ಬಾಧಕವಿರುವುದೆಂದು ನನ್ನ ಬುದ್ಧಿಗೆ ಕಾಣುವುದಿಲ್ಲ."

"ಅದೆಲ್ಲ ಸರಿಯೇ, ಆದರೆ ನಿನಗೆ ಮುಂದೆ ಯಾವ ಸ್ಥಿತಿ ಬರಬೇಕೆಂದು ನಿನ್ನ ಮನಸ್ಸು?" ಎಂದು ಕೇಳಿ ಮುಖ ತಿರಿಗಿಸಿ ಬಂದ ನಗೆಯನ್ನಡಗಿಸಿದನು.

"ನನ್ನ ಮನಸ್ಸೇನು? ಅಪ್ಪಯ್ಯಾ, ನಿನ್ನ ಪ್ರಶ್ನೆಯ ಗೂಢಾರ್ಥ ನನಗೆ ಗೊತ್ತಾಯಿತು" ಎಂದು ಸೆರಗು ಬಾಯಿಯ ಮೇಲಿಟ್ಟು ನಗೆಮೊಗದೊಡನೆ "ನಾನು ಎಷ್ಟಾದರೂ ಪ್ರಾಯದಲ್ಲಿಯೂ ಬುದ್ಧಿಯಲ್ಲಿಯೂ ಇನ್ನೂ ಚಿಕ್ಕವಳೇ. ಮುಂದಿನ ನನ್ನ ಸ್ಥಿತಿಯ ಕುರಿತು ನೀನು ಮಾಡುವ ಯಾವ ಆಲೋಚನೆಯಾದರೂ ನನಗೆ ಗುಣಕರವಾಗಿಯೇ ಇರುವುದಲ್ಲದೆ ಬೇರೇನೂ ಅಲ್ಲವೆಂದು ನನಗೆ ಪೂರ್ಣ ವಿಶ್ವಾಸವಿರುವುದರಿಂದ ನನ್ನ ಮನಸ್ಸು ಹೇಗೆಂದು ಕೇಳುವ ಅವಶ್ಯವೇನಾದರೂ ಇದೆಯೆಂದು ನಾನು ತಿಳಿಯುವುದಿಲ್ಲ" ಎಂದು ಪುನಃ ಮುಖ ತಗ್ಗಿಸಿ ಮುಗುಳುನಗೆ ನಕ್ಕಳು.

ಜಲಜಾಕ್ಷಿ– (ಗಂಡನೊಡನೆ) "ನನಗೆ ಈ ಯುಕ್ತಿಗಳೂ ಗೂಢಾರ್ಥಗಳೂ ಗೊತ್ತಿಲ್ಲ. ಇದೆಲ್ಲ ಎಂತಹ ಆಲೋಚನೆಯೆಂದು ನನಗೆ ಸ್ಪಷ್ಟವಾಗಿ ಹೇಳೋಣಾಗಲಿ."

ಅಮೃತರಾಯ– "ಇಂದಿರೆಯು ಈಗಿನಂತೆಯೇ ಇನ್ನು ಮುಂದೆಯೂ ಏಕಾಂಗಿಯಾಗಿ ತಾನೇ ಇರಬೇಕೋ ಹೇಗೆಂಬುದನ್ನು ಕುರಿತು ಆಲೋಚನೆ."

"ಏನು? ಏಕಾಂಗಿಯಾಗಿ ತಾನೇ ಇರಬೇಕೇ?"

"ನಿನ್ನ ಮನಸ್ಸೇನು?"

"ನನ್ನ ಮನಸ್ಸು ತಮ್ಮ ಮನಸ್ಸಿಗೆ ವಿರೋಧ ಎಲ್ಲಿದೆ?– ಅದೇತಕ್ಕೆ ಕೇಳುವುದು?"

ಇಂದಿರಾಬಾಯಿಯು ಕಿರಿನಗೆಯನ್ನು ತಡೆಯಿಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಾ– "ಅಪ್ಪಯ್ಯಾ ಅದೆಲ್ಲಾ ಆಯಿತಷ್ಟೆ? ಸಿ.ಎಸ್. ಪರೀಕ್ಷೆ–"

"ಹೌದು, ಹೌದು, ಮೊದಲೇ ಗೊತ್ತಿದೆ."

"ಏನಪ್ಪಯ್ಯಾ ಗೊತ್ತಿರುವುದು? ಎರಡಕ್ಷರಗಳನ್ನುಚ್ಚರಿಸುವಷ್ಟರಲ್ಲೇ ಗೊತ್ತಾಯಿತೇ?"

"ಓಹೋ! ಚೆನ್ನಾಗಿ ಗೊತ್ತಿದೆ, ಯುಕ್ತಿಯೆಲ್ಲ ಬಲ್ಲೆನು" ಎಂದು ನಗುತ್ತಾ ಹೊರಟು ಹೊರಗೆ ಹೋದನು.

ಇಂದಿರೆ, ಜಲಜಾಕ್ಷಿ, ಪರಸ್ಪರ ಮುಖ ನೋಡಿ ನಕ್ಕು, ತಂತಮ್ಮ ಕೆಲಸಗಳಿಗೆ ಹೋದರು.

## ೫೪

ಇಂದಿರಾಬಾಯಿಯು ಸತಾರೆಯಿಂದ ಬಂದು ಕೆಲವು ತಿಂಗಳಾದವು. ಅವಳು ಸಂಸ್ಕೃತ, ಇಂಗ್ಲಿಷ, ಮಹಾರಾಷ್ಟ್ರ ಭಾಷೆಗಳನ್ನೂ ಬೇರೆ ಅನೇಕ ವಿಷಯಗಳನ್ನೂ ಕುರಿತು ಪರೀಕ್ಷೆ ಕೊಟ್ಟು ಜಯಿಸಿ ಬಂದಿದ್ದಾಳೆಂತಲೂ ಇನ್ನೂ ಓದುತ್ತಾ ಕಲಿಯುತ್ತಾ ಇರುತ್ತಾಳೆಂತಲೂ, ಚೆನ್ನಾಗಿ ಪ್ರಾಯ ತುಂಬಿದಾಗ ದೂರ ದೇಶದಲ್ಲಿ ಹಿರಿಯರ ದೃಷ್ಟಿಯಿಂದ ತಪ್ಪಿ ಇದ್ದರೂ ತಿಲಮಾತ್ರವೂ ಕೊರತೆ ಇಲ್ಲದ ನಡತೆಯಿಂದ ಇದ್ದಳೆಂಬ ಮುಂತಾದ ಅವಳ ಕೀರ್ತಿಯು ಊರಲ್ಲೆಲ್ಲ ಪ್ರಕಟವಾಗಿ ಅನೇಕ ಹೆಂಗಸರೂ ಹೆಚ್ಚಾಗಿ ಅವಳ ಹಿತಚಿಂತಕಳೂ ಸ್ನೇಹಿತಳೂ ಆಗಿದ್ದ ಶಾರದಾಬಾಯಿಯೂ ಅವಳನ್ನು ಕಂಡು, ಮಾತನಾಡುವುದಕ್ಕೆಂದು ಅಮೃತರಾಯನಲ್ಲಿಗೆ ಆಗಾಗ್ಗೆ ಬಂದು ಮಾತನಾಡಿ ಹೋಗುತ್ತಾ, ಶಾರದಾಬಾಯಿಯಂತೂ ಅವಳ ಬುದ್ಧಿಗೂ ನಡತೆಗೂ ಮೆಚ್ಚಿ, ಅಲ್ಲಲ್ಲಿ ಅವಳನ್ನು ಹೊಗಳುತ್ತಾ ಇರುವಾಗ, ಭೀಮರಾಯ ಅಂಬಾಬಾಯಿಯೂ ಈ ವರ್ತಮಾನಗಳನ್ನೆಲ್ಲ ಕೇಳಿ, ಒಂದಾನೊಂದು ದಿವಸ ಅಂಬಾಬಾಯಿಯು ಗಂಡನೊಡನೆ,

"ಮಗಳು ಇಂದ್ರ ಪದವಿಗೆ ಹೋಗಿ ಬಂದಿದ್ದಾಳಂತೆ, ತಿಳಿಯಲಿಲ್ಲವೆ?"

"ತಿಳಿದಿದ್ದೇನೆ. ಅನೇಕ ಭಾಷೆಗಳನ್ನು ಕಲಿತು ಮಾತೃಕ್ಷೇಪವೆಂಬ ಪರೀಕ್ಷೆಯನ್ನು ಜಯಿಸಿ ಬಂದಿದ್ದಾಳಂತೆ."

"ಇನ್ನೇನಂತೆ? ಸಂತೆಯಲ್ಲಿ ಮೆಂತೆ ಕದ್ದಿದ್ದಾಳಂತೆಯೇ?"

"ಅವಳ ಬುದ್ದಿ, ನಡತೆ ಮುಂತಾದ್ದರ ಕುರಿತು ಅನೇಕರು ಹೊಗಳುತ್ತಾರೆ. ಇನ್ನೂ ಕಲಿಯುತ್ತಾ ಓದುತ್ತಾ ಇದ್ದಾಳಂತೆ."

"ಏನು, ಕಲೇಕಟ್ರೆ ಉದ್ಯೋಗ ಮಾಡಿಕೊಳ್ಳುತ್ತಾಳಂತೊ? ಅಲ್ಲ, ಕಲೆಕಟ್ರನ ಹೆಂಡತಿಯಾಗುತ್ತಾಳಂತೊ? ತಾವು ಅವಳನ್ನು ನೋಡಿ ಬಂದಿದ್ದಿರಾ?"

"ಇಲ್ಲ, ಅವಳು ಇರುವಲ್ಲಿಗೇನೇ ಹೋಗಲಿಕ್ಕೆ ನನಗೆ ಮನಸ್ಸೊಗ್ಗುವುದಿಲ್ಲ. ಅವಳೇ ಇಲ್ಲಿ ಬಂದರೆ ನೋಡಬೇಕೆಂದು ಕುತೂಹಲವಿದೆ. ಏನಾದರೂ ಒಂದುಪಾಯ ಮಾಡುತ್ತೀಯಾ?"

"ಅಯ್ಯೋ! ಅವಳು ದೊಡ್ಡಾಕೆ. ಇನ್ನೂ ದೊಡ್ಡವಳಾಗಲಿಕ್ಕಿದ್ದಾಳೆ. ನಾಳೆ ಕಲೇಕಟ್ರನ ಹೆಂಡತಿಯಾಗುವಳು. ಆ ಮೇಲೆ ನಾನು ಹೋಗಿ ಕಾಲು ಹಿಡಿದು ಕರೆದುಕೊಂಡು ಬರುವೆನು."

"ಮೈರೆಯನ್ನು ಕಳುಹಿಸಿ ನೋಡುತ್ತೀಯಾ?"

"ತಾವೇಕೆ ಇಷ್ಟು ವ್ಯಾಕುಲಪಡುವುದು? ಅವಳೆಂತೂ ತುಟಿಯ ಹೊರಗಿನ ಹಲ್ಲು."

"ಎಷ್ಟಾದರೂ ನಮ್ಮಲ್ಲಿ ಹುಟ್ಟಿದ ಮಗುವಲ್ಲವೆ?"

"ಹಾಗೆ ತಿಳಿದುಕೊಳ್ಳಬೇಕಾದ್ದು ಯಾರು? ಅವಳಲ್ಲವೆ?"

"ಅವಳು ಹಾಗೆ ತಿಳಿದುಕೊಳ್ಳುವುದಿಲ್ಲವೆಂದು ನಿನಗೆ ಹೇಗೆ ಗೊತ್ತು? ಮೊದಲಾದರೊ ಸಣ್ಣ ಮಗುವಾಗಿದ್ದಳು. ಈಗ ಪ್ರಾಯ ತುಂಬಿದವಳು. ಓದಿ ಕಲಿತು ಬುದ್ಧಿ ಇದ್ದವಳು."

“ಅವಳ ಓದುವಿಕೆ! ಕಲಿಯುವಿಕೆ! ಅದೆಲ್ಲ ಹೊಲೆಯರ ಮನೆಯ ಪಾಯಸ. ಅಷ್ಟು ಬುದ್ಧಿ ಇದ್ದವಳಾದರೆ ಸತಾರೆಯಿಂದ ಬಂದಾಕೆ ಇಲ್ಲಿಗೇಕೆ ಬರಲಿಲ್ಲ? ತುರ್ರುತುರ್ರೆಂದು ಅಲ್ಲಿಗೇಕೆ ಹೋದಳು.”

“ನಾನೇ ರೇವಿಗೆ ಹೋಗಿದ್ದರೆ ಬರುತ್ತಿದ್ದಳೊ ಏನೊ. ಅಮೃತರಾಯನಿಗೆ ಮುಂದಾಗಿ ಗೊತ್ತಾದುದರಿಂದ ಆತ ಹೋಗಿ ಕರೆದುಕೊಂಡು ಬಂದನು.”

“ಅಮೃತರಾಯನಿಗೆ ತಂತಿ ಬಿಟ್ಟಿದ್ದಳಂತೆ, ನಮಗೇಕೆ ತಿಳುಹಿಸುವಳು?”

“ಅದೆಲ್ಲ ಹೇಗೂ ಇರಲಿ, ನೀನೊಮ್ಮೆ ಮೈರೆಯನ್ನು ಕಳುಹಿಸಿ ನೋಡಬಾರದೆ? ಅವಳ ಮಾತುಗಳ ಸ್ವಭಾವದಿಂದ ಅವಳ ಮನಸ್ಸಿನ ಈಗಿನ ಸ್ಥಿತಿಯಾದರೂ ಗೊತ್ತಾಗಬಹುದಷ್ಟೆ?”

“ಹಾಗಾಗಲಿ,” ಎಂದು ಮೈರೆಯನ್ನು ಕರೆದು,

“ಮೈರೆ, ಅವಾ, ವರಾ ಇಂದಿರೆ ಇತ್ತಿನಳ್‌ಪ ಪೋದು ಪಾತೆರ್ದ್ ಬಲಾ. ಆಳೆಗ್ ಮೂಳು ಬರ್ಪಿ ಮನಸ್ಸುಂಡೊ ಇಜ್ಜಿಯೊ ಅಂದ್‌ದ್ ಆಳೆ ಪಾತೆರೊಡು ತೆರಿಯುವೆ?” ಎಂದು ಹೇಳಿ ಕಳುಹಿಸಿದಳು.

“ಮೈರೆ, ಇಗೊ ಒಮ್ಮೆ ಇಂದಿರೆ ಇದ್ದಲ್ಲಿಗೆ ಹೋಗಿ, ಮಾತನಾಡಿಕೊಂಡು ಬಾ. ಅವಳಿಗೆ ಇಲ್ಲಿಗೆ ಬರುವುದಕ್ಕೆ ಮನಸ್ಸಿದೆಯೊ ಇಲ್ಲವೊ ಎಂದು ಅವಳ ಮಾತಿನಿಂದ ತಿಳಿಯ ಬಹುದಷ್ಟೆ?”

ಮೈರೆಯು ಇಂದಿರಾಬಾಯಿ ಇದ್ದಲ್ಲಿಗೆ ಬಂದು, ಅವಳ ಕೋಣೆಯ ಕಿಟಕಿಯ ಹೊರ ದಿಕ್ಕಿನಿಂದ ಒಳಗೆ ಹಣಿಕಿ ನೋಡಿ

“ಉಳೊ! ಯೆನಾ ಬಾಲೆ! ಯಾನ್ ಮೈರೆ. ಅಂಬಾ ಬಾಯಮ್ಮ ಈರೆಡ ಪಾತೆರ್ದ್ ಬರ್‍ಯರೆ ಯೆನನ್ ಕಡಪುಡ್ ದೇರ್, ಮಗಾ.”

“ಅಯ್ಯೊ! ನನ್ನ ಮಗು! ನಾನು ಮೈರೆ. ಅಂಬಾಬಾಯಿಯವರು ನಿಮ್ಮೊಡನೆ ಮಾತ ನಾಡಿ ಬರುವುದಕ್ಕೆ ನನ್ನನ್ನು ಕಳುಹಿಸಿದ್ದಾರೆ, ಮಗು.”

“ದಾನೆ ಮೈರೆ? ಯೆಡ್ಡೆನೇ ಉಳ್ಳಾನೆ?”

“ಏನು ಮೈರೆ, ಚೆನ್ನಾಗಿರುತ್ತಿಯಷ್ಟೆ?”

“ಉಳೊ! ಯೆನಾ ಬಾಲೆ! ಉಳ್ಳೆ ಮಗಾ”

“ಅಯ್ಯೊ! ನನ್ನ ಮಗು! ಇದ್ದೇನೆ, ಮಗು.”

“ಇಲ್ಲಡ್‌ದ ಸುದ್ದಿದಾನೆ, ಮೈರೆ?”

“ಮನೆಯ ಸುದ್ದಿ ಏನು ಮೈರೆ?”

“ಸುದ್ದಿ ದಾನೆ ಪಣ್ಕೆ! ಓಳೊ ಉಪ್ಪಿಗೋಣೆರೆನ್ ಮಾತ ಕೂಡ್‌ಸಾದ್ ಊರುಡು ಇಜ್ಜ್ಯಂದಿ ರಟ್ಟಾವಳಿ ಮಾತ ಮಲ್ಪಾದ್, ಯೆನಾ ಬಾಲೆನ್ ಇಲ್ಲಡ್‌ದ್.

“ಸುದ್ದಿ ಏನು ಹೇಳೋಣ! ಎಲ್ಲ್ಯೊ ಇದ್ದ ಕೋಣಗಳನ್ನೆಲ್ಲ ಕೂಡಿಸಿ ಊರಲ್ಲಿಲ್ಲದ ಗಡಿಬಿಡಿ ಮಾಡಿಸಿ, ನನ್ನ ಮಗುವನ್ನು ಮನೆಯಿಂದ ಓಡಿಸಿ– ಅಯ್ಯೋ!

ಗಿಡಾತದ್–ಉಳೊ! ನಾರಾಯಣ ದೇವರೇ! –ಆ ಗೋಣೆರೆ ಸಂತಾನೊ ಮುತ್ತೇರೆ–ದಾನೆ ಪಣ್ಕೆ ಮಗಾ? ಸಾವುದಾಕುಳು ಪೋಯೆರ್. ತೂಲೆ ಮಗಾ, ಯೆನ ಕೈ ಗೋದಿದ ಪೊಡಿ ಮಳ್ತ್ ಮಳ್ತ್‌ದ್ ದಡ್ಡ್ ಕಟ್ಟಿನೆ."

(ಕಣ್ಣುಜ್ಜಿಕೊಂಡು)"ಅಪ್ಪೆ ಅಮ್ಮೆ ಯೆಡ್ಡೆನೇ ಉಳ್ಳೆರೋ?"

"ಹೂಂ–ಉಳ್ಳೇರಂಚಾ."

"ಯೆನ ನೆನಪು ಮಳ್ಪೆರೊ?"

"ಅಪಗಾಪಗ ದಾನ್ಯಂಡಲಾ ಪಾತೆರ್ ವೆರ್. ಯಾನ್ ಹೆಚ್ಚಾದ್ ಕೆಬಿಕೊರಿಜ್ಜಿ."

"ಪ್ರಸಂಗ ಮಿನಿ ನಡಪುಂಡೊ?"

ನಾರಾಯಣ ದೇವರೇ!– ಆ ಕೋಣಗಳ ಸಂತಾನ ಮುತ್ತಲಿಕ್ಕೆ–ಏನು ಹೇಳಲಿ, ಮಗು? ಬೊಜ್ಜದವರು ಹೋದರು. ನೋಡು ಮಗು ನನ್ನ ಕೈ ಗೋಧಿ ಹುಡಿ ಮಾಡಿ ಮಾಡಿ ದಡ್ಡು ಕಟ್ಟಿದ್ದು."

"ತಾಯಿ ತಂದೆಗಳು ಚೆನ್ನಾಗಿದ್ದಾರೆಯೇ?"

"ಹೂಂ–ಇದ್ದಾರೆ ಹಾಗೆ."

"ನನ್ನ ನೆನಪು ಮಾಡುತ್ತಾರೆಯೇ?"

"ಆಗಾಗ್ಗೆ ಏನಾದರೂ ಮಾತನಾಡುತ್ತಾರೆ. ನಾನು ಹೆಚ್ಚಾಗಿ ಕಿವಿ ಕೊಡಲಿಲ್ಲ."

"ಪ್ರಸಂಗ ಮುಂತಾದ್ದು ನಡೆಯುತ್ತಿದೆಯೆ?"

"ಉಳೊ! ದೇವರೆ! ಅವು ಇಜ್ಜ್ಯಂದಿ ದಿನೊ ಉಂಡೆ? ಈರ್ ಅಪ್ಪೆ ಅಮ್ಮನ್ ತೂವರೆ ಬರ್ಪಾರೆ?"

"ಬರೊಡು ಮೈರೆ, ಅಪ್ಪೆ ಅಮ್ಮನ್ ಏಪೊಗುಲಾ ಮರಪುನವು ಉಂಡಯಾ?"

"ಆವು ಮಗಾ, ಆವು. ಯಾನ್ ಪೋಪೆ, ಪಿಂಬಾರೆ?"

"ಆವು ಮೈರೆ, ಪೋಲಾ"

"ಅಯ್ಯೋ! ದೇವರೆ! ಅದು ಇಲ್ಲದ ದಿವಸವಿದೆಯೇ? ನೀವು ತಾಯಿ ತಂದೆಗಳನ್ನು ನೋಡುವುದಕ್ಕೆ ಬರುತ್ತೀರಾ?"

"ಬರಬೇಕು, ಮೈರೆ. ತಾಯಿ ತಂದೆಯನ್ನು ಯಾವಾಗಲೂ ಮರೆಯುವುದುಂಟೆ?"

"ಆದೀತು, ಮಗು. ಆದೀತು. ನಾನು ಹೋಗುತ್ತೇನೆ, ತಿಳಿದಿರಾ?"

"ಆದೀತು ಮೈರೆ ಹೋಗು."

ಎಂದು ಹೇಳಿ, ಒಂದು ಒಳ್ಳೇ ರೇಶ್ಮೆಯ ಕುಪ್ಪಸವನ್ನು ತೆಗೆದು ಕಿಟಕಿಯಿಂದ ಅವಳಿಗೆ ಕೊಟ್ಟಳು. ಆಗ ಅವಳು–

"ಉಳೊ! ಯೆನ ಬಂಗಾರೆ! ಯೆನ ತಿಗಲೆ ಪುಡಾವುಂಡೆ!"

"ಅಯ್ಯೋ! ನನ್ನ ಚಿನ್ನವೆ! ನನ್ನ ಎದೆ ಒಡೆಯುತ್ತಷ್ಟೆ?"

ಎಂದು ಹೇಳಿ, ಅಳುತ್ತಾ ಹೋಗಿ, ಅಂಬಾಬಾಯಿಯೊಡನೆ–

“ಅಮ್ಮಾ, ಉಂದೇ, ಯೆನ ಬಾಲೆ ಕೊರಿನವು.”

“ಅಮ್ಮಾ, ಇಕ್ಕೊಳ್ಳಿರಿ ನನ್ನ ಮಗು ಕೊಟ್ಟದ್ದು.”

ಎಂದು ರೇಶ್ಮೆಯ ಕುಪ್ಪಸವನ್ನು ತೋರಿಸಿದಳು. ಅಂಬಾಬಾಯಿಯು ಅದನ್ನು ನೋಡಿ, “ಓಹೋ, ದೊಡ್ಡ ವೈಭವ! ರೇಶ್ಮೆ ಕುಪ್ಪಸ!” ಎಂದು ತನ್ನಷ್ಟಕ್ಕೆ ಹೇಳಿ,

“ದಾನೆಯಾ ಪಟ್ಟೆಶೀರೆ ಮಿನಿ ಕೊರ್ಯೆಳೊ?”

“ಏನೇ, ಪಟ್ಟೇ ಸೀರೆ ಮುಂತಾದ್ದು ಕೊಟ್ಟಳೆ?”

“ಈರ್ ದಾಯೆಗಮ್ಮ ಆ ಬಾಲೆಗ್ ಇಂಚ ಮಾತ ಪಣ್ಪನಿ? ಅಂಚಿ ಬಾಲೆನನ ಈ ಲೋಕೊಡು ಪುಟ್ಟರೆ ಉಂಡೆ?”

“ನೀವೇಕಮ್ಮ ಆ ಮಗುವಿಗೆ ಹೀಗೆಲ್ಲ ಹೇಳುವುದು? ಅಂಥಾ ಮಗು ಇನ್ನು ಈ ಲೋಕದಲ್ಲಿ ಹುಟ್ಟಲಿಕ್ಕುಂಟೆ?”

“ದಾನೆ ಪಂಡಳ್‌ಯಾ? ಇಡೆಗ್ ಬರ್ಪಿ ಆಲೋಚನೆ ದಾಲಾ ಉಂಡೊ?”

“ಏನು ಹೇಳಿದಳು? ಇಲ್ಲಿಗೆ ಬರುವ ಆಲೋಚನೆ ಏನಾದರೂ ಇದೆಯೆ?”

“ಉಳೊ! ಯೆನಾ ಬಾಲೆ! ಯೆನನ್ ತೂಯಿಪಟ್ಟೆಗೆ ‘ಅಪ್ಪೆ ಅಮ್ಮೆ ಯೆಡ್ಡೆನೇ ಉಳ್ಳೆರಯಾ’ ಅಂದ್‌ದ್ ಕೇಂಡ್‌ದ್ ಕಣ್ಣ್‌ಡ್ ನೀರ್‌ದೆತ್ತೇರ್.”

“ಅಯ್ಯೋ! ನನ್ನ ಮಗು! ನನ್ನನ್ನು ನೋಡಿದ ಕೂಡಲೇ ‘ತಾಯಿ ತಂದೆ ಹೇಗಿದ್ದಾರೆ’ ಎಂದು ಕಣ್ಣೀರು ಸುರಿಸಿದರು.”

“ಇಡೆಗ್ ಬರ್ಪಾಳ್‌ಗೆನೊ?”

“ಇಲ್ಲಿಗೆ ಬರುತ್ತಾಳೆಯೆ?”

“ಬೊಕ್ಕೊನೊ?”

“ಮತ್ತೊ?”

“ಏಪೊ?”

“ಎಂದಿಗೆ?”

“ಪಂಡ್‌ದ್ ಕಡ್‌ಪುಡ್ವೆರೊಡೊ?”

“ಹೇಳಿ ಕಳುಹಿಸುವರೇನೊ?”

ಅಂಬಾಬಾಯಿಯು ಗಂಡನ ಬಳಿಗೆ ಹೋಗಿ–“ನಮ್ಮ ಭಾಗ್ಯಕ್ಕಿನ್ನೇನು ಕಡಿಮೆ! ಇಂದಿರೆಯು ನಮ್ಮ ಮೇಲೆ ದಯವಿಟ್ಟು ಇಲ್ಲಿಗೆ ಬರುವಳಂತೆ. ಮುಂದಾಗಿ ಹೇಳಿ ಕಳುಹಿಸುವಳಂತೆ. ನಮ್ಮ ಭಾಗ್ಯ!”

“ನಾನು ಮೊದಲೇ ಹೇಳಲಿಲ್ಲವೇ? ಎಷ್ಟಾದರೂ ನಮ್ಮುದರದಿಂದ ಬಂದವಳಲ್ಲವೆ? ಮಾಯಾಪಾಶ ಹೇಗೆ ಬಿಡುವುದು?”

“ಅದನ್ನೆಲ್ಲ ನೋಡಬಹುದಷ್ಟೆ? ಅಂಗೈ ನೋಡುವುದಕ್ಕೆ ಕನ್ನಡಿ ಏಕೆ? ನಮ್ಮಿಂದವಳಿಗೇನೋ ಕೆಲಸವಾಗಲಿಕ್ಕೆ ಇದೆಯೇನೊ, ಆದುದರಿಂದ ಮೆಲ್ಲಗೆ ಸ್ನೇಹಭಾವವನ್ನು ತೋರಿಸುತ್ತಾಳೆ. ಹೊಟ್ಟೆಯಲ್ಲಿ ಹೊಕ್ಕು ಕೈಕಾಲು ಬಿಡುವ ಬುದ್ಧಿವಂತಿಕೆಯೋ ಏನೊ

ನೋಡಬೇಕು. ಹಾಗಲ್ಲವಾದರೆ ನಾನು ಆ ದಿವಸ ಬಹುತರದಿಂದಾಡಿದ ಮಾತುಗಳಿಗೆ ಕಿವಿಕೊಡದೆ ಕಡೆಗೆ, 'ನಾನು ನಿನಗೆ ಒಂಭತ್ತು ತಿಂಗಳು ಹೊತ್ತ ತಾಯಿಯಲ್ಲವೆ? ನಿನ್ನನ್ನು ಸಾಕಿ ಬೆಳೆಯಿಸಿದ್ದೇಕೆ?' ಎಂದು ಕೇಳಿದಾಗ ಅವಳು ಕೊಟ್ಟ ಒಂದುತ್ತರವಿದೆ,– ಅದನ್ನು ಜನ್ಮ ಜನ್ಮಾಂತರದಲ್ಲಿಯೂ ಮರೆಯುವಂಥಾದಲ್ಲ! 'ನಮ್ಮ ಮಗು, ನಮ್ಮ ಮಗು' ಎಂದು ಹೇಳುತ್ತೀರಿ! ಆಗಲಿ!"

"ಪ್ರಿಯಳೇ, ಅದೆಲ್ಲ ವಿಹಿತವೇ. ಆದರೆ ನಿನ್ನೆ ವರೆಗೆ ಕೆಟ್ಟವನಾಗಿದ್ದವನೊಬ್ಬನು ಈ ಹೊತ್ತು ಕೆಟ್ಟ ಬುದ್ಧಿಯನ್ನು ಬಿಟ್ಟು ಒಳ್ಳೆಯವನಾಗಕೂಡದೆ?"

"ಸಾಕು, ತಮ್ಮ ತರ್ಕಶಾಸ್ತ್ರ! ತಮ್ಮ ಬುದ್ಧಿಗೆ ಬಿಳುಪಾಗಿದ್ದದ್ದೆಲ್ಲ ಹಾಲೆ. ತಮ್ಮ ಬುದ್ಧಿಯಿಂದಲೇ ನಮಗೆ ಈ ಗತಿಯೆಲ್ಲ ಪ್ರಾಪ್ತಿಯಾದ್ದು. ಆ ದಿವಸ ನಾನಲ್ಲದಿದ್ದರೆ ಸಾಕ್ಷಾತ್ ಪಾಂಡುರಂಗನ ಅವತಾರವಾದ ಆ ಸಂತರ ಶಾಪದಿಂದ ನಾವು ಭಸ್ಮವಾಗಿ ಹೋಗಬೇಕಿತ್ತು."

"ಅದಂತಿರಲಿ, ಇಂದಿರೆಗೂ ಮೈರೆಗೂ ಪರಸ್ಪರ ವಿಶ್ವಾಸವಿದ್ದುದರಿಂದ ಮೈರೆಯನ್ನು ಕಳುಹಿಸಬೇಕೆಂದು ನಾನು ಹೇಳಿದ್ದು."

"ನಾವೇಕೀಗ ತರ್ಕ ಮಾಡುವುದು? ನಾನೇ ಹೋಗಿ ಸೋತು ಬಂದ ಮೇಲೆ, ಮೈರೆಯನ್ನು ಕಳುಹಿಸಿದರೆ ಕಾರ್ಯವಾಗದೆಂದು ನಿಶ್ಚಯವಾಗಿ ನನಗೆ ಮೊದಲೇ ಗೊತ್ತಿದ್ದರೂ ತಾವು ಬಹು ವ್ಯಾಕುಲಪಟ್ಟು ಹೇಳಿದ್ದರಿಂದ ಕಳುಹಿಸಿದೆ. ಬರುವುದೂ ಬಾರದಿರುವುದೂ ಮುಂದೆ ಗೊತ್ತಾಗದಿರದು. 'ತನ್ನಕ್ಕನ ಅರಿಯದವಳು ನೆರೆಮನೇ ಬೊಮ್ಮಕ್ಕನ ಅರಿಯುವಳೆ?' ನೆನಪಿರಲಿ" ಎಂದಳು.

ಭೀಮರಾಯನು ಹೆಂಡತಿಯ ಮಾತುಗಳನ್ನು ಕೇಳಿ, ಬಹಳ ಸಮಯದ ವರೆಗೆ ತನ್ನಲ್ಲಿ ತಾನೇ ಆಲೋಚಿಸಿದರೂ ಇಂದಿರಾಬಾಯಿಯ ಮನಸ್ಸಿನ ಅಭಿಪ್ರಾಯವಿಂಥಾದ್ದೇ ಎಂದು ನಿಶ್ಚಯಿಸಕೂಡದೆ, ಭವಿಷ್ಯತ್ ಕಾರ್ಯದ ವಿಷಯದಲ್ಲಿ ಅದರ ಗುಣದೋಷದ ಕುರುಹಾದರೂ ಕಾಣಿಸುವ ಮೊದಲೇ ವೃಥಾ ಯೋಚಿಸುವುದೂ ತರ್ಕಿಸುವುದೂ ನ್ಯಾಯವಲ್ಲವೆಂದು ತಿಳಿದು ಸುಮ್ಮಗಾದನು.

ಜಜ

ವಿಲಾಯತಿಯಲ್ಲಿ ಭಾಸ್ಕರರಾಯನು ಸಿ. ಎಸ್. ಪರೀಕ್ಷೆಯಲ್ಲಿ ತೇರ್ಗಡೆ ಪಟ್ಟಿರುವುದಾಗಿಯೂ, ಅವನಿಗೆ ಅಸಿಸ್ಟೆಂಟ ಕಲೆಕ್ಟರ್ ಉದ್ಯೋಗದಲ್ಲಿ ನೇಮಕವಾದ್ದಾಗಿಯೂ, ಮನಸ್ಸಿರುವ ಜಿಲ್ಲೆಗೆ ಆ ಉದ್ಯೋಗದ ಮೇಲೆ ಹೋಗುವುದಕ್ಕೆ ಅನುಮತಿ ಸಿಕ್ಕಿರುವುದಾಗಿಯೂ ಅವನೇ ವಿಲಾಯತಿಯಿಂದ ಬಿಟ್ಟ ತಂತಿಯು ಅಮೃತರಾಯನಿಗೆ ಸಿಕ್ಕಿತು. ಅದನ್ನು ನೋಡುತ್ತಲೇ ಅನುಮಾನದಿಂದ ಜಲಜಾಕ್ಷಿಯನ್ನು ಒತ್ತಟ್ಟಿಗೆ ಕರೆದು, ಆ ವರ್ತಮಾನವನ್ನು ತಿಳಿಸಿ, "ಇಗೊ, ಈ ವರ್ತಮಾನವನ್ನು ಗುಟ್ಟಾಗಿಡು. ಈ ತಂತಿಯನ್ನು ಈ ಹೊತ್ತು ರಾತ್ರಿ

ಭೋಜನದ ನಂತರ ಇಂದಿರೆಯ ಮೇಜಿನಲ್ಲಿಟ್ಟು, ಅಡಗಿ ನಿಂತು, ಅವಳದನ್ನು ಓದಿನೋಡಿ ಏನು ಮಾಡುತ್ತಾಳೆಂದು ನೋಡಿ, ವಿನೋದ ಪಡೆಯಬೇಕೆಂದು ಮನಸ್ಸಿದೆ" ಎಂದು ಹೇಳಲು, ಅವಳು ಹಾಗಾಗಲೆಂದುತ್ತರಕೊಟ್ಟಳು. ಆ ಬಳಿಕ ಅಮೃತರಾಯನು ವಾಡಿಕೆಯಂತೆ ಪ್ರಥಮತಃ ರಾತ್ರಿ ಭೋಜನವನ್ನು ತೀರಿಸಿ, ಜಲಜಾಕ್ಷಿ, ಇಂದಿರಾಬಾಯಿ ಇವರಿಬ್ಬರೂ ಭೋಜನಕ್ಕೆ ಕುಳಿತಾಗ, ಇಂದಿರಾಬಾಯಿ ಕೋಣೆಗೆ ಹೋಗಿ, ಮೇಜಿನ ಮೇಲೆ ಒಂದು ಕಡೆಯಲ್ಲಿ ಆ ತಂತಿಯನ್ನು, ಇನ್ನೊಂದು ಕಡೆಯಲ್ಲಿ ಭಾಸ್ಕರರಾಯನ ಸೂರ್ಯಕಾಂತಿ ಚಿತ್ರವನ್ನು ಸಹ ಇಟ್ಟು, ಮತ್ತೊಂದು ಕೋಣೆಗೆ ಹೋಗಿ, ಇಂದಿರಾಬಾಯಿಯ ಮೇಜಿನ ಎದಿರಿನ ಕಿಟಕಿಯ ಬಾಗಲುಗಳನ್ನು ತುಸಾ ಎಡೆಬಿಟ್ಟು ಮುಚ್ಚಿ ಆ ಎಡೆಯಿಂದ ನೋಡುತ್ತಿರುವಾಗ, ಮೊದಲೇ ನಿಶ್ಚಯಿಸಿದ ಪ್ರಕಾರ ಜಲಜಾಕ್ಷಿಯೂ ಬಂದು ಆ ಎಡೆಯಿಂದ ನೋಡತೊಡಗಿದಳು. ಇಂದಿರಾಬಾಯಿಯು ನೆಟ್ಟಗೆ ಬಂದು ಮೇಜಿನ ಬಳಿ ನಿಲ್ಲಲು, ಪ್ರಥಮತಃ ತಂತಿಯನ್ನು ಕಂಡಳು. ಅದನ್ನು ತೆಗೆದು ಓದಿನೋಡಿ, ಅತ್ತಿತ್ತ ಯಾರಿದ್ದಾರೆಂದು ನೋಡುವಾಗ ಚಿತ್ರ ಸಹ ಕಂಡು, ಅದನ್ನು ಮತ್ತೊಂದು ಕೈಯಲ್ಲಿ ಹಿಡಿದುಕೊಂಡು, ಒಮ್ಮೆ ತಂತಿ ಮತ್ತೊಮ್ಮೆ ಚಿತ್ರ, ಹೀಗೆ ಐದಾರುಸಾರಿ ಸರದಿಯ ಮೇಲೆ ನೋಡುತ್ತಾ, ತನ್ನನ್ನಾರ್ಯಾರಾದರೂ ನೋಡುತ್ತಾರೊ ಎಂದು ಆಗಾಗ್ಗೆ ಅಂಜುತ್ತಾ ತಕ್ಷಣವೇ ಅವುಗಳನ್ನು ಮೇಜಿನ ಮೇಲಿಡುತ್ತಾ, ಪುನಃ ಅತ್ತಿತ್ತ ನೋಡಿಕೊಂಡು ಅವುಗಳನ್ನು ತೆಗೆದು ನೋಡುತ್ತಾ, ಸ್ವಲ್ಪ ಸಮಯದ ವರೆಗೆ ಆಲೋಚಿಸುತ್ತಾ ತಾನು ನಿದ್ದೆಯಲ್ಲಿದ್ದು ಕನಸು ಕಂಡೆನೋ, ಅಲ್ಲ ಎಚ್ಚರವಿದ್ದೇನೊ ಎಂದು ನೋಡುವುದಕ್ಕೋಸ್ಕರ ಒಂದು ಕೈಯ ಬೆರಳನ್ನು ದೀಪದ ಚಿಮಣಿಯ ಮೇಲೆ ಹಿಡಿದು 'ಹ್ಯಾ' ಎಂದು ತಕ್ಷಣವೇ ಹಿಂತೆಗೆದು ಒರಸಿಕೊಂಡು, ಎಚ್ಚರದಲ್ಲೇ ಇದ್ದೇನೆಂದು ನಿಶ್ಚಯಪಟ್ಟ ಹಾಗೆ ಕಾಣಿಸುತ್ತಾ, ಕಣ್ಣುಗಳನ್ನೊರಸಿಕೊಳ್ಳುತ್ತಾ, ಕುರ್ಚಿಯಲ್ಲಿ ಕುಳಿತುಕೊಂಡು, ಒಂದೆರಡು ನಿಮಿಷದ ವರೆಗೆ ಪುನಃ ಆಲೋಚಿಸುತ್ತಾ ಪುನಃ ಎದ್ದುನಿಂತು, ಚಿತ್ರವನ್ನು ಮತ್ತೊಮ್ಮೆ ನೋಡಿ ನಗುತ್ತಾ, ಒಂದೆರಡು ನಿಮಿಷದನಂತರ ಅಳುತ್ತಾ, ಕಡೆಗೆ ಇದೆಲ್ಲ ತನ್ನ ಮನಸ್ಸನ್ನು ಪರೀಕ್ಷಿಸುವುದಕ್ಕೋಸ್ಕರ ಮಾಡಿದ ಉಪಾಯವಲ್ಲದೆ ಬೇರೇನಲ್ಲವೆಂದು ಆಲೋಚಿಸಿಯೋ ಏನೊ, ಮುಗುಳುನಗೆ ನಕ್ಕು, ಅಪ್ಪಯ್ಯನನ್ನು ಕರೆಯುತ್ತೇನೆಂದು ಗಟ್ಟಿಯಾಗಿ ಹೇಳಿ, ಕೋಣೆಯಿಂದ ಹೊರಡುವಷ್ಟರಲ್ಲಿ ಅಮೃತರಾಯನೂ ಜಲಜಾಕ್ಷಿಯೂ ನಗುತ್ತಾ ಅವರಿದ್ದ ಕೋಣೆಯಿಂದ ಹೊರಟು ಅವಳಿಗೆ ಅಭಿಮುಖವಾದರು. ಇಂದಿರಾಬಾಯಿಯು–

"ಇದೇನಪ್ಪಯ್ಯಾ, ಹಾಸ್ಯಮಾಡುತ್ತಿಯಾ?"

"ಹಾಸ್ಯ ಮಾಡಿದ್ದ್ಯಾರು? ಈ ಮೇಜಿನ ಹತ್ತಿರ ನಿಂತು ನೀನಲ್ಲವೆ?"

"ನೀನೇಕೆ ಅಡಗಿ ನಿಂತದ್ದು?"

"ನೀನೇನು ಮಾಡುತ್ತೀಯೊ ನೋಡುವುದಕ್ಕೆ."

"ನಾನೇನು ಮಾಡಿದೆ?"

"ಈಗಲೇ ಮರೆತುಬಿಟ್ಟೆಯಾ?"

"ಅದರಲ್ಲೇನು ಅಸಹಜವಾದ್ದು?"

"ಹಾಗಾದರೆ ಅವೆಲ್ಲ ಸಹಜವಾದ ವಿಕಾರಗಳೇನು?"

"ಸಹಜವಾದವುಗಳೇ, ಮತ್ತೇನು?"

"ಚಿಮಿಣಿಯ ಮೇಲೆ ಕೈಬೆರಳನ್ನು ಹಿಡಿದು 'ಹ್ಯಾ' ಎಂದು ಹಿಂತೆಗೆದದ್ದು ಸಹ ಸಹಜವಷ್ಟೆ?" (ನಗುತ್ತಾನೆ.)

"ಏಕಪ್ಪಯ್ಯಾ, ನನ್ನನ್ನು ಆಗಾಗ್ಗೆ ಪರೀಕ್ಷಿಸುವುದು?"

"ನೀನು ಸ್ಪಷ್ಟವಾಗಿ ಯಾವ ಮಾತನ್ನಾದರೂ ಆಡದಿದ್ದ ಮೇಲೆ ನಿನ್ನ ಮನಸ್ಸನ್ನು ಪರೀಕ್ಷಿಸುವುದು ಅವಶ್ಯವಲ್ಲವೆ?"

"ಮೊನ್ನೆ ನೀನು ಮಾತನಾಡುವಾಗ, ನಾನು ಕಡೇಗೆ ಒಂದು ವಿಷಯವನ್ನು ಹೇಳುವುದಕ್ಕೆ ಒಂದೆರಡು ಶಬ್ದಗಳನ್ನುಚ್ಚರಿಸುವಷ್ಟರಲ್ಲಿ ನೀನು 'ಹೌದು, ಹೌದು, ನಾನು ಬಲ್ಲೆನು' ಎಂದು ಹೇಳಿ ಹೋಗಿಬಿಟ್ಟೆ. ಬಲ್ಲವರಿಗೆ ಹೇಳತಕ್ಕದ್ದೇನಿದೆ ಎಂದು ನಾನು ಸುಮ್ಮಗಾದೆ. ನೀನು ಬಲ್ಲೆ ಎಂಬುದೇನು?"

"ಇಂದಿರಾಗೆ ಭಾಸ್ಕರನ ಸಂಗಡ ವಿವಾಹವಾಗ ಮನಸ್ಸಿದೆ ಎಂಬುದೇ."

"ಹಾಗಾದರೆ ಈ ಹೊತ್ತು ಪುನಃ ಪರೀಕ್ಷೆ ಏತಕ್ಕೆ?"

"ಮನಸ್ಸಿಗೆ ಇನ್ನಷ್ಟು ಸಮಾಧಾನಪಡುವುದಕ್ಕೆ."

"ಈಗ ಬೇಕಷ್ಟು ಸಮಾಧಾನಪಟ್ಟೆಯಷ್ಟೆ?" (ನಗುತ್ತಾಳೆ)

"ಪೂರ್ಣವಾಗಿ ಸಮಾಧಾನಪಟ್ಟೆನು. ಭಾಸ್ಕರನ ಬರೋಣವನ್ನು ಮಾತ್ರ ಕಾಯುತ್ತೇನೆ."

"ಹೆತ್ತ ತಾಯಿತಂದೆಗಳ ಮನಸ್ಸು ಹೇಗೆಂದರಿಯೆ. ಈ ಕಾರ್ಯದಲ್ಲಿ ಅವರಿಗೆ ನಿಶ್ಚಯವಾಗಿ ಸಂತೋಷವಿರದು."

"ಭೀಮರಾಯನನ್ನು ಒಂದು ವೇಳೆಗೆ ಸಮಾಧಾನಪಡಿಸಬಹುದು. ಅಂಬಾಬಾಯಿಯ ವಿಷಯ ಮಾತ್ರ ಹೇಗೊ ತಿಳಿಯದು."

"ಅವರಿಬ್ಬರಿಗೂ ನನ್ನ ವಿಷಯದಲ್ಲಿ ಒಂದು ದುರಾಲೋಚನೆ ಇತ್ತು. ಅದ್ಯಾವುದೆಂದು ನಾನು ನಿನಗೆ ಮೊದಲೇ ತಿಳಿಸಿದ್ದೇನೆ. ನಾನದಕ್ಕೆ ಒಪ್ಪದಿದ್ದುದರಿಂದ ಅವರಿಗೆ ಶಾನೆ ಅಸಂತುಷ್ಟಿ ಇದೆ. ಹೇಗೂ ಆಗಲಿ; ಅವರನ್ನೊಂದು ದಿವಸ ಇಲ್ಲಿಗೆ ಕರೆಯಿಸಿದರೆ ಅವರೊಡನೆ ಮಾತನಾಡಿ ನೋಡಬಹುದು. ಅವರು ಕಾರ್ಯಾಕಾರ್ಯಗುಣದೋಷವನ್ನು ವಿಚಾರಿಸಿ ಮಾತನಾಡಿದರೆ ಸರಿ, ಇಲ್ಲವಾದರೆ ಮಾಡತಕ್ಕದ್ದೇನು? ಏವಂಚ ಅವರೊಡನೆ ಮಾತನಾಡುವುದು ಅವಶ್ಯವೆಂದು ನನಗೆ ಕಾಣುತ್ತೆ."

"ವಿಹಿತವೇ– ನಾಳೆಗೆ ತಾನೇ ಕರೆಯಿಸುತ್ತೇನೆ. ನಮ್ಮಿಂದ ಕೂಡುವಷ್ಟರ ಮಟ್ಟಿಗೆ ಅವರಿಗೆ ನ್ಯಾಯನೀತಿಯನ್ನು ಹೇಳಿ ನೋಡೋಣ. ಆ ಮೇಲೆ ಕಾರ್ಯ ಮುಂದರಿಸುವುದೇ."

ಹೀಗೆಲ್ಲ ಮಾತನಾಡಿ ಹೇಗೂ ವಿವಾಹಕಾರ್ಯವನ್ನು ಮುಂದರಿಸುವುದೇ ಸೈ ಎಂದು ನಿಶ್ಚಯಿಸಿ, ಅಮೃತರಾಯನು ಜಲಜಾಕ್ಷಿಯೊಡನೆ,

"ಉಡಿಗೆ, ಆಭರಣವೆ ಮುಂತಾದ ಅಲಂಕಾರಗಳು, ಊಟಉಪಚಾರಗಳು, ವಾದ್ಯ ತಾಳಮೇಳ ಇವೆ ಮುಂತಾದ ವಿಷಯಗಳಲ್ಲಿ ನಿನ್ನ ಆಲೋಚನೆ ಏನು? ಚೆನ್ನಾಗಿ ಆಲೋಚಿಸಿ ಹಿಂದಣಿಂದ ತಿಳುಹಿಸಿದರೂ ಆಗಬಹುದು."

"ಅದನ್ನೆಲ್ಲ ನಾನು ತಕ್ಕ ಸಮಯದಲ್ಲಿ ತಿಳುಹಿಸುವೆನು. ನಾನು ಪ್ರಥಮತಃ ಆಲೋಚಿಸಬೇಕಾದ ಕಾರ್ಯಗಳು ಬೇರೆ ಎರಡಿವೆ ಎಂದು ನನಗೆ ಕಾಣುತ್ತೆ. ಒಂದನೆಯದು, ಭಾಸ್ಕರನು ಸುಕ್ಷೇಮದಿಂದ ಇಲ್ಲಿಗೆ ಬಂದು ಮುಟ್ಟುವ ಹಾಗಿನ ಅನುಕೂಲತೆಗಳನ್ನು ಮಾಡುವುದು; ಎರಡನೆಯದು, ಆತನು ಮುಟ್ಟಿದ ಬಳಿಕ ಅವನ ತಾಯಿಯ ಹತ್ತಿರ ಆಲೋಚಿಸಿ ಇಬ್ಬರೂ ಕೂಡಿ ಏನು ಹೇಳುತ್ತಾರೆಂಬುದನ್ನು ನೋಡುವುದು."

"ಅವನ ತಲಪೋಣದ ವಿಷಯದಲ್ಲಿ ಸಮಸ್ತ ಅನುಕೂಲತೆಗಳನ್ನು ನಾನು ಮಾಡುತ್ತೇನೆ. ಅದನ್ನು ಕುರಿತು ಆಲೋಚಿಸತಕ್ಕದ್ದೇನೂ ಇಲ್ಲ. ಮತ್ತೊಂದು ಕಾರ್ಯವೆಂದು ನೀನು ಹೇಳಿದ್ದು ಸರಿಯೇ. ಆದರೆ ಭಾಸ್ಕರನ ವಿಷಯದಲ್ಲಿ ನಾನುತ್ತರವಾದಿ. ಅವನ ಆಕ್ಷೇಪವೇನೂ ಇರದು. ಅವನ ಸಮ್ಮತ ಸಿಕ್ಕಿತೆಂದೇ ಎಣಿಸು. ಸುಶೀಲೆಯೊಡನೆ ನಾಳೆಯೇ ಮಾತನಾಡಬೇಕು. ಆಕೆಯು ಕಟ್ಟಳೆಯವರ ಪಕ್ಷದವಳಲ್ಲ. ವಿಹಿತವಾದ ಕಾರ್ಯಕೆ ಎಂದೂ ಆಕ್ಷೇಪಿಸಳು. ಹುಡುಗನನ್ನು ವಿಲಾಯತಿಗೆ ಕಳುಹಿಸುವಾಗ ಹಾಂ, ಹೂಂ ಏನಾದರೂ ಮಾತನಾಡಿದ್ದಾಳೆಯೇ? ಇನ್ನಷ್ಟು ಸಂತೋಷವನ್ನೇ ಪಟ್ಟಳು. ಇಂದಿರೆಯನ್ನು ನೋಡಿದ ಮಾತ್ರದಲ್ಲಿಯೇ ಅವಳೇನು ಹೇಳುವಳೆಂಬುದು ನನಗೆ ಈಗಲೇ ನಿಶ್ಚಯವಿದೆ– ಆದರೂ ಅವಳನ್ನು ಸಹ ನಾಳೆಯೇ ಕರೆಯಿಸುತ್ತೇನೆ" ಎಂದು ಹೀಗೆಲ್ಲಾ ಮಾತನಾಡುತ್ತಿರುವಾಗ, ತಂತೀ ಟಪ್ಪಾಲಿನ ಪೇದೆಯು ಒಂದು ತಂತಿಯನ್ನು ತಂದುಕೊಟ್ಟನು. ಒಡನೆ ಅದನ್ನು ಬಿಚ್ಚಿ ನೋಡಿ, "ಬರುವ ಹಡಗದಲ್ಲಿದ್ದೇನೆ. ಮಾತೃಶ್ರೀಯವರಿಗೆ ತಿಳಿಸುವುದು: ಅಟ್ಟಹಾಸವೇನೂ ಬೇಡ. ಜಿಲ್ಲೆ" ಎಂಬಲ್ಲಿಯವರೆಗೆ ಗಟ್ಟಿಯಾಗಿ ಓದಿ "ಕಮಲಪುರವೇ" ಎಂಬ ಶಬ್ದವನ್ನೋದದೆ ಇಂದಿರಾಬಾಯಿಯ ಮುಖವನ್ನು ನೋಡಿ ನಗುತ್ತಾ ತಂತಿಯನ್ನು ಮಡಚುವಾಗ, ಅವಳು "ಅದೇನಪ್ಪಯ್ಯಾ, ಯಾವಾಗಲೂ ಪೋಕಾಟಿಕೆಯೆ? ಜಿಲ್ಲೆ ಯಾವುದಂತೆ?" ಎಂದು ಕೇಳಲು, ಪುನಃ ತೆರೆದು ಏಕಾಗ್ರದೃಷ್ಟಿಯಿಂದ ನೋಡಿದ ಹಾಗೆ ನಟಿಸಿ, "ಏನೋ ಸ್ಪಷ್ಟವಾಗಿ ಕಾಣಿಸುವುದಿಲ್ಲ" ಎಂದು ನಗುತ್ತಾ ಪುನಃ ಮಡಚುವಾಗ ಅವಳದನ್ನು ಫಕ್ಕೆಂದು ಕೈಯಿಂದ ಕಸಕೊಂಡು ತೆರೆದು ನೋಡಲು, "ಕಮಲಪುರವೇ" ಎಂದು ಸ್ಪಷ್ಟವಾಗಿ ಬರೆದಿರುವುದನ್ನು ಓದಿ, ಇದು ಸ್ಪಷ್ಟವಿಲ್ಲವೇ ಎಂದು ಕೇಳಲು, ಅವನೂ ಜಲಜಾಕ್ಷಿಯೂ ಹೊಟ್ಟೆ ತುಂಬ ನಗಾಡಿದರು. ಆಗ ಇಂದಿರಾಬಾಯಿಯು, "ನಿಮಗೆ ಎಲ್ಲಾ ಕಾರ್ಯದಲ್ಲಿಯೂ ಎಲ್ಲಾ ಸಮಯದಲ್ಲಿಯೂ ಹಾಸ್ಯವೇ" ಎಂದಳು. ಅಮೃತರಾಯನು "ಏನೇ? ನನ್ನ ಕಣ್ಣಿಗೆ ಸ್ಪಷ್ಟವಾಗಿ ಕಾಣಿಸದಿದ್ದದ್ದು ನಿನ್ನ ಕಣ್ಣಿಗೆ ಕಾಣಿಸಿತೆಂದೂ ನನಗೆ ಚಾಳೀಸು ಇರಬೇಕೆಂದೂ ಅರ್ಥ ಹುಟ್ಟುವ ಹಾಗೆ ನೀನೇ ಹಾಸ್ಯವನ್ನು ಮಾಡಿ ನಾನು ಹಾಸ್ಯ ಮಾಡುತ್ತೇನೆಂದು ಹೇಳುತ್ತೀಯಾ?" ಎಂದು ಕೇಳಲು ಅವಳು ಪುನಃ ಆ ತಂತಿಯನ್ನು ತೆರೆದು ಚೆನ್ನಾಗಿ

ನೋಡಿ—ಓದಲಾರಂಭಿಸುವಾಗ, ಗಂಡಹೆಂಡಿರಿಬ್ಬರೂ ಪುನಃ ಖೋ! ಎಂದು ನಕ್ಕರು. ಆಗ ಅವಳು—"ಅವ್ವಾ, ಹಾಸ್ಯಕ್ಕೆ ನೀನೂ ಕೂಡಿದೆಯಾ? ನನಗೆಷ್ಟು ಹಾಸ್ಯಮಾಡಿದರೂ ನಿಮಗಿಬ್ಬರಿಗೂ ತೃಪ್ತಿಯೇ ಇಲ್ಲವೇ?" ಎಂದು ಕೇಳಲು, ಜಲಜಾಕ್ಷಿಯು ಅವಳನ್ನಪ್ಪಿ ಹಿಡಿದುಕೊಂಡು, "ಅಮ್ಮಣ್ಣೀ, ಚೇಷ್ಟೆಯ ಮಾತಿಗೆ ಮನಸ್ಸು ಕೊಡಬೇಡ. ನಾವು ನಿನ್ನ ಸಂಗಡವಲ್ಲದೆ ಮತ್ತ್ಯಾರ ಸಂಗಡ ವಿನೋದವಾಡುವುದು? ನಿನ್ನನ್ನು ಕಣ್ಣು ತುಂಬಾ ನೋಡಿ ನಿನ್ನ ಹತ್ತಿರ ಮಾತನಾಡುತ್ತಾ ನಗಾಡುತ್ತಾ ಇರುವುದಕ್ಕಿಂತ ಹೆಚ್ಚಿನ ಸಂತೋಷ ನಮಗೆ ಬೇರೆ ಎಲ್ಲಿನದು?" ಎಂದು ಅವಳನ್ನು ಮುದ್ದುಗೈದಳು. ಸಾಯಂಕಾಲವಾಯಿತು.

## ೫೬

ಮರುದಿವಸ, ಆದಿತ್ಯವಾರ ಬೆಳಿಗ್ಗೆ ಕಾಫಿ ಮುಂತಾದ್ದನ್ನು ತೀರಿಸಿ, ಜಲಜಾಕ್ಷಿಯು ಸುಬ್ಬಿಯನ್ನು ಕರೆದು, "ಮಗನ ತಂತಿ ಬಂದಿದೆ, ಬರುವ ಹಡಗದಲ್ಲಿದ್ದಾನಂತೆ. ಅಸಿಸ್ಟೆಂಟ್ ಕಲೆಕ್ಟರಿಯ ಉದ್ಯೋಗ ಇದೇ ಜಿಲ್ಲೆಯಲ್ಲ್ಯಂತೆ" ಎಂದು ತಿಳಿಸಿ, "ಸುಶೀಲೆಯನ್ನು ಕರೆದು ತಾ" ಎಂದು ಹೇಳಿ ಕಳುಹಿಸಿದಳು. ಸುಬ್ಬಿಯು ಓಡುತ್ತಾ ಹೋಗಿ, ಸುಶೀಲೆಯೊಡನೆ,

| | |
|---|---|
| "ಅಮ್ಮಾ—ಈರೆ ಮಗೆ, ಉಳೊ! ಯೆನಾಬಾಲೆ! ಯೇನತ್ತೆ ದಿನೋಲಾ ಮೀಪಾಯಿನಿ!" | "ಅಮ್ಮಾ—ನಿಮ್ಮ ಮಗ, ಅಯ್ಯೋ! ನನ್ನ ಮಗು! ನಾನಲ್ಲವೇ ಪ್ರತಿ ದಿವಸವೂ ಮೀಯಿಸಿದ್ದು!" |
| "ಮಗೆ ದಾನೆಯಾ? ಪಣ್‌ಬೇಗೋ!" | "ಮಗನೇನೆ? ಹೇಳು ಬೇಗ." |
| "ಮೂಜಿ, ನಾಲ್ ದಿನೊಕು ಒರಾ ಸುಬ್ಬಿ, ಇಂದಾ, ಅಂದ್‌ದ್ ಆಜಿ ದುಡ್ಡು, ಪಣವು, ಇಂಚ ಕೊರಿಯೆನ ಬಾಲೆ! ಯೆನಾ ಭಾಸ್ಕರರಾಯೆರ್ ಉಳೊ!" | "ಮೂರು ನಾಲ್ಕು ದಿವಸಕ್ಕೊಮ್ಮೆ ಸುಬ್ಬಿ, ಇಗೋ ಎಂದು ಆರು ದುಡ್ಡು, ಪಾವಲಿ ಹೀಗೆ ಕೊಟ್ಟ ನನ್ನ ಮಗು, ನನ್ನ ಭಾಸ್ಕರ ರಾಯ ಅಯ್ಯೋ!" |
| "ದಾನೆ ಸುಬ್ಬಿ, ಈ ಬೇಗ ಪಣಯನಾ? ನಿಕ್ ದಾನೆ ಆತ್‌ಂಡ್?" | "ಏನು ಸುಬ್ಬಿ, ನೀನು ಬೇಗ ಹೇಳ ಲಿಕ್ಕಿಲ್ಲವೆ? ನಿನಗೇನಾಗಿದೆ?" |
| "ವಿಲಾಯ್ತಿಡ್ದ್, ಕಪ್ಪಲ್‌ಡ್, ಕಡಲ್‌ಡ್, ಯೆನಾಬಾಲೆ, ಉಳೊ!" | "ವಿಲಾಯತಿನಿಂದ, ಹಡಗದಲ್ಲಿ ಸಮುದ್ರ ದಲ್ಲಿ, ನನ್ನ ಮಗು, ಅಯ್ಯೋ!" |
| "ಸುಬ್ಬಿ, ಯೆನ ಅಪ್ಪೆ! ಈ ದಾನೆಪಣ್ಣಾ? ಬೇಗ ಪಣ್." | "ಸುಬ್ಬಿ! ನನ್ನ ತಾಯೇ! ನೀನೇನು ಹೇಳುತ್ತಿ! ಬೇಗ ಹೇಳು!" |

| | |
|---|---|
| "ಕಪ್ಪಲ್‌ಡ್ ಬರ್ಪೆರ್‌ಗೆ, ಎಲ್ಲೆ ಎಲ್ಲಾಂಜಿ ಮುಟ್ಟುವೆರ್‌ಗೆ, ತಂತಿ ಬೈದ್‌ಂಡ್, ಮೂಳೇ ಕಲ್ಲೆಕಟ್ಟು ಕೆಲಸಗೆ; ಕುಡ ಒಂಜಿ ಸುದ್ದಿ, ರಡ್ಡೆಗ್ ನಾಲ್‌ಕಾರ್‌ಗೆ, ಅಮ್ಮಾ, ಯೆನನ್ ಮದಪಡೆ." | "ಹಡಗದಲ್ಲಿ ಬರುತ್ತಾರಂತೆ, ನಾಳೆ ನಾಡದು ಮುಟ್ಟುವರಂತೆ. ತಂತಿ ಬಂದಿದೆ. ಇಲ್ಲೇ ಕಲೆಕ್ಟರಿಯ ಕೆಲಸವಂತೆ; ಮತ್ತೊಂದ್ದು ಸುದ್ದಿ, ಎರಡಕ್ಕೆ ನಾಲ್ಕು ಕಾಲಂತೆ, ಅಮ್ಮ, ನನ್ನನ್ನು ಮರೆಯಬೇಡಿರಿ." |
| "ನಿನ ಪಾತೆರದ ಪೊರ್ಲೆ! ಅವೆನ್ ಸುರುಟೇ ಪಣ್‌ತ್ವನೆ, ಯೆಂಕ್ ಕಣ್ಣ್‌ಡ್ ಮಂಜಳ್‌ದ ಪೊಡಿಪಾಡಿ ಲೆಕ್ಕ ಆಂಡ್, ಬಿರ್ಸೆದಿ!" | "ನಿನ್ನ ಮಾತಿನ ಸೊಗಸೆ! ಅದನ್ನು ಪ್ರಥಮದಲ್ಲೇ ಹೇಳಬಹುದಿತ್ತಷ್ಟೆ! ನನಗೆ ಕಣ್ಣಿನಲ್ಲಿ ಅರಸಿನದ ಹುಡಿ ಹಾಕಿದಂತಾಯಿತು, ಜಾಣೆ." |
| "ಈರ್ ಬರೊಡುಗೆ, ಅಮ್ಮ ಪಣ್ತೆರ್; ಪಿದಾಡ್ಡಿ." | "ನೀವು ಬರಬೇಕಂತೆ, ಅಮ್ಮ ಹೇಳಿದ್ದಾರೆ; ಹೊರಡಿರಿ." |

ಸುಶೀಲೆಯು ಹೊರಟು ಸುಬ್ಬಿಯ ಸಂಗಡ ಬಂದಳು. ಜಲಜಾಕ್ಷಿಯು "ಬನ್ನಿರವ್ವಾ" ಎಂದುಪಚರಿಸಿ ಕುಳ್ಳಿರಿಸಿ, "ವರ್ತಮಾನ ಕೇಳಿದ್ದಿರೇನು? ಭಾಸ್ಕರನು ಬರುವ ಹಡಗದಲ್ಲಿದ್ದಾನೆ. ಉದ್ಯೋಗ ಇಲ್ಲೇಯಂತೆ."

"ನಿಮ್ಮ ದಯಾಪ್ರಸಾದ! ನನ್ನ ಮೈಯ ಚರ್ಮದ ಜೋಡನ್ನೇ ಮಾಡಿಕೊಟ್ಟರೂ ನಿಮ್ಮ ಋಣದ ಲಕ್ಷದಲ್ಲೊಂದು ಪಾಲಾದರೂ ಪರಿಹಾರವಾಗುವುದುಂಟೆ?"

"ಏತಕ್ಕವ್ವಾ, ಹೀಗೆ ಮಾತನಾಡುತ್ತೀರಿ? ಭಾಸ್ಕರನೆಂದರೆ ಆ ಶಬ್ದದ ಅರ್ಥದಂತೆಯೇ ಬುದ್ಧಿ ಪ್ರಕಾಶವಿರುವವನು. ಅವನ ಬುದ್ಧಿಯಿಂದಲೇ ಇಷ್ಟೆಲ್ಲ ಆದ್ದಲ್ಲದೆ ನಮ್ಮಿಂದಾದ್ದೇನು? ನಾಲ್ಕು ಕಾಸು ನಾವು ವೆಚ್ಚಮಾಡಿದ್ದೇವೆ; ನಿಜ, ಆದರೆ ಅದೇನು ದೊಡ್ಡ ಮಾತು?"

"ಸರಿಯೇ–ಆದರೆ ನಾನು ಇದನ್ನೆಲ್ಲ ಸ್ವಪ್ನದಲ್ಲ್ಯಾದರೂ ಆಲೋಚಿಸತಕ್ಕ ಮಾತಿತ್ತೇ?"

"ಇರಲಿ–ಸದ್ಯ, ಇನ್ನೊಂದು ಮಾತು. ನಮ್ಮ ಇಂದಿರೆ– ('ಎಲ್ಲೇ ಇತ್ತ ಬಾರೇ', ಎಂದವಳನ್ನು ಕರೆದು ಹತ್ತಿರ ಕುಳ್ಳಿರಿಸಿಕೊಂಡು) ನಮ್ಮ ಇಂದಿರೆಯನ್ನು ಭಾಸ್ಕರನಿಗೆ–"

"ಓಹೋ! ಗೊತ್ತಾಯಿತು! ನನ್ನೊಡನೇಕವ್ವಾ ಕೇಳುವುದು? ಈ ವರೆಗೆ ನೀವೆ ನಡೆಯಿಸಿದಿರಿ– ಇನ್ನು ಮುಂದೆಯೂ ನನಗೆ ನೀವೇ ಅಲ್ಲದೆ ಬೇರೆ ಯಾರು? ನಿಮ್ಮಾಲೋಚನೆಗೆ ವಿಪರೀತವಾದ ಆಲೋಚನೆ ತಿಲಮಾತ್ರವಾದರೂ ನನಗಿರದೆಂಬುದನ್ನು ನೀವೇ ತಿಳಿದಿರುತ್ತೀರಷ್ಟೆ?" ಎಂದುತ್ತರಕೊಟ್ಟು, ಮುಖತಗ್ಗಿಸಿ ಕುಳಿತಿದ್ದ ಇಂದಿರಾಬಾಯಿಯ ಮುಖವನ್ನು ಬಗ್ಗಿ ನೋಡಿ, ಅವಳ ಸೌಂದರ್ಯಕ್ಕೆ ಮೆಚ್ಚಿ, ಅವಳೊಡನೆ ನಾಲ್ಕು ಮಾತುಗಳನ್ನಾಡೋಣವೆಂದು–

"ಏನವ್ವಾ? ನಾನ್ಯಾರೆಂದು ಬಲ್ಲೆಯಾ?"

"ಬಲ್ಲೆನು?"

"ಹಾಗಾದರೆ ಮಾತನಾಡದೆ ಏಕೆ ಸುಮ್ಮಗಿದ್ದೆ?"

"ನೀವಿಬ್ಬರು ಮಾತನಾಡುವಾಗ ಮಧ್ಯಪ್ರವೇಶಿಸಿ ಮಾತನಾಡುವುದು ಯೋಗ್ಯವೆಂದು ಕಾಣದೆ ಸುಮ್ಮಗಿದ್ದೆ."

"ನಾನ್ಯಾರೆಂದು ಬಲ್ಲೆ?"

(ಉತ್ತರ ಕೊಡದೆ ಮುಗುಳು ನಗೆ ನಕ್ಕು, ಸೆರಗು ಬಾಯಿಯ ಮೇಲೆ ತರುತ್ತಾಳೆ.)

"ಉತ್ತರವಿಲ್ಲ ಏಕವ್ವಾ?"

"ಉತ್ತರವೇನೆಂಬುದು ನಿಮಗೆ ಗೊತ್ತಿರಬೇಕು."

"ನಿನ್ನ ಬಾಯಿಯಿಂದಲೇ ಬರುವ ಶಬ್ದಗಳನ್ನು ಕೇಳಬೇಕೆಂದು ತುಂಬಾ ಆಸೆ ಇದೆ– ಹೇಳಬಾರದೆ?"

"ಮಾತುಶ್ರೀ ಸಮಾನರಾದ–" ಕಿರಿನಗೆ ನಕ್ಕು ಸುಮ್ಮನಾದಳು. ಆಗ ಜಲಜಾಕ್ಷಿ ಸುಶೀಲೆಯೊಡನೆ, "ಆಯಿತೇ? ಮತ್ತೇನು? ಇನ್ನೇನು ಕಕ್ಕುಲತೆ?" ಎಂದು ಕೇಳಿ, ಇಬ್ಬರೂ ಸಂತೋಷದಿಂದ ಸ್ವಲ್ಪ ನಿಮಿಷಗಳವರೆಗೆ ಬೇರೆ ಬೇರೆ ಸಂಗತಿಗಳನ್ನು ಕುರಿತು ಮಾತನಾಡಿ, ಸುಶೀಲೆಯು "ಇನ್ನು ಬರುತ್ತೇನೆ" ಎಂದು ಹೇಳಿ ಮನೆಗೆ ಹೋಗ ಹೊರಟಾಗ, ಪುನಃ ಒಮ್ಮೆ ಇಂದಿರಾಬಾಯಿಯನ್ನು ನೋಡಿ ಎರಡು ಸಾರಿ ಅವಳ ಬೆನ್ನು ತಟ್ಟಿ ಸುಬ್ಬಿಯನ್ನು ಕರೆದುಕೊಂಡು ಮನೆಗೆ ತಿರುಗಿಬಂದಳು.

ಆ ಬಳಿಕ ಜಲಜಾಕ್ಷಿಯು ಪತಿಯನ್ನು ಒಳಗೆ ಕರೆದುಕೊಂಡು ಬಂದು ನಡೆದ ವೃತ್ತಾಂತವೆಲ್ಲವನ್ನು ತಿಳಿಸಲು, ಅವನು "ನಾನು ಮೊದಲೇ ಹೇಳಲಿಲ್ಲವೇ?" ಎಂದು ಸಂತೋಷಪಟ್ಟು, ಒಂದೆರಡು ಮಾತುಗಳನ್ನಾಡಿ ಸ್ನಾನಕ್ಕೆ ಹೊರಟುಹೋದನು.

ಸ್ನಾನ ಭೋಜನಗಳಾದ ನಂತರ ಅಮೃತರಾಯನು ಈ ಕೆಳಗಿನ ಪತ್ರವನ್ನು ಬರೆದು ದೂಮನ ಕೈಯಲ್ಲಿ ಕೊಟ್ಟು ಭೀಮರಾಯನಿಗೆ ಕಳುಹಿಸಿದನು–

"ರಾಜಶ್ರೀ ಕಮಲಪುರ ಧರ್ಮವಿಚಾರಕ ಹಂಪೇ ಭೀಮರಾಯರೀಗೆ, ಅಮೃತರಾಯನ ನಮಸ್ಕಾರಗಳು. ಉಭಯ ಕ್ಷೇಮ. ತರುವಾಯ– **ನಮ್ಮ** ಇಂದಿರೆಯ ವಿಷಯದಲ್ಲಿ ತಮ್ಮ ಹತ್ತಿರ ಒಂದು ಮಾತನ್ನಾಡಬೇಕೆಂದಪೇಕ್ಷೆ ಇದೆ. ಈಗಲೇ ಹೊರಟುಬಂದರಾಗಬಹುದು. ಇಂದಿರೆಯು ತಮ್ಮ ಉದರದಲ್ಲಿ ಜನಿಸಿದ್ದೆಂಬ ಒಂದೇ ಕಾರಣದಿಂದಲ್ಲದೆ ಮಾತನಾಡಲಿಕ್ಕಿರುವ ವಿಷಯದಲ್ಲಿ ತಮ್ಮ ಅನುಮತಿ ಅಥವಾ ಅಭಿಪ್ರಾಯವು ಯಾವುದೊಂದು ಪ್ರಯೋಜನಕ್ಕೆ ಬೀಳುವುದೆಂಬ ಆಶೆಯಿಂದಲ್ಲ ತಮ್ಮ ಹತ್ತಿರ ಮಾತನಾಡಬೇಕಂದಪೇಕ್ಷಿಸುವುದು. ಬರುತ್ತಾ ತಮ್ಮ ಪತ್ನಿಯನ್ನು ಕರೆದುಕೊಂಡು ಬರಬೇಕೆಂದು ಜಲಜಾಕ್ಷಿ ಅಪೇಕ್ಷಿಸುತ್ತಾಳೆ. ಈ ಪತ್ರ ಮುಟ್ಟಿದ ಎರಡು ತಾಸಿನ ಒಳಗೆ ತಾವಿಬ್ಬರೂ ಬಂದು ಮುಟ್ಟದಿದ್ದರೆ, ಆ ಬಳಿಕ ತಾವು ಬರುವಂಥಾದ್ದಿಲ್ಲವೆಂದು ನಿಶ್ಚಯಿಸಿ, ಇಲ್ಲಿಯ ಕೆಲಸವನ್ನು ಮುಂದರಿಸಲಾಗುವುದೆಂಬದನ್ನು ಮನಸ್ಸಿಗೆ ತೆಗೆದುಕೊಂಡು ಜಾಗ್ರತೆಯಿಂದ ಬರೋಣಾದೀತೆಂದು ನಂಬುತ್ತೇನೆ.

ಇಂತೀ ನಮಸ್ಕಾರಗಳು. ಮಾರ್ಚಿ ೨೫ ಆದಿತ್ಯವಾರ."

ದೂಮನು ಈ ಪತ್ರವನ್ನು ಕೈಯಲ್ಲಿ ಕೊಡಲು, ಭೀಮರಾಯನು ಅದನ್ನು ತೆಗೆದು ಓದಿ ಅದರಲ್ಲಿ 'ನಮ್ಮ' ಎಂಬ ಶಬ್ದದಡಿಯಲ್ಲಿ ಎರಡು ಗೆರೆಗಳನ್ನು ಕಂಡು ಕಿಡಿಕಿಡಿ ಸಿಟ್ಟಿನಿಂದ ಹಾರಿ, ತುಟಿಗಳನ್ನು ಕಚ್ಚಿ, ಕಣ್ಣುಗಳನ್ನು ತಿರಿಗಿಸಿ, ಮುಮ್ಮೂರು ಸಾರಿ ಬಲಕೈಯನ್ನು ಸಟ್‌ಸಟ್ಟೆಂದು ಕೆಳಗೆ ಬೀಸಿ, ಅಂಬಾಬಾಯಿಯನ್ನು ಕರೆದು, "ಕೇಳಿದೆಯೇನೇ? ಈ ಹೊತ್ತಿನ ದಿವಸದಲ್ಲಿ, ಆ ಪಾಮರನಾದ ಅಮೃತರಾಯನು ನನಗೆ ಬರೆದ ವಕ್ಕಣೆಯ ಚಂದ! ದುಶ್ಶಾಸನ ವಧೆಯ ಪ್ರಸಂಗದಲ್ಲಿ ದುಶ್ಶಾಸನನ್ನು ಕಾಣುತ್ತಲೆ ಭೀಮಸೇನಗೆ ಹೇಗೆ ಕೋಪೋದ್ರೇಕವಾಯಿತೆಂದು ಹೇಳೋಣಾಗಿದೆಯೋ ತದೋಪಾದಿಯಲ್ಲಿ ನನ್ನ ಅವಸ್ಥೆಯಾಗಿದೆ ಬಲ್ಲೆಯಾ? ಆದರೆ ಮಾಡತಕ್ಕದ್ದೇನು? ಹಿಂದಿನ ಒಂದು ಪ್ರಮೇಯದಲ್ಲಿ ಕಷ್ಟಪಟ್ಟದ್ದಲ್ಲವಾಗಿರುತ್ತಿದ್ದರೆ, ಬಿಡು! ಬಿಡು! ಈ ಪಾಮರನ ಬಿಸಾತು ಏನಿತ್ತು? ಕ್ಷಣಮಾತ್ರದಲ್ಲಿ ಮಣ್ಣಿಗೆ ಮಣ್ಣು ಕೂಡಿಸುತ್ತಿದ್ದೆ,– ಯದ್ವಾತದ್ವ ಅಪಮರ್ಯಾದೆಯ ಮಾತುಗಳನ್ನು ಬರೆದಿರುವುದಲ್ಲದೆ "ನಮ್ಮ ಇಂದಿರೆ" ಎಂದು "ನಮ್ಮ" ಎಂಬ ಶಬ್ದದಡಿಯಲ್ಲಿ ಎರಡು ಗೆರೆಗಳು!– ಅಯ್ಯೋ ನಮ್ಮ ವಿಧಿಯೇ!" ಎಂದು ಚಾವಡಿಯ ಮೇಲೆ ಕಟಕಟ ಹಲ್ಲು ಕಡಿಯುತ್ತಾ ವಾಲಸರಿಮಾಡಿದನು. ಅಂಬಾಬಾಯಿಯು ಇದನ್ನೆಲ್ಲ ನೋಡಿ, "ಈಗ ದೃಷ್ಟಾಂತವಾಯಿತೆ? ನಮ್ಮ ಮಗು, ನಮ್ಮ ಮಗು ಎಂದು ಹೇಳಿ, ನಾನೆಷ್ಟು ಹೇಳಿದರೂ ಕುತರ್ಕ ಮಾಡುತ್ತಿದ್ದಿರಷ್ಟೆ? ಆಗಲಿ! ಈ ಕ್ಷಣದಲ್ಲೇ ಹೋಗೋಣ, ಹೊರಡಿರಿ" ಎನಲು, ಇಬ್ಬರೂ ಹೊರಟು ನೆಲ್ಲೂರ ಎತ್ತುಗಳ ಸಾರೋಟಿನಲ್ಲಿ ಕುಳಿತು ಸವಾರಿಯಿಂದ ಅಮೃತರಾಯನಲ್ಲಿಗೆ ಮುಟ್ಟಿದರು. ಅಂಬಾಬಾಯಿಯು ಜಲಜಾಕ್ಷಿ ಇಂದಿರೆ ಇವರಿದ್ದ ಕೋಣೆಗೆ ಹೋದಳು. ಭೀಮರಾಯನು ಅಮೃತರಾಯನ ಬೈಠಕು ಇದ್ದಲ್ಲಿಗೆ ಬಂದು ನಮಸ್ಕರಿಸಿ ಕುಳಿತನು. ಇಂದಿರೆಯು ತಾಯಿಯನ್ನು ಕಂಡು ನಮಸ್ಕರಿಸಲು "ಇದೇನು? ಸತಾರೆಯಲ್ಲಿ ಕಲಿತು ಬಂದ ಘಮಂಡವೆ? ಮಾತೃಕ್ಲೇಷ ಪರೀಕ್ಷೆಯಲ್ಲಿ, ಪಾಸೋ ಪಾಶವೋ– ಏನದು?– ಹಾಕಿಕೊಂಡೆಯಷ್ಟೆ? ಈ ಯಾರಾದರೂ ಕಲೆಕಟ್ರು ಇದ್ದರೆ ಪುನರ್ವಿವಾಹವಾಗಿ ರಾಜ್ಯವೆಲ್ಲವನ್ನು ಗಡಗಡಾಯಿಸಬಾರದೇ?" ಎಂದು ಕೇಳಲು, ಇಂದಿರಾಬಾಯಿಯು ಇದಕ್ಕೆಲ್ಲ ಉತ್ತರ ಅವಶ್ಯವಿಲ್ಲವೆಂದು ತಿಳಿದು ಸುಮ್ಮಗೆ ನಿಂತಳು. ಅಂಬಾಬಾಯಿಯು ಪುನಃ–

"ಏನು? ಕೌಶಲ ಚಮತ್ಕಾರದ ಮಾತುಗಳೆಲ್ಲ ಹೊರಡಲಿ! ಮೂಕಳಂತೇಕೆ ನಿಂತಿದ್ದಿ?"

"ಅವ್ವಾ, ಸಿಟ್ಟಿನ ವಶವಾಗದೆ ನನ್ನ ಮಾತನ್ನು ಲಾಲಿಸಿ ಕೇಳಿದ ಬಳಿಕ, ನಿನ್ನ ಹೃದಯದ ಕಠಿನಡತೆಯನ್ನು ತೋರಿಸಬೇಕೆಂದು ಕಂಡರೆ ಹಾಗೆ ಮಾಡು."

"ಏನು? ಇಂಗ್ರೇಜಿಯಾಯಿತು, ಪರೀಕ್ಷೆಯಾಯಿತು, ಇನ್ನೇನಟ್ಟಹಾಸ ಉಳಿದಿವೆ? ಕಲೆಕಟ್ರನ ಹೆಂಡತಿಯಾಗಬೇಕೆ?"

"ಅವ್ವಾ, ಸಂತ ಧರ್ಮೋಪದೇಶಕ್ಕಿಂತ ಅದಲ್ಲವೇ ಒಳ್ಳೇದು, ತುಸು ಆಲೋಚಿಸಿ ನೋಡು: ಆ ವಿಷಯವನ್ನು ಕುರಿತು ಮಾತನಾಡುವುದಕ್ಕೋಸ್ಕರವೇ ನಿನ್ನನ್ನು ಕರೆಯಿಸಿದ್ದು."

"ಯಾವ ಕಲೆಕಟ್ರನ ಹೆಂಡತಿಯಾಗುತ್ತಿ?"

"ಮೃತವಾದ ಸುಂದರರಾಯರ ಮಗ–"

"ಸಾಕು! ಸಾಕು! ಗೊತ್ತಿದೆ!"

"ಗೊತ್ತಿಲ್ಲದೆ ಎಲ್ಲಿ ಹೋಗುತ್ತೆ? ಜನ್ಮಾಂತರದಲ್ಲಿಯೂ ಮರೆಯುವಂಥಾದ್ದಲ್ಲ. ಅದೇ ಸುಂದರರಾಯರ ಮಗ ಭಾಸ್ಕರರಾಯರು ಇಂಗ್ಲಂಡದಿಂದ ನಾಳೆ ಬರುವ ಹಡಗದಲ್ಲಿ ಬಂದು ಮುಟ್ಟುವರು–"

"ಬಲ್ಲೆನು, ಮನಸ್ಸಿನಲ್ಲಿದ್ದದ್ದನ್ನು ಮಾಡು. ನಾನಂತೂ ನಿನ್ನ ತಾಯಿಯಲ್ಲವೆಂದು ಮೊದಲೇ ನೀನು ಹೇಳಿದ್ದೆ."

"ನಾನು ಹೇಳಲಿಕ್ಕಿರುವ ಮಾತುಗಳನ್ನು ಆಲೈಸಿ ಕೇಳಿ ವಿಚಾರಿಸದೆ ಇನ್ನೂ ದುಷ್ಟತನವನ್ನೇ ತೋರಿಸುವಿಯಾದರೆ, ನಿನ್ನನ್ನು ತಾಯಿಯೆಂದು ಹೇಗೆ ಕರೆಯಲಿ!"

"ಮನಸ್ಸಿನಲ್ಲಿದ್ದದ್ದನ್ನು ಮಾಡು" ಎಂದು ಸಿಟ್ಟಿನಿಂದೆದ್ದು, ದುಮ್ಮು ಜಾಡಿಸಿಕೊಂಡು ಹೊರಗೆ ಹೋದಳು. ಒಳಗೆ ಕೋಣೆಯಲ್ಲಿ ನಡೆದ ಮಾತುಗಳನ್ನೆಲ್ಲ ಹೊರಗೆ ಅಮೃತರಾಯ, ಭೀಮರಾಯ ಸಹ ಪೂರ್ಣವಾಗಿ ಕೇಳಿ ತಿಳಿದಿದ್ದುದರಿಂದ ಭೀಮರಾಯನು ಏನೊಂದನ್ನು ಮಾತನಾಡದೆ ತುಟಿಗಳನ್ನು ಕಚ್ಚುತ್ತಾ ಎದ್ದಾಗ, ಅಮೃತರಾಯನು "ಕರೆಯಿಸಿದ ಉದ್ದೇಶವನ್ನು ತಿಳಿದಿರಷ್ಟೆ?" ಎಂದು ಕೇಳಲು ಉತ್ತರವೇನೂ ಕೊಡದೆ, ಹೆಂಡತಿಯನ್ನು ಸಂಗಡ ಕರೆದುಕೊಂಡು ಇಬ್ಬರೂ ಸಾರೋಟು ಹತ್ತಿ ಮನೆಗೆ ಹಿಂತಿರುಗಿ ಹೋದರು.

## ೫೭

ಮೂರು ನಾಲ್ಕು ದಿವಸ ಕಳೆದವು. ಭಾಸ್ಕರರಾಯನು ಬೊಂಬಯಿಗೆ ಮುಟ್ಟಿದ್ದಾಗಿಯೂ ಇನ್ನು ಮೂರು ದಿವಸಗಳಲ್ಲಿ ಕಮಲಪುರಕ್ಕೆ ಮುಟ್ಟುವುದಾಗಿಯೂ ಕಲೆಕ್ಟರ್ ದೊರೆಗೂ ಅಮೃತರಾಯನಿಗೂ ತಂತಿಯ ದ್ವಾರಾ ವರ್ತಮಾನ ಬಂತು. ಅಮೃತರಾಯನಲ್ಲಿಯೂ ಬಿ.ಎ., ಬಿ.ಎ., ಬಿ.ಎಲ್., ಬಿ.ಎ.ಎಲ್.ಎಲ್.ಬಿ, ಎಮ್.ಎ., ಇವೆ ಮುಂತಾದ ದೊಡ್ಡ ದೊಡ್ಡ ಪರೀಕ್ಷೆಗಳನ್ನು ಕೊಟ್ಟು ಜಯಿಸಿ ಪದವಿಗಳನ್ನು ಹೊಂದಿದ ಅನೇಕ ಮಂದಿ ಯೌವನಸ್ಥರ ಮನೆಗಳಲ್ಲಿಯೂ ಅಮಿತವಾದ ಸಂತೋಷ ಉಂಟಾಯಿತು. ಅದೇ ದಿವಸ ಸಾಯಂಕಾಲ ಐದು ಗಂಟೆಯ ಸಮಯದಲ್ಲಿ ಜುಬಿಲಿ ಟೌನ್ ಹೋಲಿನಲ್ಲಿ ಅವರ ದೊಡ್ಡದಾದ ಒಂದು ಸಭೆ ನೆರೆಯಿತು. ಅಧ್ಯಕ್ಷಸ್ಥಾನದಲ್ಲಿ ಯಶ್ವಂತರಾವ್, ಎಮ್.ಎ., ಎಲ್.ಎಲ್.ಬಿ. ಇದ್ದು ಸಭೆ ಕೂಡಿದ ಉದ್ದೇಶವನ್ನು ಬಹು ಸಂಕ್ಷೇಪವಾಗಿ ವಿವರಿಸುವುದೆಂದು ಎದ್ದು ನಿಲ್ಲುವಷ್ಟರಲ್ಲಿ, ಬಿ.ಎ., ಬಿ.ಎಲ್. ನೀಲಕಂಠರಾಯನು ಎದ್ದುನಿಂತು "ಈ ಹೊತ್ತಿನ ಭಾಷಣಗಳೆಲ್ಲ ಸರ್ವರಿಗೂ ತಿಳಿಯುವಂತೆ Vernacular (ದೇಶಭಾಷೆ)ನಲ್ಲೇ ಆಗಬೇಕೆಂದು ಅಧ್ಯಕ್ಷರ permission (ಅನುಮತಿ) ಇದ್ದರೆ ನಾನು propose (ಆಲೋಚನೆ

ಹೇಳು)ಮಾಡುತ್ತೇನೆ" ಎಂದು ಉನ್ನತ ಧ್ವನಿಯಿಂದ ಹೇಳಲು, ಬಿ.ಎ., ಎಮ್.ಎಲ್. ಗಂಗಾಧರರಾಯನು "ನಾನು second (ಅನುಮತಿಸು) ಮಾಡುತ್ತೇನೆ" ಎಂದನು. ಆಗ ಬೇರೆ ಅನೇಕರೂ ಒಟ್ಟುಕೂಡಿ, "Xarried Unanimously" (ಏಕಮತದಲ್ಲಿ ಮುಂದೆ ಸಾಗಿತು) ಎಂದು ದೊಡ್ಡ ಘೋಷ ಮಾಡಿದರು. ಅಧ್ಯಕ್ಷರು "Very well" (ಬಹಳ ಒಳ್ಳೇದು) ಎಂದು ಮಾತನಾಡುವುದಕ್ಕೆ ಪ್ರಾರಂಭಿಸುವಾಗ ಎಲ್ಲರೂ ಚಪ್ಪಳಿಕ್ಕಿ ಐದು ನಿಮಿಷಗಳವರೆಗೆ ಕೆಲವರು ಟೊಪ್ಪಿಗಳನ್ನು ಹಾರಿಸುವುದು, ಇನ್ನು ಕೆಲವರು ಕೈವಸ್ತ್ರಗಳನ್ನು ಹೋಲಿನ ಕೊಬಳಿಗೆ ಮುಟ್ಟುವಂತೆ ಎಸೆಯುವುದು, ಮತ್ತು ಕೆಲವರು ಕೈಯಲ್ಲಿದ್ದ ಬೆತ್ತಗಳನ್ನು ಕುರ್ಚಿಗಳ ಕೈಗಳ ಮೇಲೆ ಬಡೆಯುವುದು, ಆಗ ಹೊರಗೆ ಕೂಡಿದ ಕೆಲವು ಶೂದ್ರರ ಹುಡುಗರು ಇದು ಎಂತಹ ಪೀಕಲಾಟವೆಂದು ಗೊತ್ತಾಗದೆ ಕೂ! ಕೂ! ಎಂದು ಕೂಗುವುದು,– ಹೀಗೆಲ್ಲ ಇಂತಹ ಪ್ರಕಾರದ್ದೆಂದು ಹೇಳಕೂಡದಷ್ಟು ದೊಡ್ಡ ಗಲಭೆ ಯುಂಟಾಯಿತು. ಏವಂಚ ಈ ಗಲಭೆಯಲ್ಲಿ ಅಧ್ಯಕ್ಷರು ಏನು ಮಾತನಾಡಿದರೆಂದು ಅಲ್ಲಿ ಕೂಡಿದ ಮುಕ್ಕಾಲೂ ಮೂರು ವೀಸ ಪಾಲಿನವರಿಗೆ ಗೊತ್ತಾಗದೆ ಅಧ್ಯಕ್ಷನ ಹತ್ತಿರವೇ ಕುಳಿತುಕೊಂಡು ಬರೆದುಕೊಂಡಿದ್ದ, ಬಿ.ಎ., ಬಿ.ಎಲ್. ಶಾಂತಾರಾಯನು ಗದ್ದಲ ಸ್ವಲ್ಪ ಶಾಂತವಾದ ಮೇಲೆ ತಾನು ಬರಕೊಂಡ ಭಾಷಣವನ್ನು ಓದಿ ತಿಳಿಸಿದನು. ಅದೇನೆಂದರೆ–

"ನಮ್ಮ countryman (cheers) ಸ್ವದೇಶಸ್ಥ (ಶಾಭಾಸು) ಮತ್ತು friend (Applause) ಸ್ನೇಹಿತ (ಹೊಗಳಿಕೆ) ಭಾಸ್ಕರರಾಯನು (Loud cheers) (ಉನ್ನತಸ್ವರದಿಂದ ಶಾಭಾಸು) ಬಹು ಸಾಹಸದಿಂದ ವಿಲಾಯತಿಗೆ ಹೋಗಿ, (C.S.Examination) ಪಾಸ್ ಮಾಡಿ ನಮ್ಮ ಊರಿಗೇನೇ First Native Assistant Collector (ಪ್ರಥಮದ ನೇಟಿವ್ ಅಸಿಸ್ಟಾಂಟ್ ಕಲೆಕ್ಟರ್) ಆಗಿ ಬಂದಿರುವುದು ನಮ್ಮ District (ಜಿಲ್ಲೆಗೆ) ಮಾತ್ರವಲ್ಲಾ ಇಡೀ Presidency (ಸಂಸ್ಥಾನ)ಗೆ highest honour (ದೊಡ್ಡ ಮರ್ಯಾದೆ) ಮತ್ತು credit (deafening applouse) ಕೀರ್ತಿ (ಕಿವುಡನಾಗ ಮಾಡತಕ್ಕಷ್ಟು ಹೊಗಳಿಕೆ) ಎಂಬುದನ್ನು special (ಪ್ರತ್ಯೇಕ) ಆಗಿ ಯಾರಿಗೂ ಹೇಳಬೇಕಾದ್ದಿಲ್ಲವಷ್ಟೆ? ಈಗ ಅವನು ಸ್ಟೀಮರಿನಿಂದ land (ಕರೆಗೆ ಬರು)ಆಗಿ ಮನೆಗೆ ಬರುವಾಗ ಒಂದು fitting reception (ಯೋಗ್ಯವಾದುಪಚಾರ) ಕೊಡುವುದು (hear, hear) (ಕೇಳಿರಿ, ಕೇಳಿರಿ) ಯಾವ ಪ್ರಕಾರದಲ್ಲೆಂದು (measures consult) (ಉಪಾಯಗಳನ್ನಾಲೋಚಿಸು) ಮಾಡುವುದಕ್ಕೋಸ್ಕರ ಈ meeting (ಸಭೆ) ಕೂಡಿದ್ದಾಗಿರುತ್ತೆ."

ಇದೀಗ ಎಲ್ಲರೂ ತಿಳಿಯುವ ಹಾಗೆ ದೇಶಭಾಷೆಯಲ್ಲಿ ಮಾಡಿದ ಭಾಷಣ! ಇದನ್ನು ಕೇಳಿ ತಿಳಿದ ಮೇಲೆ ಒಬ್ಬೊಬ್ಬನು ತನ್ನ ಅಭಿಪ್ರಾಯವನ್ನು ಹೇಳುತ್ತಾ ಆ ವಿಷಯದಲ್ಲಿ ಡಿಬೇಟ್ ಎಂಬ ವಾಗ್ವಾದವನ್ನು ನಡೆಯಿಸುತ್ತಾ, ಕಡೆಗೆ ಎಮ್.ಎ., ಎಮ್.ಎಲ್. ಬಾಳಾಜಿ ರಾಯನು, "ಎಲ್ಲಾ graduates (ಉಪಪದಗಳನ್ನು ಹೊಂದಿದವರು) ಕೂಡಿ ಒಂದು deputation (ಪ್ರತಿನಿಧಿಗಳ ಕೂಟ) steamer(ಹೊಗೆ ಹಡಗ)ಗೆ ಹೋಗಿ ಅಲ್ಲಿ

ಒಂದು address (ಮಾನಪತ್ರ)ವನ್ನು ಓದಿ ಅದನ್ನೊಂದು China Silver (ಚೀನಿ ಬೆಳ್ಳಿ)ನ case(ಪೆಟ್ಟಿಗೆ)ನಲ್ಲಿಟ್ಟು present (ಉಡುಗೊರೆ) ಮಾಡಿ ಸಂಗಡ ಕರೆದುಕೊಂಡು ಬರುವುದೇ advisable course (ತಕ್ಕದಾದ ರೀತಿ) ಎಂದು ಹೇಳಲು, ಎಲ್ಲರೂ ಅದಕ್ಕೊಪ್ಪಿ ಹಾಗೆಯೇ ನಿಶ್ಚಯಿಸಿದರು.

ಈ ಸಂಗತಿಯನ್ನು ಮುಂದಾಗಿ ಅಮೃತರಾಯನಿಗೆ ತಿಳಿಸುವುದು ಯೋಗ್ಯವೆಂದು ಅಧ್ಯಕ್ಷನು ಸೂಚಿಸಲು, ಬಾಳಾಜಿರಾಯನು ತಾನು ತಿಳಿಸಿ ಅಮೃತರಾಯನು ಏನು ಹೇಳುತ್ತಾನೆಂಬುದನ್ನು ಮರುದಿವಸ ಬೆಳಿಗ್ಗೆ ಅಧ್ಯಕ್ಷನಿಗೆ ಅರಿಕೆ ಮಾಡುವುದಾಗಿ ಹೇಳಿದನು. ಆ ಬಳಿಕ ಸಭೆ ಮುಗಿಸಿ ವಿದ್ವಾಂಸರೆಲ್ಲರೂ ತಂತಮ್ಮ ಮನೆಗಳಿಗೆ ನಡೆದರು. ಬಾಳಾಜಿರಾಯನು ಅಮೃತರಾಯನ ಬಳಿಗೆ ಹೋಗಿ ಸಭೆಯವರ ನಿರ್ಧಾರವನ್ನು ತಿಳಿಸಲು, ಅವನು ಭಾಸ್ಕರರಾಯನ ತಂತಿಯನ್ನು ತೆಗೆದು ತೋರಿಸಿ, ಯಾವ ವಿಜೃಂಭಣೆಯೂ ಬೇಡವೆಂದು ಹೇಳಲಾಗಿ, ಬಾಳಾಜಿರಾಯನು ಆ ಸಂಗತಿಯನ್ನು ಮರುದಿವಸ ನೀಲಕಂಠರಾಯನಿಗೆ ತಿಳಿಸಿದನು. ಅವನು ಮನಸ್ಸಿನಲ್ಲಿ ಸ್ವಲ್ಪ ಸಂಕೋಚ ತಾಳಿದರೂ ಆಮೇಲೆ ಸುಮ್ಮಗಾದನು. ಎರಡು ದಿವಸಗಳು ಕಳೆದು ಮೂರನೇ ದಿವಸ ಹಡಗವು ಕಮಲಪುರ ಬಂದರಕ್ಕೆ ಸಮೀಪಿಸಿ ಬರುವುದನ್ನು ಕಂಡು, ಕಲೆಕ್ಟರ್ ದೊರೆಯು ಕರಣೀಕನ ಸಮೇತ, ಅಮೃತರಾಯನು ಭಾಸ್ಕರರಾಯನ ಮುಖ್ಯ ಸ್ನೇಹಿತನಾದ ಸಂಜೀವರಾಯನ ಸಮೇತ ರೇವಿಗೆ ಹೋಗಿ, ಭಾಸ್ಕರರಾಯನು ಹಡಗದಿಂದಿಳಿಯುತ್ತಲೆ ಕಲೆಕ್ಟರ್ ದೊರೆಯು ತಕ್ಕ ಮರ್ಯಾದೆ ಕೊಟ್ಟು ಮಾತನಾಡಿ ಕೈಹಿಡಿದು ಕರೆದುಕೊಂಡು ಬರಲು, ಅಮೃತರಾಯ ಸಂಜೀವರಾಯ ಸಹ ಅವರೊಡನಗೆ ಸಂತೋಷದಿಂದ ಮಾತನಾಡಿ ಸಾರೋಟಿನಲ್ಲಿ ಕುಳ್ಳಿರಿಸಿ, ಮನೆಗೆ ಕರೆದು ತಂದರು. ಮನೆಗೆ ಮುಟ್ಟಿದಾಗ ಜಲಜಾಕ್ಷಿಯನ್ನು ಕಂಡು ನಮಸ್ಕರಿಸಿ, ಕೆಲವು ಮಾತುಗಳನ್ನಾಡಿ ಒಂದೆರಡು ನಿಮಿಷಗಳವರೆಗೆ ಕುಳಿತುಕೊಂಡು ಕೊಂಚ ಫಲಾಹಾರ ಮಾಡಿ, ತಾಯಿಯನ್ನು ಕಂಡುಬರುತ್ತೇನೆಂದು ಹೇಳಿ, ಸಂಜೀವರಾಯನ ಸಮೇತ ಹೊರಟುಹೋಗಿ ತಾಯಿಯನ್ನು ಸಾಷ್ಟಾಂಗವಾಗಿ ನಮಸ್ಕರಿಸಲು ಅವಳು ಅಮಿತಾನಂದದೊಡನೆ "ಬಂದೆಯಾ! ಮಗು! ಕುಳ್ಳಿರು–, ಸಂಜೀವ, ಕುಳ್ಳಿರು" ಎಂದಿಬ್ಬರಿಗೂ ಉಪಚರಿಸಿ, ಮಗನೊಡನೆ, "ಅಮೃತರಾಯರೂ ಸಂಜೀವನೂ ಆಗಾಗ್ಗೆ ನಿನ್ನ ಕ್ಷೇಮವಾರ್ತೆ ಯನ್ನು ತಿಳಿಸುತ್ತಾ ಇದ್ದರೂ ನಿನ್ನನ್ನು ನೋಡಬೇಕೆಂಬ ಕಕ್ಕುಲತೆಯಿಂದ ಜಾಗರದಲ್ಲಿಯೂ ಸ್ವಪ್ನದಲ್ಲಿಯೂ ನಿನ್ನ ಬರೋಣವನ್ನು ಹಾರೈಸುತ್ತಿದ್ದೆನು. ಈಗಿಲ್ಲೇ ಇರು, ನಾಳೆ ಬೇಕಾದರೆ, ಅಮೃತರಾಯರಲ್ಲಿಗೆ ಹೋಗಬಹುದು, ಆಗದೇ?" ಎಂದು ಕೇಳಲು, "ನಿನ್ನಪ್ಪಣೆ" ಎಂದುತ್ತರಕೊಟ್ಟನು. ಸುಶೀಲೆಯು ಕೂಡಲೇ ಕೆಲಸದ ಮುಂಡಿಯನ್ನು ಕರೆದು ಈ ವಿವರವನ್ನು ಅಮೃತರಾಯನಲ್ಲಿಗೆ ಹೇಳಿಕಳುಹಿಸಿದಳು. ಆ ಬಳಿಕ ಕ್ಷೇಮಸಮಾಚಾರ, ವಿಲಾಯತಿ ಜನರ ವಿಷಯವೇ ಮುಂತಾದ ಅನೇಕ ಸಂಗತಿಗಳನ್ನು ಕುರಿತು ಮಾತನಾಡಿ ರಾತ್ರಿಯೂಟವಾದ ಮೇಲೆ ಸಂಜೀವರಾಯನು ತನ್ನ ಮನೆಗೆ ಹೋಗಲು, ಸುಶೀಲೆಯು ಮಗನೊಡನೆ–

"ನೀನು ಉದ್ಯೋಗದಲ್ಲಿ ಯಾವಾಗ ಪ್ರವೇಶಿಸಬೇಕು."

"ಇನ್ನು ಒಂದು ವಾರದೊಳಗೆ ಯಾವಾಗಲಾದರೂ ಪ್ರವೇಶಿಸಿದರೆ ಸಾಕು. ನಾಳೆ ಕಲೆಕ್ಟರ್ ದೊರೆಯನ್ನೂ ಬೇರೆ ಸರದಾರ ಸಾಹೇಬರನ್ನೂ ಕಂಡು ಬರಬೇಕು. ಆಮೇಲೆ ನಾಲ್ಕೈದು ದಿವಸ ಮನೆಯಲ್ಲೇ ಇದ್ದು ಸ್ವಲ್ಪ ವಿಶ್ರಾಂತಿ ಪಡೆಯಬೇಕೆಂದಾಲೋಚಿಸಿದ್ದೇನೆ."

"ಹಾಗೆಯೇ ಮಾಡು. ಬಹುದೂರದೇಶದಿಂದ ದಣಿದು ಬಂದಿರುತ್ತೀ. ಸ್ವಲ್ಪ ವಿಶ್ರಾಂತಿ ಪಡೆದು ಮತ್ತೆ ಉದ್ಯೋಗದಲ್ಲಿ ಪ್ರವೇಶಿಸುವುದೇ ಒಳ್ಳೇದು. ಮುಂದಿನ ನಮ್ಮ ವಾಸ್ತವ್ಯವು ಇದೇ ಮನೆಯಲ್ಲಷ್ಟೆ? ಬಂಗಲಾ ಮುಂತಾದ ಅಟ್ಟಹಾಸವೇಕೆ?"

"ಮನೆ ಯಾವುದಾದರೂ ಚಿಂತೆಯಿಲ್ಲ. ನನಗೆ ಬೇಕಾದವರೆಲ್ಲರ ಸಂಗಡಲೇ ಇರಬೇಕೆಂದು ನನ್ನ ಮುಖ್ಯವಾದಪೇಕ್ಷೆ. ಹಾಗೆಯೇ ದೇವರು ನಡೆಯಿಸಲಿ."

"ನಿನಗೆ ಬೇಕಾದವರ ಸಂಖ್ಯೆಯು ಇನ್ನು ಸ್ವಲ್ಪ ದಿವಸಗಳಲ್ಲಿ ಹೆಚ್ಚುವುದೆಂದು ಕಾಣುತ್ತೆ." (ನಗುತ್ತಾಳೆ)

"ಅದು ಸಹಜವೇಯಷ್ಟೆ?"

"ಸಹಜವೇ"– (ಪುನಃ ನಗುತ್ತಾಳೆ).

"ಏತಕ್ಕವ್ವಾ, ನಗುತ್ತೀ? ವಿಶೇಷವೇನಾದರೂ ಇದೆಯೇ?"

"ವಿಶೇಷ ಮತ್ತೇನು? ನಾನಿರುವಾಗಲೇ ನನ್ನ ಕಣ್ಣೆದಿರಿನಲ್ಲಿ ನಿನಗೆ ಒಪ್ಪಿದ ಹೆಂಡತಿ ದೊರಕುವುದಕ್ಕಿಂತ ಹೆಚ್ಚಿನ ವಿಶೇಷ ನನಗ್ಯಾವುದು?"

"ಹಾಗೆಯೇ ಆಗಲಿ. ನನ್ನಿಂದದರಲ್ಲ್ಯಾಗತಕ್ಕ ಕಾರ್ಯವೇನಾದರೂ ಇದ್ದರೆ ಹೇಳು, ನಿನ್ನಪ್ಪಣೆಯ ಪ್ರಕಾರ ನಡೆದುಕೊಳ್ಳುವೆನು."

"ಅಮೃತರಾಯರು ಎಲ್ಲವನ್ನು ನಿಶ್ಚಯಮಾಡಿದ್ದಾರೆ. ನಾವೆಲ್ಲರೂ ನಿನ್ನ ಬರೋಣವನ್ನು ಮಾತ್ರ ಕಾಯುತ್ತಿದ್ದೆವು. ನಾನು ಮೊದಲೇ ಒಪ್ಪಿಗೆ ಕೊಟ್ಟಿದ್ದೇನೆ. ಇನ್ನು ನಿನ್ನ ಒಪ್ಪಿಗೆ ಮಾತ್ರವೇ ಬೇಕಾದ್ದು."

"ನನ್ನ ಒಪ್ಪಿಗೆ ಏನು? ನೀನು ಅಮೃತರಾಯರೂ ಜಲಜಾಕ್ಷ್ಯಮ್ಮನವರೂ ಮಾಡುವ ಆಲೋಚನೆಗೆ ನಾನು ಒಪ್ಪದಿರುವುದುಂಟೇ?"

"ಸರಿಯೇ, ಆದರೂ ನೀನೇ ಹುಡುಗಿಯನ್ನು ಕಂಡು ಮಾತನಾಡಿ ಯೋಗ್ಯಳೆಂದು ಕಂಡರೆ, ಅತ್ಯುತ್ತಮ ಕಾರ್ಯ."

"ನಿನ್ನ ಇಷ್ಟ ಹಾಗಿದ್ದರೆ, ನಾನದಕ್ಕೂ ಸಿದ್ಧನಿದ್ದೇನೆ."

"ಹುಡುಗಿಯೆಂದರೆ ಒಂದು ರತ್ನವೇ. ನಾನೇಕೆ ಹೇಳಬೇಕು? ನೀನೇ ನೋಡಿ ಪರೀಕ್ಷಿಸು. ಆಕೆಯೂ ನಿನ್ನ ಧ್ಯಾನದಲ್ಲೇ ಇದ್ದಾಳೆ."

"ಓಹೋ, ಇದೇನು! ಕಮಲಪುರದವರ ಗೃಹಕೃತ್ಯದ ಕ್ರಮಗಳೆಲ್ಲ ಈ ಬಗೆಯ ಮಾರ್ಪಾಟ ಹೇಗೆ? ಎಂದು ಉಂಟಾಯಿತು? ನಮ್ಮ ಊರಿನಲ್ಲಿ ಒಬ್ಬ ಹುಡುಗಿಯು ತಾನಾಗಿ ವರನನ್ನು ಧ್ಯಾನಿಸುತ್ತಿರುವುದೆಂದರೆ ಕೌತುಕವೇ?"

“ನಾಳಿಗೆಲ್ಲ ತಿಳಿಯುವುದು. ಅವಳು ಅಮೃತರಾಯರಲ್ಲೇ ಇರುತ್ತಾಳೆ.”

ಇಷ್ಟು ಮಾತುಗಳನ್ನಾಡಿ, “ರಾತ್ರಿಯಾಯಿತು. ದಣಿದು ಬಂದಿರುತ್ತಿ. ಪವಡಿಸು” ಎಂದು ಹೇಳಿ, ಎದ್ದು ಹೋದಳು.

## ೫೮

“ಹುಡುಗಿ ಯಾರು? ಪ್ರಾಯವೂ ಬುದ್ಧಿಯೂ ತುಂಬಿದವಳಲ್ಲವಾಗಿದ್ದರೆ? ತಾನಾಗಿ ವರನನ್ನಪೇಕ್ಷಿಸಿ ದಾರಿ ನೋಡುತ್ತಿರುವುದು, ಅಮೃತರಾಯರಲ್ಲೇ ಇರುವುದು– ಇದೆಲ್ಲ ಏನು? ತಾಯಿ ತಂದೆಗಳಿಲ್ಲದ ಅನಾಥೆಯೇ? ಹಾಗಾದರೆ ಅವಳು ನನಗೆ ಒಪ್ಪಿದವಳೆಂದು ಅಮೃತರಾಯರೂ ಜಲಜಾಕ್ಷ್ಯಮ್ಮನವರೂ, ಮುಖ್ಯವಾಗಿ ಮಾತುಶ್ರೀಯವರೂ ನಿರ್ಣಯಿಸ ಬೇಕಾದರೆ, ಅವಳಲ್ಲಿ ವಿಶೇಷವಾದ ಯೋಗ್ಯತೆಗಳೇನಾದರೂ ಇದ್ದಿರಬೇಕು. ಹಾಗಿದ್ದರೆ ಮಾತುಶ್ರೀಯವರು ನನ್ನೊಡನೆ ಏಕೆ ಯಾವುದೊಂದು ಪ್ರಸ್ತಾಪವನ್ನಾದರೂ ತೆಗೆಯಲಿಲ್ಲ? ಇದೆಲ್ಲ ಎಂತಹ ಚೋದ್ಯ?” ಎಂದು ಮನಸ್ಸಿನಲ್ಲೇ ಆಲೋಚಿಸುತ್ತಾ ಭಾಸ್ಕರರಾಯನೂ, “ದುಷ್ಟರಾದ ಹಗೆಯವರಲ್ಲಿ ಹುಟ್ಟಿದವಳು. ಎಷ್ಟಾದರೂ ರಕ್ತದ ಗುಣ ಬಿಟ್ಟುಹೋದೀತೇ? ಎಂದಾಲೋಚಿಸಿ, ಒಂದು ವೇಳೆ ತನಗಿಷ್ಟವಿಲ್ಲವೆಂದು ಥಟ್ಟನೆ ಹೇಳಿಬಿಟ್ಟರೆ, ಈ ಪ್ರಾಣವನ್ನಿಟ್ಟುಕೊಂಡಿರುವುದಕ್ಕಿಂತ ಹೆಚ್ಚಿನ ಕಷ್ಟ ಯಾವುದಿದೆ? ಇದೆಯೋ ಏನೋ, ನನಗೆ ಕಟ್ಟ ಕಡೆಗೆ ಪರಮೇಶ್ವರನು ನಿಶ್ಚಯಿಸಿಟ್ಟ ಗತಿ?” ಎಂದು ಕಳವಳಿಸಿ ಕಂಗೆಟ್ಟು ನಿಟ್ಟುಸುರಿಟ್ಟು, “ದೇವರೇ! ನನ್ನಿಷ್ಟಾರ್ಥವನ್ನು ನೀನೇ ಕೃಪಾದೃಷ್ಟಿಯಿಂದ ಸಲಿಸು, ನಿನ್ನನ್ನು ಸಾಷ್ಟಾಂಗವೆರಗಿ ವಂದಿಸುತ್ತೇನೆ, ಅನಾಥೆಯಾದವಳನ್ನು ಬಿಟ್ಟುಬಿಡಬೇಡವಪ್ಪಾ!” ಎಂದಷ್ಟಿಷ್ಟೆಂದು ಹೇಳಕೂಡ ದಷ್ಟು ಚಿಂತೆಯಲ್ಲಿ ಇಂದಿರಾಬಾಯಿಯೂ, “ಹುಡುಗನು ಹಡಗವಿಳಿದು ಬಂದವನೇ ನಾಲ್ಕು ಮಾತುಗಳನ್ನಾಡಲಿಕ್ಕೂ ಎಡೆಕೊಡದೆ, ಕೊಟ್ಟ ಫಲಹಾರವನ್ನು ಸಹ ಚೆನ್ನಾಗಿ ತೆಗೆದುಕೊಳ್ಳದೆ, ಮನಸ್ಸಿನಲ್ಲೇನೋ ಗಡಿಬಿಡಿ ಇದ್ದಂತೆ ಕಾಣಿಸಿಕೊಂಡು, ಕಡು ಅವಸರದಿಂದ ತಾಯಿ ಇದ್ದಲ್ಲಿಗೆ ನಡೆದನು. ನಾವೆಲ್ಲರೂ ಒಡನಾಡಿದವರಲ್ಲವೇ? ವಿಲಾಯತಿಗೆ ಹೋದಮೇಲೇನು ಪೂರ್ವವನ್ನು ಮರೆತನೇ? ಛೀ! ನಮ್ಮ ಭಾಸ್ಕರನಿಗೆ ಯಾವಾಗಲೂ ಬುದ್ಧಿಯು ಏಕಪ್ರಕಾರವೇ ಇರುವುದಲ್ಲದೆ ಎಡೆ ಎಡೆಯಲ್ಲಿಯೂ ಒಂದೊಂದು ವಿಧವಾಗದು; ಹೇಗೂ ಮುಂದೆ ನೋಡೋಣ” ಎಂದು ಹೀಗೆಲ್ಲ ಆಲೋಚಿಸುತ್ತಾ ಜಲಜಾಕ್ಷಿಯೂ ಅಮೃತರಾಯನೂ, “ಲೋಕಾಚಾರಕ್ಕೆ ವಿರೋಧವಾದ ಒಂದು ಕಾರ್ಯವನ್ನು ಆಲೋಚಿಸಿದ್ದೇವೆ. ಲೋಕವಿರುದ್ಧವಾದ ಕೆಲಸವನ್ನು ಮಾಡಿ ಯಾರಿಂದಾದರೂ ಪೋಕರಿ ಎಂದನ್ನಿಸಿಕೊಳ್ಳಬೇಕಾದೀತೋ ಏನೋ ಎಂದು ಕಂದೈಯಗೆ ಸ್ವಲ್ಪ ಸಂಶಯವಿರಬಹುದೋ ಏನೋ, ಆದರೆ ನಾವೆಲ್ಲರೂ, ಏಕಮತವಾಗಿ ನಿಶ್ಚಯಿಸಿದ ಕಾರ್ಯದಲ್ಲಿ ಸಂಶಯವೇಕಿರುವುದು? ವಿವೇಕವೂ ಬುದ್ಧಿಯೂ ಇದ್ದವನಲ್ಲವೇ? ಚೆನ್ನಾಗಿ ಆಲೋಚಿಸದೆ ಇರಲಾರನು. ಅದಲ್ಲದೆ ಅಮೃತರಾಯರು ಹಿಂದೆ

ಮುಂದೆ ಆಲೋಚಿಸದೆ ಯಾವ ಕಾರ್ಯಕ್ರಮದಲ್ಲಿಯೂ ಪ್ರವರ್ತಿಸುವವರಲ್ಲ. ನಾನೇಕೆ ಸುಮ್ಮನೆ ಯೋಚಿಸುವುದು" ಎಂದು ತನ್ನೊಳು ತಾನೇ ಮಾತನಾಡುತ್ತಾ ಸುಶೀಲೆಯೂ, ಹೀಗೆಲ್ಲ ಅವರವರು ತಮತಮಗೆ ಕಂಡಹಾಗೆ ಆಲೋಚಿಸುತ್ತಾ ಚಿಂತಿಸುತ್ತಾ ಸ್ವಲ್ಪರಾತ್ರಿ ಎಚ್ಚತ್ತಿದ್ದು ಕಡೆಗೆ ನಿದ್ದೆಹೋದರು.

ಬೆಳಗಾಗುತ್ತಲೆ ಭಾಸ್ಕರರಾಯನು ಫಲಾಹಾರ ಕಾಫಿ ತೆಗೆದುಕೊಂಡು, ಪುಣೇ ಧೋತರವನ್ನುಟ್ಟು ಮೊಣಕಾಲುವರೆಗೆ ಕಪ್ಪು ಬನಾತಿನ ನಿಲುವಂಗಿ ಅದರ ಮೇಲೆ ಬನಾರಸಿ ಶಾಲು ತೊಟ್ಟು, ಗುಲಾಬಿ ರಂಗಿನ ಪಾಗೋಟಿಯನ್ನು ತಲೆಗಿಟ್ಟುಕೊಂಡು ಹೊರಟು, 'ಡೋಗ್ ಕಾರ್ಟ' ಎಂಬ ವಾಹನದಲ್ಲಿ ಸವಾರಿಯಿಂದ ಕಲೆಕ್ಟರ್ ದೊರೆ, ಜಡ್ಜಿದೊರೆ, ಇವರೇ ಮುಂತಾದ ಸರದಾರ ಸಾಹೇಬರ ಭೇಟಿಮಾಡಿ ತಿರುಗಿಬರುತ್ತಾ ಸಂಜೀವರಾಯನೇ ಮುಂತಾದ ಸ್ನೇಹಿತರೆಲ್ಲರನ್ನು ಕಂಡು ಮಾತನಾಡಿ, ಹನ್ನೊಂದು ತಾಸಿನ ಸಮಯವಾಗುವಾಗ ಅಮೃತರಾಯನಲ್ಲಿಗೆ ಬಂದು ಮುಟ್ಟಿದನು. ಮಧ್ಯಾಹ್ನದ ನಂತರ ಅಸಿಸ್ಟಾಂಟ ಕಲೆಕ್ಟರ ಕಚೇರಿಯ ಪ್ರಧಾನ ಕಾರ್ಕೂನ್ ಮುಂತಾದ ಉದ್ಯೋಗಸ್ಥರೂ ಬೇರೆ ಕಚೇರಿಗಳ ಮುಖ್ಯ ಮುಖ್ಯರಾದ ಉದ್ಯೋಗಸ್ಥರೂ ಬಂದು ಕಂಡು, ಮಾತನಾಡಿ ಹೋದರು.

ಆ ಬಳಿಕ ಮಧ್ಯಾಹ್ನದ ಫಲಾಹಾರವಾಗಿ, ಅಮೃತರಾಯ, ಜಲಜಾಕ್ಷಿ, ಭಾಸ್ಕರರಾಯ ಇವರು ಒರಗು ಕುರ್ಚಿಗಳಲ್ಲಿ ಕುಳಿತುಕೊಂಡು, ಬೇರೆ ಬೇರೆ ವಿಷಯಗಳನ್ನು ಕುರಿತು ಮಾತನಾಡುತ್ತಿರುವಾಗ, ಜಲಜಾಕ್ಷಿಯು ಮೊದಲೇ ಹೇಳಿಕಳುಹಿಸಿದ ಪ್ರಕಾರ ಸುಶೀಲೆಯೂ ಬಂದು ಕೂಡಿದಳು. ಮಾತುಕತೆ ನಡೆಯಿತು. ಇಂದಿರಾಬಾಯಿಯು ತನ್ನನ್ನು ಕರೆಯುವುದಕ್ಕೆ ಮುಂಚೆ ತಾನಾಗಿ ಹೋಗಿ ಕೂಡುವುದು ಯೋಗ್ಯವಲ್ಲವೆಂದು ತಿಳಿದು ಅವರೆಲ್ಲರೂ ಕುಳಿತುಕೊಂಡಿರುವ ಪಡಸಾಲೆಯ ಹಿಂದಣ ಕೋಣೆಯಲ್ಲಿ ಬಂದು, ಯಾವ್ಯಾವ ವಿಷಯಗಳನ್ನು ಮಾತನಾಡುತ್ತಾರೋ ನೋಡೋಣವೆಂದು ಒಂದು ಕಡೆಯಲ್ಲಿ ಕುಳಿತುಕೊಂಡಳು. ಮಾತನಾಡುತ್ತಾ ಮಾತನಾಡುತ್ತಾ ಅಮೃತರಾಯನು,

"ಭಾಸ್ಕರಾ, ವಿಧವಾ ವಿವಾಹದ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು?"

"ಯಾವುದೊಂದರ ಗುಣದೋಷವನ್ನರಿಯುವುದಕ್ಕೆ ಶಕ್ತಿಯೂ ಪ್ರಾಯವೂ ಸಾಕಷ್ಟಿಲ್ಲದ ಚಿಕ್ಕ ಕನ್ನಿಕೆಯರಿಗೆ ಪ್ರಥಮ ವಿವಾಹವೇ ಯೋಗ್ಯವಲ್ಲ. ಅಂಥವರಿಗೆ ವಿವಾಹವಾಗಿ ವೈಧವ್ಯ ಪ್ರಾಪ್ತಿಯಾದರೆ, ಈಗಿನ ಕಾಲದಲ್ಲಿ ಪುನರ್ವಿವಾಹವೇ ಉತ್ತಮ."

"ಪುನರ್ವಿವಾಹವಲ್ಲದೆ ಬೇರೆ ನಿವೃತ್ತಿ ಇಲ್ಲವೇ?"

"ಇದೆ. ಜನ್ಮಾಂತ್ಯಪರ್ಯಂತ ಬ್ರಹ್ಮಚರ್ಯದಲ್ಲಿರುವುದೇ ಹೆಚ್ಚು ಸಾರ್ಥಕವಾದದ್ದು. ಆದರೆ ಈಗಿನ ಕಾಲಸ್ಥಿತಿಗೂ ಮನುಷ್ಯಶರೀರ ಸ್ವಭಾವಗಳಿಗೂ ಅದು ಅಸಾಧ್ಯ."

"ಒಂದು ಕಾರ್ಯವು ಅಸಾಧ್ಯವೆಂದು ಮತ್ತೊಂದು ದುಷ್ಕಾರ್ಯಕ್ಕೆ ಕೈಯೊಡ್ಡಬಹುದೆ?"

"ದುಷ್ಕಾರ್ಯವಾವುದು?"

"ವಿಧವೆಯ ವಿವಾಹವು ದುಷ್ಕಾರ್ಯವೆಂದು ಕೆಲವರು ವಾಗ್ವಾದಿಸುತ್ತಾರೆ. ಕೆಲವರು ಆ ವಿಷಯದಲ್ಲಿ ಪುಸ್ತಕಗಳನ್ನು ಬರೆದಿದ್ದಾರೆ."

"ಆ ಪುಸ್ತಕಗಳನ್ನು ನಾನು ಓದಿದ್ದೇನೆ. ಅವುಗಳಲ್ಲಿ ಬರೆದ ಅಭಿಪ್ರಾಯಗಳಿಗೆ ಪ್ರತಿಕೂಲವಾಗಿ ಬೇರೆ ಅನೇಕ ಮಹಾ ಮಹಾ ವಿದ್ವಾಂಸರುಗಳ ಅಭಿಪ್ರಾಯಗಳಿವೆ. ಅವರು ಸಹ ಆ ವಿಷಯದಲ್ಲಿ ಪುಸ್ತಕಗಳನ್ನು ಬರೆದಿದ್ದಾರೆ. ಶೀತೋಷ್ಣ ಮುಂತಾದ ಅವಸ್ಥೆಗಳನ್ನು ಸಹಿಸುವುದಕ್ಕೆ ನಮಗೆ ಶಕ್ತಿ ಇದ್ದರೆ, ಅವುಗಳ ಉಪಶಮನಕ್ಕೋಸ್ಕರ ಧಾವಳಿ, ಬೀಸಣಿಗೆ ಮುಂತಾದ ವಸ್ತುಗಳನ್ನು ತರುವುದಕ್ಕೆ ಓಡುವುದುತ್ತಮವಲ್ಲವಾದರೂ ತರುವುದು ದುಷ್ಕಾರ್ಯವೇ?"

"ಹಾಗಲ್ಲ, ಸಂಭವಿಸಿದ ಅವಸ್ಥೆಯನ್ನು ಸ್ಥಿರಬುದ್ಧಿಯಿಂದ ಸಹಿಸಬೇಕಂತೆ. ವಿಧವೆಯು ತನ್ನ ರೂಪವನ್ನು ಕ್ಷೌರ ಮುಂತಾದುದರಿಂದ ವಿರೂಪಪಡಿಸಬೇಕಂತೆ. ಸಕಲ ಅಲಂಕಾರಗಳನ್ನು ತ್ಯಜಿಸಬೇಕಂತೆ, ಗಂಡಸರ ದೃಷ್ಟಿಗೆ ಬೀಳದ ಹಾಗೆ ಸರ್ವಥಾ ಏಕಾಂತದಲ್ಲಿದ್ದು ದೇವರ ಧ್ಯಾನದಲ್ಲೇ ಇರಬೇಕಂತೆ."

"ಅದನ್ನೆಲ್ಲ ಪುಸ್ತಕಗಳಲ್ಲಿ ಸೊಗಸಾಗಿ ಬರೆಯಬಹುದು, ಬೇರೆಯವರಿಗೆ ಹೇಳಲೂಬಹುದು; ಹಾಗೆ ಹೇಳುವವರೇ ತುಸು ತಲೆಸಿಡಿತವಾದಾಗ ಅಥವಾ ಸಣ್ಣದೊಂದು ಚೇಳು ಕಚ್ಚಿದರೆ, ಇಪ್ಪತ್ತೈದು ಬಗೆಯ ಔಷಧಗಳನ್ನು ಮಾಡುತ್ತಾರೆ. ಅದಂತಿರಲಿ, ರಾಜ್ಯದ ಸ್ಥಿತಿಗತಿ ವೃತ್ತಾಂತಗಳನ್ನು ನೋಡಿದರೆ, ಕಳೆದ ಐದು ವರುಷಗಳಲ್ಲಿ ರೂಪವಿರೂಪ ಪಡಿಸಿದ ಎಷ್ಟು ಮಂದಿ ಪ್ರಾಯದ ವಿಧವೆಯರು ಗರ್ಭಸ್ರಾವ ಬಾಲಹತ್ಯವೆ ಮುಂತಾದ ದುಷ್ಕರ್ಮಗಳನ್ನು ಮಾಡಿ ಕಾರಾಗೃಹವನ್ನು ಸೇರಿದರೆಂಬುದನ್ನು ತಿಳಿಯಬಹುದು. ಇದಲ್ಲದೇ ಬುದ್ಧಿ ಸ್ಥಿರತೆ? ಗಂಡಸರು ದೃಷ್ಟಿಗೆ ಬೀಳಲೇ ಬಾರದೆಂಬುದರ ಅರ್ಥವೇನು? ಬೇರೆಯವರ ಮಾತು ಹಾಗಿರಲಿ, ಕ್ಷೌರ ಮಾಡುವವನ್ಯಾರು?"

ಇಂದಿರಾಬಾಯಿಯು ಇದನ್ನೆಲ್ಲ ಕೇಳಿ ಸಹಿಸಕೂಡದೆ ಕುಳಿತಲ್ಲಿಂದಲೇ "ಕೆಲವು ಮಂದಿ ಹೆಂಗಸರಿಗೆ ಕ್ಷೌರದ ವೃತ್ತಿಯನ್ನು ಕಲಿಸಿದರೆ ಆಗಬಹುದೋ ಏನೋ" ಎಂದು ಪಡಸಾಲೆಯಲ್ಲಿದ್ದವರೆಲ್ಲರೂ ಖೋ! ಎಂದು ನಕ್ಕು ಭಾಸ್ಕರರಾಯನು "ಆಕೆ ಯಾರು? ಅವಳು ಸೂಚಿಸಿದ ಹಾಗಲ್ಲದೆ, ಬೇರೆ ನಿವೃತ್ತಿ ನನಗೂ ಕಾಣುವುದಿಲ್ಲ"ವೆಂದು ಪುನಃ ನಕ್ಕನು. ಆಗ ಅಮೃತರಾಯನು "ಇಂದಿರೇ, ನೀನಿತ್ತ ಬಾರಮ್ಮಣ್ಣಿ. ನೀನಿಲ್ಲದೆ ಏನೋ ಬಟ್ಟಬಿಟ್ಟ ಹಾಗೆ ಕಾಣುತ್ತೆ, ಬಂದೆಯಾ?" ಎಂದು ಕರೆಯಲು, ಅವಳು ತಲೆಬಗ್ಗಿಸಿ, ಮಂದಹಾಸದೊಡನೆ ಜಲಜಾಕ್ಷಿಯ ಬಳಿಗೆ ಹೋಗಿ ನಿಂತಳು. "ಕುಳ್ಳಿರು" ಎಂದು ಜಲಜಾಕ್ಷಿ ಹೇಳಿದಾಗ ಭಾಸ್ಕರರಾಯನ ಕಡೆಗೆ ನೋಡಲು, ಅವನು "ಕುಳ್ಳಿರು" ಎಂದು ಹೇಳಿದನು. ಆಗ ಜಲಜಾಕ್ಷಿಯು, "ಹೇಳುವವರೇ ಹೇಳಬೇಕೇನೊ" ಎಂದು ಹೇಳಿ ಎಲ್ಲರೂ ಸ್ವಲ್ಪ ನಕ್ಕರು.

ಇಂದಿರಾಬಾಯಿಯು ಗಂಡಸರ ಕಡೆಗೆ ನೋಡಿ, "ನನ್ನನ್ನೇಕೆ ಕರೆದಿರಿ?" ಎಂದು ಕೇಳಲು, ಅಮೃತರಾಯನು "ನಾವೀಗ ಮಾತನಾಡಿದ್ದೆಲ್ಲವನ್ನು ನೀನು ಕೇಳಿರಬೇಕಷ್ಟೆ. ನಿನ್ನ ಅಭಿಪ್ರಾಯವೇನು?" ಎಂದು ಕೇಳಿದನು. ಆಗ ಅವಳು "ನಾನೆಷ್ಟಾದರೂ ಅಬಲೆಯಲ್ಲವೇ? ಆದರೂ ತಿಳಿದ ಮಟ್ಟಿಗೆ ಮಾತನಾಡುತ್ತೇನೆ, ತಪ್ಪಿದ್ದರೆ ತಿದ್ದಬೇಕಷ್ಟೆ" ಎಂದು ಹೇಳಿ,

“ ‘ನ್ಯಾಯವು ಎಲ್ಲರಿಗೂ ಏಕಪ್ರಕಾರವಿರಬೇಕು. ಕೆಲವರು ಇಂತಹ ಪ್ರಕಾರವೇ ಯೋಗ್ಯವಾಗಿ ನಡೆಯಬೇಕೆಂದು ಅವರನ್ನು ನೀವು ಬಲಾತ್ಕರಿಸುವುದಾದರೆ, ಬೇರೆಯವರಿಗೂ ಹಾಗೆಯೇ ಬಲಾತ್ಕರಿಸಬೇಕು’ ಎಂದೊಬ್ಬ ಧೃತಪ್ರಜ್ಞ ಪಂಡಿತನು ಹೇಳುತ್ತಾನೆ. ಹಾಗೆ ಹೇಳುವುದು ವಿಹಿತವಾದ್ದೇ?”

ಅಮೃತರಾಯನು ಭಾಸ್ಕರರಾಯನೊಡನೆ– “ಈಕೆಯ ಪ್ರಶ್ನೆಗಳಿಗೆ ನೀನೇ ಉತ್ತರಗಳನ್ನು ಕೊಡಪ್ಪಾ” ಎಂದು ಹೇಳಲು, ಭಾಸ್ಕರರಾಯನು,

“ವಿಹಿತವಾದ್ದೇ, ಸಂಶಯವೇನು?”

“ಎಲ್ಲಾ ಮತಾನುಯಾಯಿಗಳಿಗೂ ಆ ಮಾತು ಸಂಬಂಧಿಸುವುದೇ?”

“ಎಲ್ಲರಿಗೂ ಸಂಬಂಧಿಸುವುದು.”

“ಹಾಗಾದರೆ ಒಬ್ಬ ಪುರುಷನಿಗೆ ಎಷ್ಟು ಸಾರಿಯಾದರೂ ಮದುವೆಯಾಗಬಹುದಂತೆ, ಸ್ತ್ರೀಗೇಕಾಗಕೂಡದು? ಒಬ್ಬ ಸ್ತ್ರೀಯು ಪತಿಯ ಮರಣಾನಂತರ ತಲೆಬೋಳಿಸಿ ರೂಪವಿರೂಪ ಮಾಡಿ ಸನ್ಯಾಸದಲ್ಲಿರಬೇಕಂತೆ, ಪುರುಷನು ಪತ್ನಿಯ ಮರಣಾನಂತರ ತಲೆ, ಗಡ್ಡ, ಮೀಸೆ ಬೋಳಿಸಿ, ಏಕೆ ಸನ್ಯಾಸಿಯಾಗಬಾರದು?”

ಈ ಯುಕ್ತಿಯ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳು ಬೇಗನೆ ಸೂಚಿಸದ ಭಾಸ್ಕರರಾಯನು ತಾಯಿಯ ಹತ್ತಿರ ಅಂತರಂಗವಾಗಿ– “ನೀನು ನನ್ನ ಹತ್ತಿರ ನಿನ್ನೆ ಮಾತನಾಡಿದ್ದು ಈಕೆಯ ವಿಷಯವೇ?” ಎಂದು ಕೇಳಲು, “ಹೌದು, ಹೌದು, ಈಕೆಯ ವಿಷಯ ತಾನೇ” ಎಂದು ಹೇಳಲಾಗಿ, ಇಂದಿರಾಬಾಯಿಯೊಡನೆ,

“ಸ್ವಾರ್ಥವಿದ್ದಲ್ಲಿ ನ್ಯಾಯ ಕಡಿಮೆ. ಮುಖ್ಯ ಈ ವಿಷಯದಲ್ಲಿ ನನ್ನಭಿಪ್ರಾಯವೇನೆಂದು ನಾನು ಈ ಸಂಭಾಷಣೆಯ ಪ್ರಾರಂಭದಲ್ಲೇ ಹೇಳಿದ್ದೇನೆ.”

ಇಂದಿರಾಬಾಯಿಯು ಸುಮ್ಮಗಾದಳು. ಅಮೃತರಾಯನು ಆ ವರೆಗಿನ ಅವಳ ಜೀವಿತಚರಿತ್ರವನ್ನೆಲ್ಲ ಸವಿಸ್ತಾರವಾಗಿ ಹೇಳಿ, “ಭಾಸ್ಕರಾ, ಇವಳನ್ನು ನಿನಗೆ ವಿವಾಹಮಾಡಿ ಕೊಡುವುದೆಂದು ನಾವು ನಿಶ್ಚಯಿಸಿದ್ದೇವೆ. ನಿನ್ನಭಿಮತವೇನು” ಎಂದು ಕೇಳಲು, ಅವನು “ನಾನು ಈವರೆಗೆ ತಮ್ಮ ಮಾತನ್ನು ಶಿರಸಾವಹಿಸಿಕೊಂಡು ನಡೆದುಕೊಂಡವನೇ ಆಗಿದ್ದ ಮೇಲೆ ನನ್ನ ಮನೋಗತವೇನೆಂದು ಕೇಳಲವಶ್ಯವಿಲ್ಲ. ಕಾರ್ಯವು ನಾನು ಉದ್ಯೋಗದಲ್ಲಿ ಪ್ರವೇಶಿಸುವ ಮೊದಲೇ ಆಗುವುದುತ್ತಮ; ಏತಕ್ಕೆಂದರೆ ಅದಕ್ಕಾಗಿ ಪ್ರತ್ಯೇಕ ರಜೆ ಅವಶ್ಯವಿರದು” ಎಂದುತ್ತರ ಕೊಡಲು, ಅಮೃತರಾಯನು “ನನ್ನ ಆಲೋಚನೆಯೂ ಅದೇ” ಎಂದು ಹೇಳಿದನು. ಏವಂಚ ಇಂದಿರಾಬಾಯಿ ಸಮಕ್ಷಮದಲ್ಲೇ ವಿವಾಹದ ನಿಶ್ಚಿತಾರ್ಥವಾದುದರಿಂದ ಎಲ್ಲರೂ ಸಂತೋಷಪಟ್ಟರು.

## ೫೯

ಅಮೃತರಾಯನು ಇಂದಿರಾಬಾಯಿಯ ವಿವಾಹೋತ್ಸವಕ್ಕೋಸ್ಕರ ಬೇಕಾದ ಸಕಲ ಸಾಹಿತ್ಯಗಳನ್ನು ಮೊದಲೇ ಒದಗಿಸಿಟ್ಟಿದ್ದನು. ಭಾಸ್ಕರರಾಯನ ಅನುಮತಿಯೊಂದು ಮಾತ್ರವಲ್ಲದೆ ಬೇರೆ ಯಾವುದೊಂದು ವಸ್ತುವಾದರೂ ಬೇಕಾಗಿರಲಿಲ್ಲ. ಈಗ ಅವನ ಅನುಮತಿಯೂ ಸಿಕ್ಕಲು, ಪುರೋಹಿತ ರಾಮಕೃಷ್ಣಾವಧಾನಿಯನ್ನು ಕರೆಯಿಸಿ, ಮೂರನೇ ದಿವಸ ರಾತ್ರಿ ಎಂಟು ಗಳಿಗೆಗೆ ವಿವಾಹ ಮುಹೂರ್ತವನ್ನು ನಿಶ್ಚಯಿಸಿ, ತತ್‌ಕ್ಷಣವೇ ಆಯಾ ಕೆಲಸಗಳಿಗೆ ನೇಮಕವಾದವರು ಆ ಕೆಲಸಗಳನ್ನು ಮಾಡಲಪ್ಪಣೆಕೊಟ್ಟು, ವಿವಾಹ ಕಾಲದಲ್ಲಿ ಸ್ತ್ರೀಯರಿಗೆ ಯಾವ್ಯಾವ ಮರ್ಯಾದೆ ಉಪಚಾರಗಳೆಲ್ಲ ನಡಿಯಬೇಕೋ ಅವುಗಳ ವಿಷಯದಲ್ಲಿ ಜಲಜಾಕ್ಷಿ ಸುಶೀಲೆ ಇವರೊಡನಾಲೋಚಿಸಿ ತಿಳಿದು, ಬೇಕಾದ ಅನುಕೂಲತೆಗಳನ್ನೆಲ್ಲ ಮಾಡಿದ ಬಳಿಕ ಕಲೆಕ್ಟರ್ ಜಡ್ಜಿ ಮುಂತಾದ ದೊರೆಗಳಿಗೆಲ್ಲ ಆಮಂತ್ರಣ ಪತ್ರಗಳನ್ನು ಕಳುಹಿಸಿ, ಮರುದಿವಸ ಬೆಳಿಗ್ಗೆ ಪತ್ನಿಸಮೇತನಾಗಿ ತಾನೇ ವಾದ್ಯಘೋಷದಿಂದ ಹೊರಟು, ಊರಲ್ಲಿ ಸ್ವಜಾತಿಯವರೆಲ್ಲರಿಗೂ, ಭೀಮರಾಯನಲ್ಲಿಯೂ ಆಮಂತ್ರಣ ಮಾಡಿ ಬಂದದ್ದಲ್ಲದೆ ಕಮಲಪುರದಲ್ಲಿಯೂ ಬೇರೆ ಸಮೀಪದ ಊರುಗಳಲ್ಲಿಯೂ ಇರುವ ನೆಂಟರಿಷ್ಟರನ್ನು ಅದೇ ದಿವಸ ರಾತ್ರಿಯೊಳಗೆ ಕರೆಯಿಸಿಕೊಂಡನು. ಅಮೃತರಾಯನು ಮಹಾ ಗೌರವ ಉಳ್ಳವನೂ ಸರ್ವರಿಂದಲೂ ಮನ್ನಣೆಪಡೆದವನೂ ಜನಸ್ವಾಧೀನವುಳ್ಳವನೂ ಆಗಿದ್ದುದರಿಂದ ಈ ವಿವಾಹ ಕಾರ್ಯವನ್ನು ಕುರಿತು ಅವನ ಸಮಕ್ಷಮದಲ್ಲಿ ಯಾರೊಬ್ಬನೂ ಯಾವುದೊಂದು ಆಕ್ಷೇಪವನ್ನಾದರೂ ಮಾಡದೆ, ಭೀಮರಾಯ ಮತ್ತು ಕಟ್ಟಳೆಯವರ ಪಕ್ಷದ ಕೆಲವರು ಮಾತ್ರ ಹಿಂದಿನಿಂದ ಸ್ವಲ್ಪ ಗದ್ದಲ ಗುಬಾರು ಉಂಟುಮಾಡಿದರೂ, ಬಹುಜನರು ಅದಕ್ಕೆ ಲಕ್ಷ್ಯ ಕೊಡಲೇ ಇಲ್ಲ. ಮರುದಿವಸ ಅಮೃತರಾಯನಲ್ಲಿ ವಿಶಾಲವಾದ ರಾಜಾಂಗಣದಲ್ಲಿ ಹತ್ತಿಪ್ಪತ್ತು ಜನರು ಕೂಡಿ ಕೆಲವು ತಾಸುಗಳೊಳಗೆ ಎತ್ತರವಾದ ಚಪ್ಪರವೇರಿಸಿ, ಮೇಲುಗಟ್ಟು ಝುಮ್ಮರುಗ್ಲಾಸು ಮುಂತಾದ ವಿಧವಿಧವಾದ ದೀಪಗಳನ್ನು ತೂಗಿಸಿದರು. ಚಿತ್ರಿಕ ಶಂಕರಯ್ಯನು ಎಂಟು ಹತ್ತು ಜನರ ಸಹಾಯದಿಂದ ಲಗ್ನಮುಹೂರ್ತಕ್ಕೆ ಐದುಗಳಿಗೆ ಉಂಟೆಂದಾಗ ಅತಿ ರಮಣೀಯವಾದ ಮಂಗಲಮಂಟಪವನ್ನು ಕಟ್ಟಿ ಸಿದ್ಧಪಡಿಸಿದನು. ಕಮಲಪುರದಲ್ಲಿ ಇದು ಮೊದಲನೇ ವಿಧವಾ ವಿವಾಹವಾದುದರಿಂದಲೂ ವಧೂವರರ ಕೀರ್ತಿಯನ್ನು ಸರ್ವರೂ ಕೇಳಿದ್ದುದರಿಂದಲೂ, ಆ ದಂಪತಿಗಳನ್ನು ಕಣ್ಣಾರೆ ಕಾಣಬೇಕೆಂಬ ಕುತೂಹಲದಿಂದ (ಭೀಮರಾಯನ ಮನೆಯವರೂ ಕಟ್ಟಳೆಯ ಪಕ್ಷದ ಇನ್ನು ಕೆಲವರೂ ಹೊರತು) ಆಮಂತ್ರಣ ಹೊಂದಿದ ಬೇರೆ ಎಲ್ಲಾ ಮನೆಗಳಿಂದ ಸ್ತ್ರೀ ಪುರುಷರೆಲ್ಲರೂ ಶಿಶುಬಾಲ್ಯರೊಡನೆ ವಿವಾಹವನ್ನು ನೋಡುವುದಕ್ಕೆ ಬಂದರು. ಸರದಾರ ಸಾಹೇಬರೂ ದೊರೆಸಾನಿಗಳೂ ಮಿಶನೆರಿಗಳೂ ಪಾರ್ಸಿಯರೂ ಗುರ್ಜರರೂ ಬೇರೆ ಜಾತಿಗಳ ಲೆಕ್ಕವಿಲ್ಲದಷ್ಟು ಜನರೂ ಲಗ್ನಮುಹೂರ್ತಕ್ಕೆ ಒಂದು ಗಳಿಗೆ ಮುಂಚಿತವಾಗಿಯೇ ಬಂದುಮುಟ್ಟಲು, ಅಮೃತರಾಯನು

ಅವರೆಲ್ಲರನ್ನು ಸನ್ಮಾನಿಸಿ, ತಾರತಮ್ಯಾನುಸಾರವಾಗಿ ಕುಳ್ಳಿರಿಸಿದನು. ಲಗ್ನದ ಮುಹೂರ್ತವು ಬಂತು. ವರನಿಗೆ ಒಂದು ಕಡೆಯಲ್ಲಿ ಅವನ ಸ್ನೇಹಿತರು ಅಮೌಲ್ಯವಾದ ವಸ್ತ್ರಾಲಂಕಾರಗಳನ್ನು ಮಾಡಿದರು. ವಧುವಿಗೆ ಮತ್ತೊಂದು ಕಡೆಯಲ್ಲಿ ಸ್ತ್ರೀಯರು ನಾನಾ ತರದ ಉಡಿಗೆ ಆಭರಣಗಳಿಂದಲೂ ಪುಷ್ಪಗಳಿಂದಲೂ ಶೃಂಗರಿಸಿದರು. ಆಗ ಶಾರದಾಬಾಯಿಯು ಈ ಶೋಭನ ಗೀತವನ್ನು ಹಾಡಿದಳು–

ಮಂದಗಾಮಿನಿಯರೊಂದಾಗಿ
ಚಂದದೈತಂದು ಕೂಡಿರಲು,
ಕುಂದಕುಸುಮ ಕೆಂಬಂದುಗೆ ಚಂಪಕ
ಸಂದಣಿಸಿದ ಜಾಜಿಯ ಮಲ್ಲಿಗೆಸರ
ವೃಂದ ಬಕುಳ ಶಾವಂತಿಗೆ ಮಾಲೆಗ
ಳಿಂದಿರೆಯ ಮುಡಿಗೇ ಇರೀಸೀದರ್ ॥ ಶೋಭಾನೆ ॥

ಮುತ್ತು ಮೋಹನ ಮಾಲೆಗಳಾ,
ವೃತ್ತಮಾಣಿಕ ಕಡಗಗಳಾ,
ಹತ್ತುಕಟ್ಟಿನ ಮೇಲಲ್ಬಟ್ಟು ಮಲಕು ವೊಂ-
ಬತ್ತು ಸರದ ಕಠಾಣಿಯ, ವಜ್ರದ
ಕೆತ್ತಿಗೆಪದಕ, ಸುಮಂಗಲ ತಾಳಿಯ
ಚಿತ್ರರೂಪಿಣಿಗೇ ತೊಡೀಸೀದರ್ ॥ ಶೋಭಾನೆ ॥

ಮುತ್ತಿನ ಭಾಗ್ಯದೋಲೆಗಳಾ
ಸುತ್ತುಮುತ್ತಿನ ಚಳತುಂಬು,
ಉತ್ತಮ ಮಾಣಿಕ ಸರಪಣಿಗಳ ಮೇ–
ಲೊತ್ತಿ ತೂಗಿದ ಗಿಣಿಬಾವುಲಿಗಳ, ಪೊಳೆ–
ಯುತ್ತಿಹ ಚಂದ್ರಬಾವುಲಿ, ಕಲಷಗಳಿಹ
ಕೊಪ್ಪುಬುಗುಡಿಯಾ ತೊಡೀಸೀದರ್ ॥ ಶೋಭಾನೆ ॥

ಪಿಲ್ಲಿಯುಂಗುರ, ಕಾಲಕಡಗಾ
ಪೊಲ್ಲರೆ, ಗೆಜ್ಜೆಪೈಜಣವಾ,
ಪುಲ್ಲೆನಿಪಾ ಗಿರಿಗೆಜ್ಜೆಗಳ್ಳೆದರ
ಜೊಲ್ಲಿಗಳಿಂದ್ವೊಳೆಯುವ ನಡುಪಟ್ಟಿಯ
ಸಲ್ಲಲಿತಾನಂದದೊಳಿಂದಿರೆಯನು
ವಲ್ಲಭೆಯರು ಕೂಡಿ ತೊಡೀಸೀದರ್ ॥ ಶೋಭಾನೆ ॥

ಬಾಲೆಯರತಿ ಸೊಬಗಿನಲಿ
ನೀಲಪಟ್ಟಿನ ಉಡಿಗೆಗಳಾ
ಲೋಲದೊಳುಡಿಸಿ, ವಯ್ಯಾರದಿಪೊಳೆವ
ಸುಲೀಲೆಯ ಕಂಚುಕ ತೊಡಿಸಿ, ಕುಂಕುಮದಲಿ
ಬಾಲಚಂದ್ರ ರೂಪಿನೊಳಾಬಾಲೆಯ
ಭಾಳಶೃಂಗರಿಸೀ ಹರಸೀದರ್ ॥ ಶೋಭಾನೆ ॥

ಈ ಪ್ರಕಾರದಲ್ಲಿ ಇಂದಿರಾಬಾಯಿಯನ್ನು ಶೃಂಗರಿಸಿದ ನಂತರ ಸಂಜೀವರಾಯನು ಭಾಸ್ಕರರಾಯನನ್ನು ಕರೆದುಕೊಂಡು ಒಂದು ಕಡೆಯಿಂದ, ಅನೇಕ ಸ್ತ್ರೀಯರು ಇಂದಿರಾಬಾಯಿಯನ್ನು ಕರೆದುಕೊಂಡು ಮತ್ತೊಂದು ಕಡೆಯಿಂದ ಚಪ್ಪರಕ್ಕೆಳಿಸಿ ತಂದು ಮಂಗಲಮಂಟಪದಲ್ಲಿ ಕುಳ್ಳಿರಿಸಲು, ಮನೆಯ ಪೂರ್ವದಿಕ್ಕಿನ ಬುರುಜಿನ ಮೇಲೆ ಇಂಗ್ಲಿಷ್ ಬ್ಯಾಂಡ್‌ವಾದ್ಯದ ಘೋಷ, ಪಶ್ಚಿಮ ದಿಕ್ಕಿನ ಬುರುಜಿನ ಮೇಲೆ ದೇಶೀಯ ವಾದ್ಯದ ಘೋಷ, ಚಪ್ಪರದಲ್ಲಿ ವೇದಮಂತ್ರದ ಘೋಷ, ಹೀಗೆ ವಿಧವಿಧವಾದ ಆನಂದ ಘೋಷಗಳುಂಟಾದವು. ಅಮೃತರಾಯನೂ ಜಲಜಾಕ್ಷಿಯೂ ಮಂಟಪದೊಳಗೆ ಹೋಗಿ, ರಾಮಕೃಷ್ಣ ಅವಧಾನಿಯು ವೇದಶಾಸ್ತ್ರ ವಿಧಿಗಳಿಗನುಸಾರವಾಗಿ ಆಗಾಗ್ಗೆ ಕೊಟ್ಟು ಸೂಚನೆಗಳಂತೆ ಸಕಲ ಶಾಸ್ತ್ರೋಕ್ತ ಕ್ರಮಗಳನ್ನು ನಡೆಯಿಸಿ, ಇಂದಿರಾಬಾಯಿಯನ್ನು ಭಾಸ್ಕರರಾಯನಿಗೆ ಧಾರದತ್ತ ಮಾಡಿಕೊಟ್ಟರು. ಅದನ್ನೆಲ್ಲ ನೋಡಿ ಕೂಡಿದ ಸಭೆಯವರೆಲ್ಲರೂ ಸಂತೋಷದಿಂದ ಕೇಕೇ ಬಡೆದು ಮಹಾ ಘೋಷವನ್ನುಂಟುಮಾಡಿದರು. ಆ ಬಳಿಕ ಸರದಾರ ಸಾಹೇಬರೂ ದೊರೆಸಾನಿಗಳೂ ಕೂಡಿರುವಲ್ಲಿ ಅನೇಕ ವಿಧದ ಫಲಾಹಾರಗಳು, ಕಾಫಿ, ಚಾ, ಶರ್ಬತ್ ಮುಂತಾದ ಪಾನಕಗಳು, ಬಗೆಬಗೆಯ ಪುಷ್ಪಗಳು, ಸುಗಂಧ ದ್ರವ್ಯಗಳು ಮುಂತಾದ ವಿವಿಧ ಪದಾರ್ಥಗಳನ್ನು ತಂದಿಡುವುದು, ಬೇರೆ ಬೇರೆ ಜಾತಿಯವರಿಗೆ ಅವರವರ ಇಷ್ಟಕ್ಕನುಸಾರವಾದ ಫಲಹಾರ ಪಾನಕಗಳನ್ನೂ, ಸುಗಂಧಪದಾರ್ಥಗಳನ್ನೂ ವೀಳ್ಯ ತಾಂಬೂಲಗಳನ್ನು ಕೊಟ್ಟು ಉಪಚರಿಸುವುದು ಈ ಮುಂತಾದ ಕಾರ್ಯಗಳೆಲ್ಲ ಸಾಂಗವಾಗಿ ನಡೆದವು. ಆ ಬಳಿಕ ಪ್ರಥಮತಃ ಜಡ್ಜಿದೊರೆ ಅವರ ದೊರೆಸಾನಿ, ಅವರ ಹಿಂದೆ ಕಲೆಕ್ಟರ್ ದೊರೆ, ಅವರ ದೊರೆಸಾನಿ ಆಮೇಲೆ ಒಬ್ಬೊಬ್ಬರಾಗಿ ಬೇರೆ ಸರದಾರ ಸಾಹೇಬರು ಅವರ ದೊರೆಸಾನಿಗಳು ಸಹ ಮಂಟಪದ ಹತ್ತಿರಕ್ಕೆ ಬಂದು, ಅವರ ಭಾಷೆಯಿಂದ ಸುಖಸಮೃದ್ಧಿಯೂ ದೀರ್ಘಾಯುಸ್ಸೂ ಪುತ್ರ ಸಂತತಿಯೂ ಆಗಲೆಂದು ವಧೂವರರಿಗಾಶೀರ್ವದಿಸಿ, ಒಬ್ಬನು ವರನಿಗೆ ವಜ್ರದುಂಗುರ, ಒಬ್ಬಳು ವಧೂವಿಗೆ ಕುತ್ತಿಗೆಯ ಪದಕ ಹೀಗೆಲ್ಲರೂ ತಮತಮಗೆ ಯುಕ್ತಕಂಡ ಉಡುಗೊರೆಗಳನ್ನು ಮಾಡಲು, ವರನು ಸರದಾರ ಸಾಹೇಬರಿಗೂ ವಧುವು ದೊರೆಸಾನಿಗಳಿಗೂ ಹೂವಿನ ಮಾಲೆಗಳನ್ನು ಹಾಕಿ ಮರ್ಯಾದೆಯಿಂದ ನಮಸ್ಕರಿಸಿದರು. ಅವರೆಲ್ಲರೂ ಅಮೃತರಾಯ ಜಲಜಾಕ್ಷಿ ಇವರೊಡನೆ ಮಾತನಾಡಿ, ತಂತಮ್ಮ ಬಂಡಿಗಳನ್ನೇರಿ ಬಂಗಲಾಗಳಿಗೆ ಹೋದರು. ಆ ಬಳಿಕ, ಉಳಿದ ಸಭೆಯವರಲ್ಲಿ ಅನೇಕ ಪುರುಷರೂ ಸ್ತ್ರೀಯರೂ ಭರ್ಜರಿ

ಶಾಲುಗಳೊ, ಚಿತ್ರವಿಚಿತ್ರವಾದ ಸೀರೆ ಕಂಚುಕಗಳೊ, ಆಭರಣಗಳೊ, ನಾಣ್ಯಗಳೊ ಹೀಗೆಲ್ಲ ಅಮೌಲ್ಯವಾದ ಉಡುಗೊರೆಗಳನ್ನು ಮಾಡಿದರು. ಈ ಗದ್ದಲವೆಲ್ಲ ತೀರಿದ ನಂತರ ಮಂಟಪದಲ್ಲಿ ಆಗಲಿಕ್ಕಿದ್ದ ಬೇರೆ ಕ್ರಮಗಳು, ಅಂದರೆ ಸೇಸೆ ಮಂಗಳಾರತಿ ಮುಂತಾದ ವಧೂವರರ ಉಪಚಾರಗಳು ನಡೆಯಲೆಂದು ರಾಮಕೃಷ್ಣ ಅವಧಾನಿಯು ಜಲಜಾಕ್ಷಿಗೂ ಕೂಡಿದ ಬೇರೆ ಸ್ತ್ರೀಯರ ಸಮೂಹಕ್ಕೂ ಕರೆದು ಹೇಳಲು, ಪ್ರಥಮತಃ ಮೂರು ಮಂದಿ ಸುಮಂಗಲೆಯರು ಸೇಸೆಯನ್ನು ಸುರಿದು ಆ ಬಳಿಕ ಜಲಜಾಕ್ಷಿಯು ಚಿನ್ನದ ಹರಿವಾಣದಲ್ಲಿ ಒಂಭತ್ತು ಚಿನ್ನದ ನೀರಾಂಜನಗಳಲ್ಲಿ ದೀಪಗಳನ್ನುರಿಸಿ, ಮಂಗಳ ಶೋಭನವನ್ನು ಹಾಡುತ್ತಾ ವಧೂವರರಿಗೆ ಮಂಗಳಾರತಿಯನ್ನು ನಿವಾಳಿಸಿದಳು. ಹಾಗೆಯೇ ಇನ್ನಿಬ್ಬರು ಸುಮಂಗಲೆಯರು ಅದೇ ರೀತಿಯಲ್ಲಿ ಅದೇ ಆರತಿಯನ್ನು ನಿವಾಳಿಸಿದರು. ಅವರು ಹಾಡಿದ ಶೋಭನಗೀತವು ಯಾವುದೆಂದರೆ–

ಮಂಗಳಾಕ್ಷತೆ ದೀವಿಗೆ ಸಹಿತಾ, ಸು–
ಮಂಗಲೆಯರು ಶೋಭನ ಪಾಡಿ,
ಮಂಗಳಾತ್ಮಕ ಭಾಸ್ಕರ ಇಂದಿರೆಯರ
ಮಂಗಳಾರತಿಯನು ಬೆಳಗಿದರು
ಹರುಷದಿ ॥ ಶೋಭಾನೆ ॥

ಸಾಗರ ಮೂರನು ದಾಟಿದಗೆ,
ಬೇಗದಿ ಸೀಯಸ್ ಗೆಲಿದವಗೆ,
ಈಗ ಕಮಲಪುರದಾದಿ ಕಲೆಕ್ಟರ–
ನಾಗಿಹ ಚನ್ನಿಗ ಭಾಸ್ಕರಗೆ
ಬೆಳಗೀರೆ ॥ ಶೋಭಾನೆ ॥

ಚಿತ್ರರೂಪಿಣಿ ಸಹಧರ್ಮಿಣಿಗೆ
ಮೆಟ್ರಿಕ್ಯೂಲೇಶನ್ ಗೆಲಿದವಳಿಗೆ,
ಪಿತೃಮಾತೃಗಳಪವಿತ್ರ ಬೋಧೆಯ ಕ್ಷಣ
ಮಾತ್ರದಿ ತುಚ್ಛೀಸಿದಿಂದಿರೆಗೆ
ಬೆಳಗೀರೆ ॥ ಶೋಭಾನೆ ॥

ಆ ಬಳಿಕ ಭಾಸ್ಕರಾಯನ ಅತ್ಯಂತ ಮಿತ್ರನಾದ ಸಂಜೀವರಾಯನು ಮಂಟಪದೆದಿರಿನಲ್ಲಿ ನಿಂತು, ಎರಡು ಸಂಸ್ಕೃತ ವೃತ್ತಗಳನ್ನು ಹಾಡಿದನು– ಅವ್ಯಾವವೆಂದರೆ–

ದೀರ್ಘಾಯುರ್ವಿಭವೋ ಯುವಾಂ ಸಮನುಗ್ರಹ್ಣೀತಾಂಚ ತೌದಂಪತೀ
ಭೂಯಾಸ್ತಾಂ ಯುವಯೋಶ್ಚ ದೈವವಿಷಯಾ ಭಕ್ತಿಶ್ಚಶಾಂತಿ ರ್ಹೃದಿ।
ಯದ್ವತ್ಸಂ ಮಿಲತೌ ಯುವಾಮಿಹಮಿಥೋಯತ್ಕಿಂಚಿತ್ ತಥೈವೇಶ್ವರೇ
ದೈವಾನುಗ್ರಹ ಸಂಪದ್ಯೈ ಯುವಯೋರ್ಧ್ವಾರ್ರೈದಿಷೀರನ್ನ್ಯೃಣಮ್ ॥ ೧ ॥

ಅಹರ ಹರಿತಿ ಧರ್ಮಮಾರ್ಗಭಾಜೋ
ರಿಹಯುವ ಯೋಸ್ತ್ರಿದಿವಂ ಪ್ರತಿಪ್ರಯಾತೋಃ।
ಅತಿವಿಪುಲ ಭವದ್ಧ್ವದಂತರಾಲೇ
ಲಘುತಮ ಮಿತ್ರಮಥಾನು ಮಾನಯೇತಂ ॥ ೨ ॥

ಅನಂತರ ರಾಮಕೃಷ್ಣ ಅವಧಾನಿಯು ಮಂಗಳಾಷ್ಟಕವನ್ನು ಹೇಳುತ್ತಾ ಮಂಗಳಾಕ್ಷತೆಗಳನ್ನು ಸುರಿದು ವಧೂವರರನ್ನು ವಾದ್ಯಘೋಷದೊಡನೆ ಮಂಟಪದಿಂದಿಳಿಸಿ ವಧುವಿನ ಬಲದ ಕೈಯನ್ನು ವರನ ಬಲದ ಕೈಯಿಂದ ಹಿಡಿಯಿಸಿ, ವಧುವಿನ ಹಿಂದುಕಡೆಯಲ್ಲಿಯೂ ಅತ್ತಿತ್ತ ಕಡೆಯಲ್ಲಿಯೂ ಸುಮಂಗಲೆಯರ ಸಮೂಹ ಸಮೇತ ಮನೆಯೊಳಗೆ ಕರೆದುಕೊಂಡುಹೋಗಿ ಶೃಂಗಾರ ಶಯ್ಯೆಯ ಮೇಲೆ ಕುಳ್ಳಿರಿಸಿ, "ಧನಂ ಧಾನ್ಯಂ ಪಶುಂ ಬಹುಪುತ್ರ ಲಾಭಂ ಶತಸಂವತ್ಸರಂ ದೀರ್ಘಮಾಯುಃ, ಆಯುಷ್ಯಾದಿ ಉತ್ತರೋತ್ತರಾಭಿರಸ್ತು" ಎಂದಾಶೀರ್ವದಿಸಿದನು. ಆ ಮೇಲೆ ಕೂಡಿದ ಸಭೆಯು ಹೀರಲಾರಂಭಿಸಿ, ಅಮೃತರಾಯನ ಗುರುತು ಪರಿಚಯದವರೂ ಸ್ನೇಹಿತರೂ ಅವನನ್ನು ಕಂಡು ಮಾತನಾಡಿ, ತಂತಮ್ಮ ಮನೆಗಳಿಗೆ ಹೋದರು.

ಮರುದಿವಸ ಅಮೃತರಾಯನಲ್ಲಿ ಸ್ವಜಾತಿಯವರೆಲ್ಲರಿಗೂ, ಬೇರೆ ಜಾತಿಯವರಿಗೆ ಅವರವರ ದೇವಾಲಯಗಳಲ್ಲಿಯೂ ಪಂಚಭಕ್ಷ್ಯ ಪರಮಾನ್ನಗಳಿಂದ ಊಟಗಳಾದವು. ಅನಂತರ ಅಮೃತರಾಯನು ಐನೂರು ರೂಪಾಯಿಯ ವಿಧವಿಧವಾದ ವಸ್ತ್ರಗಳನ್ನು ತರಿಸಿ, ತನ್ನ ಮನೆಯ ಎಲ್ಲ ಸೇವಕರಿಗೂ ಭೀಮರಾಯ ಸುಶೀಲೆ ಇವರಲ್ಲಿಯ ಸೇವಕರಿಗೂ ಹಂಚಿಕೊಡಲು, ಅವರೆಲ್ಲರೂ ಸಂತೋಷಪಟ್ಟು ವಧೂವರರಿಗಾಶೀರ್ವದಿಸಿದರು.

## ೬೦

ವಿವಾಹ ಸಂಪೂರ್ಣವಾಯಿತು. ಭಾಸ್ಕರರಾಯ ಇಂದಿರಾಬಾಯಿ ಇವರು ಅನ್ಯೋನ್ಯ ಪ್ರೀತಿಯಿಂದಲೂ ವಿಶ್ವಾಸದಿಂದಲೂ ನಡೆದುಕೊಂಡಿರುವುದನ್ನು ಕಂಡು ಅಮೃತರಾಯ, ಜಲಜಾಕ್ಷಿ, ಸುಶೀಲೆ ಇವರ ಮನಸ್ಸಿನಲ್ಲಿ ಆನಂದವೂ ತೃಪ್ತಿಯೂ ಉಂಟಾಯಿತು. ಭಾಸ್ಕರರಾಯನು ತನ್ನ ಉದ್ಯೋಗದಲ್ಲಿ ಪ್ರವೇಶಿಸಿ ಉದ್ಯೋಗಪ್ರಯುಕ್ತವಾದ ಸಕಲ ಕಾರ್ಯಗಳನ್ನು ನಿಷ್ಪಕ್ಷಪಾತ, ನೀತಿ, ದಯೆ, ಉದಾರತೆಗಳಿಂದ ನಡೆಯಿಸಲು ಸರ್ವರೂ "ಸೈ! ಸೈ! ಇದೀಗ ಜನ್ಮದ ಸಾರ್ಥಕ!" ಎಂದು ಹೊಗಳಲಾರಂಭಿಸಿದರು. ಹೀಗೆಯೇ ಕಾಲಕ್ರಮಿಸುತ್ತಿರುವಾಗ ಒಂದು ದಿವಸ ಸಾಯಂಕಾಲದ ಸಮಯದಲ್ಲಿ ಭಾಸ್ಕರರಾಯನು ಇಂದಿರಾಬಾಯಿಯ ಸಮೇತ ಬ್ರೋಹೆಂ ಎಂಬ ಕುದುರೆಯ ಸಾರೋಟಿನಲ್ಲಿ ಬಂದರದತ್ತ ಕಡೆಗೆ ಸವಾರಿಯಿಂದ ಹೋಗುತ್ತಿರುವಾಗ ಬಂಡಸಾಲೆಯಲ್ಲಿದ್ದ ಭೀಮರಾಯನು ಕಂಡು, ಅತಿ ಸಂತಾಪಪಟ್ಟು ಬಂಡಸಾಲೆಯನ್ನು ಮುಚ್ಚಿ ಬೀಗಮುದ್ರೆಮಾಡಿ ನೆಟ್ಟಗೆ ಮನೆಗೆ ಬಂದು ಅಂಬಾಬಾಯಿಯೊಡನೆ–

"ಕೇಳಿದೆಯೇನೇ, ನಮ್ಮ ಇಂದಿರೆಯ ಮಹತ್ತು? ಪೂರ್ಣವಾಗಿ ಇಂಗ್ರೇಜಿ ಮರ್ಜಿ ಯಾಯಿತಷ್ಟೆ! ಕುದುರೆ ಸಾರೋಟಿನಲ್ಲಿ ಹೊಸ ಗಂಡನ ಸಮೇತ ತುಂಬಿದ ಪೇಟೆಯಲ್ಲಿ ಢರ್‍ರೆಂದು ಸವಾರಿಮಾಡುತ್ತಾ ಬಂದರದತ್ತ ಕಡೆಗೆ ಹೋಗುವುದನ್ನು ನಾನೀಗಲೆ ಕಣ್ಣಾರೆ ಕಂಡೆನು. ಇಬ್ಬರೂ ಇಂಗ್ರೇಜಿಯಿಂದ ಮಾತನಾಡುತ್ತಾ ನಗುತ್ತಾ ಮುಂದರಿಸಿದರು. ಮದುವೆಯಾದ ಕೆಲವು ದಿವಸಗಳಲ್ಲೇ ಗಂಡಹೆಂಡರು ಮಾತನಾಡುವುದು! ಇಂಥಾ ಅವಸ್ಥೆ ನನ್ನ ಅಜ್ಜಪಿಜ್ಜರ ಕಾಲದಿಂದ ನಾನು ಕೇಳಲಿಲ್ಲ!"

"ಉಡಿಗೆ ಅಲಂಕಾರವೆಲ್ಲ ಹೇಗೆ?"

"ಜರಿಕಂಬಿಯ ನೀಲ ಬಣ್ಣದ ಪಟ್ಟೇ ಸೀರೆ, ಗುಲಾಬಿ ರಂಗಿನ ರೇಶ್ಮೆಯ ಕುಪ್ಪಸ, ಆಭರಣಗಳೆಲ್ಲ ನಮ್ಮ ಜಾತಿಗೆ ಒಪ್ಪಿದವುಗಳೇ, ನಿಡುಜಡೆ ಕಟ್ಟಿ ಮಲ್ಲಿಗೆ, ಗುಲಾಬಿ ಹೂ ಮುಡಿದುಕೊಂಡಿದ್ದಾಳೆ; ಕುಂಕುಮದ ಬೊಟ್ಟು, ಸಣ್ಣದೂ ದೊಡ್ಡದೂ ಅಲ್ಲದ ಒಂದು ವಿಧದ್ದು, ಕಣ್ಣಿಗೆ ಕಾಡಿಗೆ, ಮುಖಕ್ಕೂ ಕೈಗಳಿಗೂ ಅರಸಿನ ಹಚ್ಚಿಕೊಂಡಂತೆ ಕಾಣುತ್ತೆ."

"ಆ ಗಂಡನೆಂಬವನ ಅಲಂಕಾರ ಹೇಗೆ?"

"ಪಟ್ಟೇ ಕಂಬಿಯ ಹನ್ನೆರಡು ಮೊಳದ ಧೋತ್ರ, ಕಪ್ಪು ನಿಲುವಂಗಿ, ಶ್ಯಾಮಲ ವರ್ಣದ ಸಣ್ಣ ಪಾಗೋಟಿ, ಹಣೆಯಲ್ಲಿ ಗೀರುಗಂಧ, ರಕ್ತಚಂದನದ ಬೊಟ್ಟು– ಅದಕ್ಕೆಲ್ಲ ಏನು ಕಡಿಮೆ? ಇಂಗ್ರೇಜಿ ಕಲಿತವರ ಹತ್ತಿರ ಏನೇನೆಲ್ಲ ಠಕ್ಕಿದೆ!"

"ಏನಾದರೇನು? ಜಾತಿ ಹೋಯಿತಷ್ಟೆ?"

"ಎತ್ತ ಹೋಯಿತು? ಯಾರು ತೆಗೆದರು?"

"ಮತ್ತೆ ತಾವೇನು ಮಾಡುತ್ತಿದ್ದೀರಿ? ತಮಗೇಕೆ ಧರ್ಮವಿಚಾರಕ ಸ್ಥಾನ?"

"ಸಿಟ್ಟಿನ ವಶವಾಗಬೇಡ. ಏನಾಗಬೇಕು ಹೇಳು. ಕ್ಷಣಮಾತ್ರದಲ್ಲಿ ಚಕಣಾಚೂರು ಹಾರಿಸುವ ಬಗೆ ನೋಡು."

"ಏನಾಗಬೇಕು! ಶ್ರೀ ಗುರುಗಳಿಗೆ ಒಂದು ಬಿನ್ನಹ ಪತ್ರವನ್ನು ಬರೆದು ಹಚ್ಚಿಬಿಡಲು ಜಾತಿಯೆಲ್ಲಿ?"

"ಅದರ ಬಿಸಾತೇನಿದೆ? ನೋಡು ನಾಳೆ ಮಾಡುವ ಬಗೆ."

ಎಂದು ಗಂಡಹೆಂಡಿರು ಮಾತನಾಡಿ ನಿಶ್ಚಯಿಸಿ ಭೀಮರಾಯನು ಮರುದಿವಸವೇ ತನ್ನ ಗುಮಾಸ್ತನಾದ ಬ್ಯಾಗಡೆ ದೇವರಾಯನನ್ನು ಕರೆಯಿಸಿ, ಶ್ರೀ ಗುರು ಮಠಕ್ಕೆ ಬಿನ್ನಹ ಪತ್ರವನ್ನು ಬರೆಯಿಸಿ ಕಳುಹಿಸಿಯೇ ಬಿಟ್ಟನು. ಅದರಲ್ಲಿ "ಕಮಲಾಪುರದಲ್ಲಿ ಇನ್ನು ಮುಂದೆ ಜಾತಿ ನೀತಿ, ಗುರುಹಿರಿಯರು, ಸಾಧುಸಂತರು, ಕಟ್ಟುಕಟ್ಟಳೆ ಇವೇ ಮೊದಲಾದ ಸನ್ಮಾರ್ಗ ವಿಷಯಗಳಿಗೆ ಅಂತ್ಯಕಾಲ ಬಂದಿರುವ ಹಾಗೆ ತೋರುತ್ತೆ. ಸನ್ಮಾರ್ಗ ಬೋಧೆಯನ್ನುಪೇಕ್ಷಿಸಿ ಓಡಿ ಹೋದ ನನ್ನ ಮಗಳು ಇಂದಿರೆಯೆಂಬ ವಿಧವೆಯನ್ನು ಸುಂದರರಾಯನ ಮಗ ವಿಲಾಯತಿಗೆ ಹೋಗಿ ಬಂದ ಭಾಸ್ಕರರಾಯನಿಗೆ ಕೊಟ್ಟು ವಕೀಲ ಅಮೃತರಾಯನಲ್ಲಿ ವಿಧವಾ ವಿವಾಹವಾಯಿತು. ಇಂಗ್ರೇಜಿ ಕಲಿತ ಅನೇಕ ಮಂದಿ ಗೃಹಸ್ಥರು ಅದರಲ್ಲಿ

ಸಂಪರ್ಕವಾಗಿ ನಡೆದು ಊಟ ಫಲಾಹಾರ ಮುಂತಾದ್ದನ್ನು ಮಾಡಿ ಊರನ್ನೆಲ್ಲ ಭ್ರಷ್ಟಮಾಡಿ ಹಾಕಿ, ಕೇಳಿದರೆ ಇಂಗ್ರೇಜಿ ಶಬ್ದಗಳನ್ನು ಸೇರಿಸಿ ಯದ್ವಾತದ್ವಾ ಮಾತನಾಡುತ್ತಾರೆ. ನನ್ನಂತಹರು ಇನ್ನು ಮುಂದೆ ಜಾತಿ ಇಟ್ಟುಕೊಂಡು ಸನ್ಮಾರ್ಗದಲ್ಲಿ ನಡೆಯುವುದೆಂಬ ಮಾತು ಇಲ್ಲಿಗಾಯಿತು. ಈ ವಿಷಯದಲ್ಲಿ ಶ್ರೀಪಾದಂಗಳವರು ಕಠಿಣವಾಗಿ ಆಲೋಚಿಸಬೇಕೆಂದು ಪ್ರಾರ್ಥಿಸುತ್ತೇನೆ."

ಎಂದು ಬರೆದುದನ್ನು ಪಾರುಪತ್ಯಗಾರನಾದ ಪಟ್ಟಾಭಿರಾಮಶಾಸ್ತ್ರಿಯು ಶ್ರೀಗುರುಗಳಿಗೆ ಓದಿ ಹೇಳಲು, ಬರುವ ಪೂರ್ಣಿಮೆಯ ದಿವಸ ಮಠದಲ್ಲಿ ಒಂದು ಧರ್ಮಕಾರ್ಯಾಲೋಚನೆ ಸಭೆ ಕೂಡಬೇಕೆಂತಲೂ, ಕಮಲಪುರದಿಂದ ಧರ್ಮವಿಚಾರಕನೂ ಮುಖ್ಯ ಮುಖ್ಯ ಪ್ರತಿನಿಧಿಗಳೂ ಬರಬೇಕೆಂತಲೂ ನಿರೂಪ ಕಳುಹಿಸಬೇಕಾಗಿ ಅಪ್ಪಣೆಯಾಯಿತು. ಆ ಪ್ರಕಾರ ಬರೆದ ನಿರೂಪವು ಭೀಮರಾಯನಿಗೆ ಬಂದು ಮುಟ್ಟಿತು. ಅವನು ಅದನ್ನು ನೋಡುವುದಕ್ಕಾಗಿ ಬಹುಮಂದಿ ಗೃಹಸ್ಥರ ಬಳಿಗೆ ಕಳುಹಿಸಿದನು. ಆ ಬಳಿಕ ಒಂದೆರಡು ದಿವಸದಲ್ಲಿ ಭೀಮರಾಯನೂ ಅವನ ಗುಮಾಸ್ತ ದೇವರಾಯನೂ ಬೇರೆ ಹತ್ತಿಪ್ಪತ್ತು ಮಂದಿ ಗೃಹಸ್ಥರೂ, ಒಬ್ಬರಿಬ್ಬರು ಬಿ.ಎ., ಬಿ.ಎಲ್.ಗಳೂ ಕಮಲಪುರದಿಂದ ಹೊರಟು ಹೋಗಿ, ನೇಮಿಸಿದ ದಿವಸವೇ ಶ್ರೀಮಠಕ್ಕೆ ಮುಟ್ಟಿದರು. ಬೇರೆ ಊರುಗಳಿಗೂ ಹೋದ ನಿರೂಪಗಳ ಪ್ರಕಾರ ಆ ಊರುಗಳಿಂದಲೂ ಅನೇಕರು ಬಂದು ಮುಟ್ಟಿದರು. ಸಭೆ ನೆರೆಯಿತು. ಭೀಮರಾಯನು ಬಿನ್ನಹ ಪತ್ರದಲ್ಲಿ ಬರೆದ ಸಂಗತಿಗಳನ್ನು ಓದಿ ಹೇಳಿ, ಅವುಗಳಿಗೆ ಸಂಬಂಧಿಸಿದ ಬೇರೆ ಸಂಗತಿಗಳನ್ನು ಸಹ ಸಭೆಗೆ ಅರಿಕೆ ಮಾಡಿದನು. ಗೃಹಸ್ಥರೆಲ್ಲರೂ ಪ್ರಸ್ತಾಪದಲ್ಲಿ ತಂದ ವಿಷಯಗಳನ್ನು ಚರ್ಚಿಸಿ, ಕಮಲಪುರದಿಂದ ಹೋದ ಪ್ರತಿನಿಧಿಗಳೊಡನೆ ಆಲೋಚಿಸಿದ್ದಲ್ಲಿ ಅವರೆಲ್ಲರೂ, "ಶಾಸ್ತ್ರದ ಸಂಗತಿಗಳನ್ನು ನಾವರಿಯೆವು, ಸಂಸ್ಥಾನದಿಂದಲೇ ಅವುಗಳನ್ನಾಲೋಚಿಸಿ ಅಪ್ಪಣೆಯಾಗಬೇಕು" ಎಂದುತ್ತರ ಕೊಡಲು ಶ್ರೀಪಾದಂಗಳವರು ಸಭೆಯವರಿಗೆ ಈ ಕೆಳಗಿನ ಪ್ರಶ್ನೆಗಳನ್ನು ಬರೆಯಿಸಿ ಕೊಟ್ಟು, ಅವುಗಳಿಗೆ ಉತ್ತರಗಳನ್ನು ಬರೆದು ಕೊಡಬೇಕೆಂದಾಜ್ಞಾಪಿಸಿ ದರು–

ಪ್ರ: "ಶ್ರುತಿಸ್ಮೃತಿ ಪುರಾಣ ಲೋಕಾಚಾರಗಳಿಗನುಸರಿಸಿ ನಡೆಯುವುದು ಯೋಗ್ಯವೋ ಅಯೋಗ್ಯವೋ?"

ಉ: (ಎಲ್ಲರೂ) "ಯೋಗ್ಯವೇ."

ಪ್ರ: "ಸಮುದ್ರ ಪ್ರಯಾಣ, ವಿಧವಾ ವಿವಾಹ ಇವುಗಳು ಶ್ರುತಿಸ್ಮೃತಿ ಪುರಾಣ ಲೋಕಾಚಾರಗಳಿಗೆ ವಿರೋಧವಾದ ವಿಷಯಗಳೆಂದು ನಾವು ಮಾತ್ರವಲ್ಲ ಜಗದ್ಗುರುಗಳೇ ನಿಶ್ಚಯಿಸಿದ್ದಾರೆ. ಇವುಗಳಿಗೆ ಪ್ರಾಯಶ್ಚಿತ್ತವೇ ಇಲ್ಲ. ಇದಕ್ಕೇನು ಹೇಳುತ್ತೀರಿ?"

ಉ: (ಎಲ್ಲರೂ) "ಹಾಗಾದ ಮೇಲೆ ನಾವು ಪ್ರತಿಕೂಲವಾಗಿ ಹೇಳತಕ್ಕದ್ದೇನೂ ಇಲ್ಲ."

ಭೀಮರಾಯನು ಗುಮಾಸ್ತನ ಕಿವಿಯಲ್ಲೇ: "ಅಹ! ನಮ್ಮ ಗುರುಗಳೆಂದರೆ ಸಾಕ್ಷಾತ್ ಪರಮಾತ್ಮಸ್ವರೂಪವಲ್ಲವೇ? ಈಗ ನೋಡಿರಿ, ಕ್ಷಣ ಮಾತ್ರದಲ್ಲಿ ಕುಲಕಂಟಕರನ್ನೆಲ್ಲ ಧ್ವಂಸಮಾಡುವ ಬಗೆ!"

ಪ್ರ: "ಆದುದರಿಂದ ಭೀಮರಾಯನ ಬಿನ್ನಹ ಪತ್ರದಲ್ಲಿ ತೋರುವ ಪ್ರಕರಣಗಳ ನಿರ್ಣಯವನ್ನು ಕುರಿತು ನಿರೂಪವಾಗುವುದರಲ್ಲಿ ನಿಮಗೆಲ್ಲರಿಗೂ ಏಕಾಭಿಪ್ರಾಯವಷ್ಟೆ?"

ಉ: (ಎಲ್ಲರೂ) "ಏಕಾಭಿಪ್ರಾಯ ತಾನೇ."

ಈ ಉತ್ತರಗಳನ್ನೆಲ್ಲ ಶ್ರೀಪಾದಂಗಳವರು ಓದಿನೋಡಿ, ಕಲಮ್‌ದಾನಿಯಲ್ಲಿಟ್ಟು, ಪಾರುಪತ್ಯಗಾರನನ್ನು ಕರೆದು, ಕಮಲಪುರದ ಧರ್ಮವಿಚಾರಕನಿಂದ ಈ ವಿಲಾಯತಿಗೆ ಹೋಗಿ ಬಂದ ಹುಡುಗ, ಪುನರ್ವಿವಾಹದ ವಧೂವರರು, ಪುರೋಹಿತರು, ಧಾರೆಯರೆದವರು, ಹುಡುಗನ ತಾಯಿ, ಇವರ ಹೆಸರುಗಳನ್ನೂ, ಹಾಗೆ ಸಂಪರ್ಕವಾದವರ ಸಂಸರ್ಗವಾದರ ಹೆಸರುಗಳನ್ನೂ ಕಾಣಿಸಿ, ಪ್ರತ್ಯೇಕ ಪ್ರತ್ಯೇಕ ಪಟ್ಟಿಗಳನ್ನು ಈಗಲೇ ಬರೆಯಿಸಬೇಕೆಂದು ಅಪ್ಪಣೆ ಕೊಡಲು, ಭೀಮರಾಯನು ಮೊದಲೇ ಬರೆದು ತಂದು ಪಟ್ಟಿಗಳನ್ನು ತೆಗೆದುಕೊಟ್ಟನು. ಅವುಗಳನ್ನೂ ಮುನ್ನೂರ ಅರವತ್ತೈದು ಹೆಸರುಗಳಿದ್ದವು. ಅವುಗಳನ್ನೆಲ್ಲ ಓದಿ ತಿಳುಹಿಸಲಾಗಿ, ಭಾಸ್ಕರರಾಯ, ಅಮೃತರಾಯ, ಸುಶೀಲೆ, ಜಲಜಾಕ್ಷಿ, ಇಂದಿರಾಬಾಯಿ, ಇವರಿಗೆ ಪೂರ್ಣ ಬಹಿಷ್ಕಾರವೆಂತಲೂ, ಪುರೋಹಿತರೆ ಮೊದಲಾದ ಸಂಪರ್ಕವಾದವರಿಗೆ ಮಹಾಪ್ರಾಯಶ್ಚಿತ್ತ ವಾಗುವವರೆಗೆ ಬಹಿಷ್ಕಾರವೆಂತಲೂ ನಿರೂಪಗಳನ್ನು ಬರೆಯಬೇಕಂದಪ್ಪಣೆಯಾಯಿತು. ಪಾರುಪತ್ಯಗಾರನು ಐದಾರು ಜನರಿಂದ ಕೂಡಲೇ ನಿರೂಪಗಳನ್ನು ಬರೆಯಿಸಿ ಶ್ರೀ ಗುರುಗಳಿಂದ ಸಹಿಮುದ್ರೆ ಮಾಡಿಸಿ, ಭೀಮರಾಯನ ಕೈಯಲ್ಲಿ ಕೊಡಲು, ಅವನು ಅವುಗಳನ್ನು ಪ್ರಥಮತಃ ಶಿರಸ್ಸಿನಲ್ಲಿಟ್ಟುಕೊಂಡು ಆಮೇಲೆ ಕಣ್ಣುಗಳಿಗೂ ಎದೆಗುಂಡಿಗೂ ತಾಗಿಸಿ ನೆಲದಲ್ಲಿಟ್ಟು ಅವುಗಳಿಗೆ ಸಾಷ್ಟಾಂಗವಾಗಿ ನಮಸ್ಕರಿಸಿ, ಪುನಃ ತೆಗೆದು ಅಂಗಿಯ ಜೇಬಿನಲ್ಲಿ ಹಾಕಿಕೊಂಡು ಶ್ರೀ ಪಾದಂಗಳವರಿಗೆ ಸಾಷ್ಟಾಂಗವೆರಗಿ ಎದ್ದು ಕುಳಿತನು. ಸಭೆ ಮುಗಿಯಿತು. ಮರುದಿವಸ ಭೀಮರಾಯನೇ ಮುಂತಾಗಿ ಕಮಲಪುರದಿಂದ ಹೋದ ಪ್ರತಿನಿಧಿಗಳು ಹೊರಟು ತಕ್ಕಸಮಯದಲ್ಲಿ ಊರಿಗೆ ಬಂದು ಸೇರಿದರು. ಭೀಮರಾಯನು ಬಂದವನೇ ಅಂಬಾಬಾಯಿಯನ್ನು ಕರೆದು ಹುಸ್ಸೆಂದು ದೀರ್ಘವಾದ ಒಂದು ಶ್ವಾಸವನ್ನು ಬಿಟ್ಟು ಧ್ವಂಸಮಾಡಿ ಬಂದೆನೆಂದು ವಿವರಗಳನ್ನೆಲ್ಲ ಹೇಳಿದನು. ಆಕೆಯೂ ಸಂತೋಷದಿಂದ "ಸೈ! ಇದೀಗ ಪುರುಷಲಕ್ಷಣ" ಎಂದು ಕೊಂಡಾಡಿದಳು. ಅದೇ ದಿವಸ ಭೀಮರಾಯನು ಆ ನಿರೂಪಗಳನ್ನು ಊರಲ್ಲಿ ಕ್ರಮವಾಗಿ ಪ್ರಸಿದ್ಧಿಗೊಳಿಸಿದನು.

ಈ ಧರ್ಮಕಾರ್ಯಾಲೋಚನೆಯ ಸಭೆಯ ಫಲ ಪರ್ಯಾವಸಾನವು ಹೇಗಾಯಿತೆಂದರೆ:–

ವಿಧವಾ ವಿವಾಹವೋ, ವಿಲಾಯತಿಗೆ ಹೋಗಿ ಬರುವುದೋ, ಹಾಗೆ ಹೋಗಿ ಬಂದವರಿಗೆ ಸಂಪರ್ಕ ಸಂಸರ್ಗವಾಗುವುದೋ, ಇವೆಲ್ಲ ವಿದ್ಯಮಾನಗಳು ಕಮಲಪುರ ದಲ್ಲಿಯೂ ಬೇರೆ ಕಡೆಗಳಲ್ಲಿಯೂ ಅನೇಕ ವರ್ಷಗಳಿಂದಲೇ ನಡೆಯುತ್ತಿದ್ದವು. ಅವುಗಳ ಕುರಿತು ಯಾವ ಗುರುಮಠದವರೂ ಆಕ್ಷೇಪಿಸಿರಲಿಲ್ಲ. ಈಗ ನಡೆದ ವ್ಯವಹಾರದಿಂದ ಮುಂದೆ ಆ ವಿದ್ಯಮಾನಗಳು ನಡೆಯಲಿಕ್ಕೆ ಆತಂಕವಾಯಿತೆಂದು ಯಾರೊಬ್ಬನು ಎಣಿಸಿದ್ದೂ

ಇಲ್ಲ. ಕಮಲಪುರದ ಯೌವನಸ್ಥರೆಂದರೆ, ಇಂಗ್ಲಿಷ್ ಕಲಿತು, ಒಂದೆರಡು ಪರೀಕ್ಷೆಗಳಲ್ಲಿ ಜಯಿಸಿದ ನಂತರ ರೂಪು, ಉಡಿಗೆ, ನಡತೆಗಳನ್ನು ಭಿನ್ನಪಡಿಸಿ, ಗುರುಮಠ, ದೇವಾಲಯವೆಂದರೆ ಕುಚೋದ್ಯ ಮಾಡುತ್ತಾ, ಒಂದು ವರ್ಷ ಆರ್ಯರೂ, ಇನ್ನೊಂದು ವರ್ಷ ಬ್ರಹ್ಮೋಗಳು, ಮತ್ತೊಂದು ವರ್ಷ ಥಿಯೋಸೊಫಿಸ್ಟರು ಎಂದು, ಹೀಗೆಲ್ಲಾ ಒಂದೊಂದು ಸಮಯದಲ್ಲಿ ಒಂದೊಂದು ಬಗೆಯ ವಿಕಾರಗಳನ್ನು ಮಾಡುತ್ತಾ, ಪ್ರಯೋಜನಕರವಾದ ಕೃತ್ಯವ್ಯಾವುದನ್ನಾದರೂ ತಾವು ಮಾಡದಿದ್ದರೂ, ಅನ್ಯರ ಕೃತ್ಯಗಳ ವಿವೇಚನೆ, ಖಂಡನೆ ಮಾಡುತ್ತಾ ದೇವಾಲಯ ಗುರುಮಠಕ್ಕೆ ಕೊಡಬೇಕಾದ ವಂತಿಗೆ ವರಾಡಗಳನ್ನು ಕೊಡದೆ ತಪ್ಪಿಸಬೇಕೆಂಬ ಮುಖ್ಯ ಉದ್ದೇಶವನ್ನು ನಿಶ್ಚಾಪಲ್ಯದಿಂದಲೂ ದೃಢ ಬುದ್ಧಿಯಿಂದಲೂ ಪೂರೈಸಿಕೊಳ್ಳುತ್ತಾ ಇದ್ದರು. ಆದರೂ ಗದ್ದಲವಿಲ್ಲದೆ ದಿವಸಗಳು ಹೋಗುತ್ತಿದ್ದವು. ಈಗ ಈ ಬಹಿಷ್ಕಾರದ ನಿರೂಪಗಳು ಬಂದ ನಂತರ ಸಂಪರ್ಕ ಸಂಸರ್ಗಗಳು ದಿನೇ ದಿನೇ ಹೆಚ್ಚುತ್ತಾ ಬಂದು, ಕಮಲಪುರದಲ್ಲಿ ತಾನೇಯಲ್ಲ, ಯಾವುದೊಂದು ಕಾರ್ಯದಲ್ಲಿಯೂ ಕೂಡದ ತಮ್ಮಷ್ಟಕ್ಕಿದ್ದ ಬೇರೆ ಊರುಗಳ ನಿವಾಸಿಕರಲ್ಲಿಯೂ ಸಂಪರ್ಕ ಸಂಸರ್ಗವಾಯಿತೆಂತಲೂ, ಅವರಿಗೂ ಪ್ರಾಯಶ್ಚಿತ್ತವಾಗಬೇಕಂತಲೂ, ಹೀಗೆಲ್ಲಾ ಉಪದ್ರವಗಳು ಹಬ್ಬಿ, ಸುಮ್ಮನೆ ಇದ್ದವರಿಂದಲೂ ಕುಚೋದ್ಯ ಮಾಡಿಸಿಕೊಳ್ಳಲಿಕ್ಕೆ ಕಾರಣವಾಯಿತು. ಬೊಜ್ಜಿಗನು ಮನೆಯಿಂದ ಹೊರಟು, ಬೀದಿಗಿಳಿದ ಕೂಡಲೇ ಶೂದ್ರ ಪೋರರೆಲ್ಲರೂ ಕೂಡಿ, "ಓ ಬೊಜ್ಜಿಗಾ! ಓ ಬೊಜ್ಜಿಗಾ!" ಎಂದು ಅವನನ್ನು ಕುಚೋದ್ಯ ಮಾಡುವುದೂ, ಅವನು ಅವರನ್ನು ಲೆಕ್ಕವಿಲ್ಲದೆ ಬೈಯುವುದೂ ಸಹಜವೇ ಇತ್ತು; ಹಾಗೆಯೇ ಕೆಲವು ಕಾಲಪರ್ಯಾನಂತರ ನಡೆದು ಆಮೇಲೆ ಪೋರರೆಲ್ಲರಿಗೆ ಬೇಸರು ಬಂದು, ಆತನನ್ನು ಬೀದಿಯಲ್ಲಿ ಕಂಡರೂ ಸುದ್ದಿಗೆ ಹೋಗದೆ ಸುಮ್ಮಗಿದ್ದರು. ಆದರೆ ಇದರಿಂದವನಿಗೆ ತೃಪ್ತಿಯಾಗಲಿಲ್ಲವೇನೊ, ಒಂದು ದಿವಸ ಬೀದಿಗಿಳಿದು ಬಂದಾಗ ಪೋರರು ಸುಮ್ಮಗಿರುವುದನ್ನು ಕಂಡು, "ಆಹಾ! ಈ ಹೊತ್ತೇನು ನನ್ನ ಮಕ್ಕಳು ಯಾರೂ ಕಾಣುವುದಿಲ್ಲ! ಏ! ನನ್ನ ಮಕ್ಕಳೇ, ಬನ್ನಿರಿ! ನಿಮ್ಮ ತಾಯಂದಿರನ್ನು–" ಎಂದು ಸುಮ್ಮನೆ ಇದ್ದ ಪೋರರನ್ನು ಕೆಣಕಲು, ಅನಂತರದ ವಿನೋದವಕ್ಕಣಿಸುವುದೇನು? "ಓ ಬೊಜ್ಜಿಗಾ! ಓ ಬೊಜ್ಜಿಗಾ! ಓ ಗುಜ್ಜೆಕಳ್ಳಾ! ಓ ಕೋರಿಕಳ್ಳಾ! ಓ ಪಂಜಿಕಳ್ಳಾ!" ಎಂದು ಹೀಗೆಲ್ಲ ಸಾಂಗವಾಗಿ ಸಹಸ್ರನಾಮಾರ್ಚನೆ ಮಾಡಿ, ಅದೂ ಸಾಲದೆ, ಕೂ! ಕೂ! ಕೂ! ಎಂದು ಕೂಗಿ, ಮಣ್ಣು ಸಗಣಿ ಮುಂತಾದ್ದನ್ನೆಸೆದು ನಾನಾ ಪ್ರಕಾರದಲ್ಲಿ ದ್ರೋಹಿಸಿದರು. ಈ ಧರ್ಮ ಕಾರ್ಯಾಲೋಚನೆಯ ಸಭೆಯ ಫಲ ಪರ್ಯಾವಸಾನವು ಪ್ರಾಯಶಃ ಹೀಗೆಯೇ ಆಯಿತೆಂದೀ ಅಧ್ಯಾಯದಿಂದ ಮಾತ್ರವಲ್ಲ, ಮುಂದಿನ ಅಧ್ಯಾಯದಿಂದಲೂ ತಿಳಿಯಬಹುದು.

# ೬೧

ಭೀಮರಾಯನ ಬಿನ್ನಹಪತ್ರದ ದೆಸೆಯಿಂದ ಅವನಿಗೆ ಕಮಲಪುರದಲ್ಲಿಯೂ ಬೇರೆ ಊರುಗಳಲ್ಲಿಯೂ ದ್ವೇಷಿಕರ ಸಂಖ್ಯೆ ಹೆಚ್ಚಾದ್ದು ಮಾತ್ರವೇ ಅಲ್ಲದೆ ಬೇರೆ ಯಾವ ಪ್ರಯೋಜನವೂ ದೊರಕಲಿಲ್ಲ. ವಿಲಾಯತಿಗೆ ಹೋಗಿ ಬಂದವರ ನಡತೆಯಲ್ಲಿಯೂ ಇಂದಿರಾಬಾಯಿಯ ಪುನರ್ವಿವಾಹ ಕಾರ್ಯದಲ್ಲಿ ಸಂಪರ್ಕವಾದವರ ನಡತೆಯಲ್ಲಿಯೂ ಯಾವ ವಿದ್ಯಮಾನವೂ ಕಡಿಮೆಯಾದ್ದೂ ಹೆಚ್ಚಿದ್ದೂ ಇಲ್ಲ. ಬಹಿಷ್ಕಾರ ನಿರೂಪಗಳಾದ ಮೇಲೆ ಇಬ್ಬರು ವಿಲಾಯತಿಗೆ ಹೋದರು. ಮೂವರು ಅಲ್ಲಿಂದ ತಿರಿಗಿ ಬಂದರು. ಹಾಗೆ ಬಂದವರಿಗೂ ಬೇರೆಯವರಿಗೂ ಸಂಪರ್ಕ ಸಂಸರ್ಗಗಳೂ ಧಾರಾಳವಾಗಿ ನಡೆದವು. ಸಂಪರ್ಕ ಸಂಸರ್ಗವಾದವರು ತಮ್ಮಲ್ಲೇನಾದರೂ ಶುಭಕಾರ್ಯವಾಗಲಿಕ್ಕಿದ್ದಾಗ ಮಾತ್ರ ಪ್ರಾಯಶ್ಚಿತ್ತ ಪಡೆದುಕೊಂಡು ಮನೆಗೆ ಬಂದು, ಕಾರ್ಯ ತೀರಿದ ಬಳಿಕ ಪೂರ್ವ ಪ್ರಕಾರವೇ ನಡಕೊಳ್ಳುವುದು ಮಾತ್ರವಲ್ಲ, ಪ್ರಾಯಶ್ಚಿತ್ತ ಪಡೆದವರು ಪಡೆಯದವರಲ್ಲಿಯೂ, ಪಡೆಯದವರು ಪಡೆದವರಲ್ಲಿಯೂ, ಮದ್ರಾಸ, ಬೊಂಬಾಯಿ, ಕಲ್ಕತ್ತಾ, ಅಲ್ಲಹಾಬಾದ್ ಮುಂತಾದ ಊರುಗಳಿಗೆ ಹೋಗುತ್ತಾ ಬರುತ್ತಾ, ಮಧ್ಯದೇಶಗಳಲ್ಲಿರುವವರಲ್ಲಿಯೂ ಹೋಗಿ ಸಂಪರ್ಕವಾಗಿ ನಡೆಯುವುದು, ಏವಂಚ ಎಲ್ಲಾ ಕಡೆಯಲ್ಲಿಯೂ ಹೇಳಕೂಡದ ಹೊಲಸಾಯಿತು– ಅತಿ ವ್ಯಸನಕರವಾದ ಮತ್ತೊಂದು ಸಂಗತಿ ಏನೆಂದರೆ, ಒಬ್ಬ ಬಿ.ಎ.ಯು ಮತ್ತೊಬ್ಬ ಬಿ.ಎ.ಯನ್ನು ಕಂಡಕೂಡಲೆ,

"Well (ಒಳ್ಳೇದು) ನಿನಗೆ ಜಾತಿ ಬೇಕೇ?"

"ಬೇಕು, price (ಬೆಲೆ) ಏನು?"

"ಅದೇನು a trifle! dead cheap!"(ಅಲ್ಪ ವಿಷಯ, ಬರೇ ಅಗ್ಗ)

"ನೀನೆಷ್ಟಕ್ಕೆ ಕೊಂಡುಕೊಂಡೆ?"

"ನಾನು ಮೂರು ರೂಪಾಯಿ ಕೊಟ್ಟೆ. ಆದರೆ ಈಗ ಸ್ವಲ್ಪ ಕ್ರಯ ತಗ್ಗಿದೆ."

"ಈಗೇನು ಕ್ರಯವಿದೆ?"

"ಈಗೆರಡೇ ರೂಪಾಯಿ."

"ಅದೇನು fluctuation?" (ಏರು ತಗ್ಗು)

"ಮತ್ತೇನು? market (ಧಾರಣೆ) ಒಂದೇ ತರದಲ್ಲಿರುತ್ತದೆಯೇ? ಹೆಚ್ಚಿದರೆ ಒಂದೊಂದು ಸಾರಿ ಇಪ್ಪತ್ತೈದರವರೆಗೆ ಮುಟ್ಟುತ್ತದೆ."

"ಹಾಗಿದೆಯೆ? ಆದರೆ ನನಗೆ ಈಗಲೇ ಪ್ರಾಯಶ್ಚಿತ್ತ ಬೇಡ. ನಮ್ಮ ಸುಂದರನಿಗೆ ಬರುವ ವರ್ಷದಲ್ಲಿ ಉಪನಯನವಿದೆ, ಆಗ ಸಿಕ್ಕಿದರೆ ಸಾಕು. ಆಗ ಒಂದು ವೇಳೆ ಬೆಲೆ ಇನ್ನಷ್ಟು ತಗ್ಗುವುದೇನೊ."

"There you are mistaken, my friend (ಅದು ನಿನ್ನ ತಪ್ಪಾಲೋಚನೆ, ಗೆಳೆಯಾ),

ನಿನ್ನಲ್ಲಿ ಉಪನಯನ ಉಂಟೆಂದು ಗೊತ್ತಾದರೆ, ಬೆಲೆ ಐವತ್ತಕ್ಕೆ ಮುಟ್ಟುವುದು. ಜೋಕೆ, ನೋಡು!"

"ಹಾಗಾದರೆ, ನಾನು ನಾಳೆಯೇ ಹೋಗಿ ಪ್ರಾಯಶ್ಚಿತ್ತ ಪಡೆಯುತ್ತೇನೆ. ಎರಡು ರೂಪಾಯಿಯ ಮಾತಷ್ಟೆ? ಬೇರೇನೂ ತಾಕುಬಡಿ ಇಲ್ಲವಷ್ಟೆ?"

"ಒಂದು ತೆಂಗಿನಕಾಯಿ, ಏಳು ಬಾಳೆಹಣ್ಣು, ಎರಡು ಜನಿವಾರ ಸಹ ಹತ್ತಿರವಿರಲಿ, ಅಲ್ಲಿಗಾಯಿತು. ಮತ್ತೇನು? ಕರಕರೇ ದೇವರಿಗೆ ಮರದ ಜಾಗಟೆ!"

"ನಾನು ಮಠಕ್ಕೆ ಹೋಗಿ ಮಾಡತಕ್ಕದ್ದೇನು?"

"ಅದೇನೂ ಹೆಚ್ಚಿನ ರಗಳೆ ಇಲ್ಲ. ಗುರುಗಳನ್ನು ಕಂಡಲ್ಲೇ ಕೌಂಚಿ ಮಲಗಿಬಿಡು. 'ನಾರಾಯಣ'ವೆನ್ನುವರು. ಎದ್ದು ಕುಳ್ಳಿರು. ಪ್ರಾಯಶ್ಚಿತ್ತ ಪಡೆಯುವುದಕ್ಕೆ ಬಂದಿದ್ದೇನೆಂದು ಒಂದಷ್ಟು ತಾಚೋಟು ಹಚ್ಚಿ ರೂಪಾಯಿಗಳನ್ನು ಎದುರಿನಲ್ಲಿಟ್ಟುಬಿಡು, 'ಸ್ನಾನ ಮಾಡಿದ್ದೀಯಾ?' ಎಂದು ಕೇಳುವರು, ಹೌದೆನ್ನು. ಒಂದು ಸೌಟಿನಿಂದ ಕೊಂಚ ಪಂಚಗವ್ಯ ಕೈಯಲ್ಲಿ ಹಾಕುವರು. ಕುಡಿದುಬಿಡು. ಒಬ್ಬ ಭಟ್ಟನನ್ನು ಕರೆದು ಅವನಿಂದ ನಿನಗೆ ಜನಿವಾರಗಳನ್ನು ಹಾಕಿಸುವರು. ಕೂಡಲೇ ಪುನಃ ಕೌಂಚಿ ಮಲಗು. 'ನಾರಾಯಣ' ಎಂದ ಕೂಡಲೆ ಎದ್ದು ಬಂದಬಿಡು. There ends the farce" (ಆಟ ಅಲ್ಲಿಗೆ ತೀರುತ್ತೆ).

"ಹಾಗೆಯೇ ಮಾಡುತ್ತೇನೆ. ಅದಾಯಿತಷ್ಟೆ. ವಿಧವೆಯರಿಗೆ ವಿವಾಹವಾಗಬಾರದೆಂದು ಮಠಾಧಿಪತಿಗಳೆಲ್ಲರೂ ಹಟಹಿಡಿಯುವುದರ secret (ಮರ್ಮ) ಏನು?"

"ವಿಧವೆಯರಿಗೆ ವಿವಾಹವಾದರೆ, ಮಠಗಳಿಗೂ ಬೇರೆಯವರಿಗೂ ಬ್ರಹ್ಮಾಂಡ ನಷ್ಟವಿದೆ."

"ಅದು ಹೇಗೆ?"

"ಹೇಗೆಂದರೆ, ವಿಧವೆಯರು ಪ್ರತಿದಿವಸವೂ ಮಠಗಳಲ್ಲಿ ಶುದ್ಧಪಡಿಸಿ, ರಂಗೋಲೆ ಬರೆಯುವುದು, ತುಲಸೀ ಪುಷ್ಪಗಳನ್ನು ತಂದುಕೊಡುವುದು, ಆರತಿಗಳಿಗೆ ಬತ್ತಿ ಹಾಕುವುದು, ಭಿಕ್ಷೆಯೂಟಗಳ ಅಡಿಗೆಯ ಕೆಲಸಕ್ಕೆ ಸಹಾಯ ಮಾಡುವುದು, ಬೇರೆ ಅನೇಕ ಪರಿಚಾರಕಿಯ ಕೆಲಸಗಳನ್ನು ಮಾಡುವುದಲ್ಲದೆ, ದೊಡ್ಡ ದೊಡ್ಡ ಪೂಜೆ ಭಿಕ್ಷೆಗಳನ್ನು ಮಾಡಿಸುವುದು, ಒಂದೊಂದು ಸಮಯದಲ್ಲಿ ಅವರ ಹತ್ತಿರವಿದ್ದ ಹಣವನ್ನು ಮಠಗಳಿಗೆ ದತ್ತ ಮಾಡಿಕೊಡುವುದು. ಇದಲ್ಲದೆ ಅನೇಕ ವಿಧವೆಯರು ರಾಧಾಕೃಷ್ಣ ಮಂದಿರಗಳಲ್ಲಿಯೂ ಬೇರೆ ದೇವಾಲಯಗಳಲ್ಲಿಯೂ ದೇವರ ಸೇವೆ, ಸಂತರ ಸೇವೆ ಮಾಡುವುದು, ವಂತಿಗೆ ವರಾಡಗಳನ್ನು ಕೊಡುವುದು, ಇವೇ ಮುಂತಾದ ಅನೇಕ ಕಾರ್ಯಗಳನ್ನು ಮಾಡುತ್ತಾರೆ. ಅವರಿಗೆ ಪುನರ್ವಿವಾಹವಾದರೆ ಇದೆಲ್ಲ ಎಲ್ಲಿ?"

"ಹಾಗೋ?" ಎಂದು ಹೀಗೆಲ್ಲ ಅವಾಚ್ಯ ಸಂಭಾಷಣೆ, ಕುಚೋದ್ಯ, ದುಷ್ಟತನ, ಪಾಷಂಡತನ ಮುಂತಾದ್ದು ಹೆಚ್ಚುತ್ತಾ ಬಂದು, ಕಮಲಪುರದಲ್ಲಿ ಐದಾರು ಮನೆಯವರು ಹೊರುತು ಬೇರೆ ಎಲ್ಲರೂ ಏಕಮತವಾಗಿ ಅವರ ಉಪಟಳವು ತಿಳುಹಲು ಅಸಾಧ್ಯವೆಂದು

ಕಾಣಿಸಿತು. ಭೀಮರಾಯನು ಈ ವಿದ್ಯಮಾನಗಳನ್ನೆಲ್ಲ ಶ್ರೀ ಗುರುಮಠಕ್ಕೆ ತಿಳಿಸಲು ಗುರುಗಳವರು ಮನಸ್ಸಿನಲ್ಲಿ ಬೇಸರಪಟ್ಟು ಮುಂದೆ ಶಿಷ್ಯವರ್ಗದ ಪರಿಣಾಮ ಹೇಗಾದೀತೆಂದು ತಿಳಿಯದೆ ಒಂದು ದಿವಸ ಪಾರುಪತ್ಯಗಾರನನ್ನು ಕರೆದು, "ಏನಯ್ಯಾ? ಈಗಿನ ವಿದ್ಯಮಾನಗಳನ್ನೆಲ್ಲ ನೀನು ತಿಳಿದಿರುತ್ತೀಯಷ್ಟೆ? ಮಠದ ಮುಂದಿನ ಸ್ಥಿತಿಗತಿಗಳ ಕುರಿತು ನಿನ್ನಾಲೋಚನೆ ಏನು?" ಎಂದು ಕೇಳಲು, ಅವನು "ಸ್ವಾಮಿ, ಶ್ರೀ ಪಾದಂಗಳವರ ದಯದಿಂದ ಯಾವುದೊಂದು ವಿಷಯದಲ್ಲಿಯೂ ಯೋಚಿಸುವುದಕ್ಕೆ ಕಾರಣವಿಲ್ಲ. ದಿವಸಕ್ಕೆ ನೂರರ ಪೇಟೆಯ ಪ್ರಕಾರ ಒಂದು ವರುಷದಲ್ಲಿ ಬೇಕಾಗುವಷ್ಟು ಹೋಳಿಗೆಗಳನ್ನು ಮಾಡಲಿಕ್ಕವಶ್ಯವಿರುವಷ್ಟು ಗೋದಿ, ಕಡ್ಲೆ ಬೆಲ್ಲ ಸಹ ಸಾಟೆಮಾಡಿ ಅರ್ಧಾಂಶ ಹಣ ಮುಂಡವಾಗಿ ಕೊಟ್ಟಿದ್ದೇನೆ. ತುಪ್ಪಕ್ಕೂ ಬೇರೆಯೆಲ್ಲಾ ಸಾಹಿತ್ಯಗಳಿಗೂ ಅದೇ ಪ್ರಕಾರದ ಏರ್ಪಾಡುಗಳನ್ನು ಮಾಡಿ ಲೈಸ್ ಮಾಡಿದ್ದೇನೆ. ಜೇರಿಗೆಸಾಲೆ ಅಕ್ಕಿಯಂತೂ ಮಠದ ಭೂಮಿಯಿಂದಲೇ ಬರಲಿಕ್ಕಿದೆ, ಅದು ಧಾರಾಳವಾಗಿ ಸಾಕು. ಅಡುಗಬ್ಬಂತು ಮಠದ ಹಾಡಿಯಲ್ಲೇ ಇದೆ. ಬೇಕಾದಂತೆ ತರಿಸಬಹುದು. ಮಠದ ದನಗಳಲ್ಲಿ ಚಂದ್ರಭಾಗಿ, ಗೋದಾವರಿ, ಸೋಮವತಿ, ಸರಸ್ವತಿ, ವೇದವತಿ ಈ ಐದು ದನಗಳಿಗೆ ತುಂಬಾ ಗಬ್ಬವಿದೆ. ಹಾಲು ಮೊಸರಿಗೇನಾದರೂ ಹೆಚ್ಚು ಕಡಿಮೆ ಬರುವುದೆಂಬ ಭಯವಿಲ್ಲ. ಏವಂಚ ಯೋಚಿಸಬೇಕಾದ್ದೆಂಬ ಹಾಗಿನ ವಿಷಯವೇನೂ ನನಗೆ ಕಾಣುವುದಿಲ್ಲ. ಶ್ರೀಪಾದಂಗಳ ವರೇನಾದರೂ ಕಂಡಿರುವುದಾದರೆ ಅಪ್ಪಣೆಯಾದಲ್ಲಿ ಬೇಕಾದ ನಿವೃತ್ತಿಯ ಮಾರ್ಗ ನೋಡುತ್ತೇನೆ" ಎಂದುತ್ತರಕೊಡಲು ಶ್ರೀ ಗುರುಗಳು ಖೋ! ಖೋ! ನಗುತ್ತಾ "ಏನಯ್ಯಾ! ಆ ವಿಷಯಗಳನ್ನು ಮಾತ್ರವೇ ನೋಡಿಕೊಂಡರೆ ಸಾಕೇ? ಕಮಲಪುರದ ಶಿಷ್ಯವರ್ಗದವರ ಸ್ಥಿತಿ ಏನೆಂದು ಕೇಳಿದ್ದಿಯಾ? ಅನೇಕ ವಿಧದಿಂದಾಲೋಚಿಸಿ ನೋಡಿದರೂ ಅಲ್ಲಿಂದ ಬರುವ ಬಿನ್ನಹಪತ್ರಗಳಿಗೆ ಸಂಖ್ಯೆಯನ್ನು ತಗ್ಗಿಸದಿದ್ದರೆ ಮುಂದಿನ್ನು ಅನೇಕ ಕೇಡುಗಳುಂಟಾದಾವೆಂದು ತೋರುತ್ತೆ. ಇನ್ನುಮುಂದೆ ಅಲ್ಲಿಂದ ಬರುವ ಪ್ರತಿ ಒಂದು ಬಿನ್ನಹಪತ್ರದ ಸಂಗಡ ಹತ್ತು ರೂಪಾಯಿ ಫೀಸು ಮುಂಗಡವಾಗಿ ಬಾರದಿದ್ದರೆ ಆ ಬಿನ್ನಹಪತ್ರದ ವಿಷಯದಲ್ಲಿ ಯಾವುದೊಂದು ವ್ಯವಹರಣೆಯೂ ನಡೆಸೋಣಾಗದೆ ಹರಿದುಹಾಕೋಣಾದೀತೆಂದೂ ಫೀಸು ಬಂದರೂ ಬಿನ್ನಹಪತ್ರ ಬರೆದುಕೊಂಡವನು ಸ್ವತಹ ಬಂದು ಅದನ್ನು ಪ್ರಮಾಣಿತಪಡಿಸಬೇಕೆಂದೂ ಈಗಲೇ ಒಂದು ನಿರೂಪವನ್ನು ಬರೆದು ಕಳುಹಿಸು" ಎಂದಪ್ಪಣೆಕೊಡಲು ಪಾರುಪತ್ಯಗಾರನು "ತಥಾಸ್ತು" ಎಂದು ಹೇಳಿ ತತ್‌ಕ್ಷಣವೇ ನಿರೂಪ ಬರೆದು ಸಹಿಮುದ್ರೆ ಮಾಡಿಸಿ ಕಳುಹಿಸಿ ಅಪ್ಪಣೆ ಪಡೆದು ಹೊರಗೆ ಹೋದನು.

ಆ ತರುವಾಯ ಶ್ರೀ ಗುರುಗಳು ಸಹ್ಯಾದ್ರಿ, ನಿರ್ಣಯಸಿಂಧು, ಮನುಸ್ಮೃತಿ, ಪರಾಶರಸ್ಮೃತಿ ಇವೇ ಮುಂತಾದ ಪುಸ್ತಕಗಳನ್ನು ತೆಗೆದು ಅವಶ್ಯವಿರುವ ಸಂಗತಿಗಳನ್ನೆಲ್ಲ ಓದಿನೋಡಿ ಮುಂದೆ ಶಿಷ್ಯವರ್ಗದಲ್ಲಿ ಏಕಬುದ್ಧಿ ಏಕಮತ ಉಂಟಾಗುವ ಹಾಗೆ ಏನೇನು ಚಟ್ಟದಿಟ್ಟಗಳನ್ನು ಮಾಡಬಹುದೆಂಬುದರ ಕುರಿತು ತನ್ನಲ್ಲಿ ತಾನೇ ಆಲೋಚಿಸಿದ್ದಲ್ಲದೆ,

ಶಾಸ್ತ್ರಪುರಾಣಗಳಲ್ಲಿ ಪರಿಶ್ರಮವಿದ್ದು, ಮಠದಲ್ಲೇ ಇದ್ದ ರಾಮಾಚಾರ್ಯ, ಗುರುರಾಜಾಚಾರ್ಯ, ಸುಬ್ಬಣ್ಣ ಶಾಸ್ತ್ರಿ ಇವರನ್ನು ಪ್ರತಿ ಪ್ರತ್ಯೇಕವಾಗಿ ಕರೆದು ಒಬ್ಬೊಬ್ಬನೊಡನೆಯೇ ಶಿಷ್ಯ ವರ್ಗದ ಈಗಿನ ಸ್ಥಿತಿಯನ್ನು ಕುರಿತು ಸವಿಸ್ತಾರವಾಗಿ ಮಾತನಾಡಿ ಮುಂದಣ ಕಾರ್ಯಗಳ ವಿಷಯದಲ್ಲಿ ಒಬ್ಬೊಬ್ಬನ ಅಭಿಪ್ರಾಯವೇನೆಂದು ತಿಳಿದುಕೊಂಡು ಪುನಃ ತನ್ನಲ್ಲಿ ತಾನೇ ಆಲೋಚಿಸಿ ನೋಡಿದ್ದಲ್ಲಿ, ಶಿಷ್ಯವರ್ಗದಲ್ಲಿ ಈಗ ನಡೆಯುವ ದುರಾಚಾರಗಳನ್ನು ನಿಲ್ಲಿಸದೆ ನಿರ್ವಾಹವಿಲ್ಲವೆಂದೂ, ಹಾಗೆಯೇ ನಿಲ್ಲಿಸುವುದರಲ್ಲಿ ಪೂರ್ಣ ಬಹಿಷ್ಕಾರ ಮುಂತಾದ ಕಠಿಣ ಸ್ವಭಾವದ ವ್ಯವಹರಣೆಯಿಂದ ಪ್ರಯೋಜನ ಸಿಕ್ಕದಿರುವುದೇಯಲ್ಲದೆ ಅಂಥ ವ್ಯವಹರಣೆ ಇನ್ನಷ್ಟು ಅಕ್ರಮಗಳಿಗೆ ಕಾರಣ ಕೊಡುತ್ತದೆಂದೂ ತಿಳಿದು, ಶ್ರೀಮಠಕ್ಕೂ ಶಿಷ್ಯವರ್ಗಕ್ಕೂ ಪರಸ್ಪರ ಸಮಾಧಾನವೂ ಅನ್ಯೋನ್ಯತೆಯೂ ಶಿಷ್ಯವರ್ಗದ ವೃದ್ಧಿಯೂ ಉಂಟಾಗುವ ಹಾಗಿನ ಸುಲಭವಾದ ಒಂದು ಮಾರ್ಗವನ್ನು ಹುಡುಕಿ ತೆಗೆಯುವುದು ಅತ್ಯವಶ್ಯವೆಂದು ಕಂಡುಕೊಂಡು ಈ ವಿಷಯವನ್ನಾಲೋಚಿಸಿ ತೀರ್ಮಾನಿಸುವುದಕ್ಕೋಸ್ಕರ ಪ್ರತಿಯೊಂದೂರಿನಿಂದ ಒಬ್ಬ ವೃದ್ಧ, ಒಬ್ಬ ಯೌವನಸ್ಥ, ಹೀಗೆ ಎರಡು ಮಂದಿ ಪ್ರತಿನಿಧಿಗಳನ್ನು ಕರೆಸಿ ಇನ್ನೊಂದು ಧರ್ಮಕಾರ್ಯಾಲೋಚನೆಯ ಸಭೆ ಕೂಡಿಸುವದೆಂದು ನಿಶ್ಚಯಿಸಿದರು. ಆ ಬಳಿಕ ಸಾಯಂಕಾಲದ ಸ್ನಾನಕ್ಕೆ ಹೋಗುವುದಕ್ಕೊಂದುಗಳಿಗೆ ಇರುವಾಗ ಶ್ರೀಮಠಕ್ಕೆ ಬರುತ್ತಿದ್ದ ಹಿತಬೋಧಿನಿ ಎಂಬ ಪತ್ರವು ಬಂದುಮುಟ್ಟಿತು. ಅದನ್ನು ತೆರೆದು ಓದುವುದಕ್ಕೆ ಸಮಯವಿಲ್ಲದ್ದರಿಂದ ಕಲಮ್‌ದಾನಿಯಲ್ಲಿಟ್ಟು ಸ್ನಾನಕ್ಕೆ ಚಿತ್ತೈಸಿದರು.

## ೬೨

ಮರುದಿವಸ ಅನುಷ್ಠಾನ ಭಿಕ್ಷೆ ತೀರಿದ ಬಳಿಕ ಮಧ್ಯಾಹ್ನದ ನಂತರ ಶ್ರೀ ಗುರುಗಳು ಹಿತಬೋಧಿನೀ ಪತ್ರವನ್ನು ತೆರೆದು ನೋಡುವಾಗ ಈಗಿನ ಮಠಾಧಿಪತಿಗಳೂ ಶಿಷ್ಯವರ್ಗಗಳೂ ಎಂಬ ಮೇಲ್ವಿಳಾಸವಿದ್ದ ಬಾಲಾಜಿರಾವು ಗಣೇಶರಾವು ಇವರಿಬ್ಬರೂ ಒಂದಾನೊಂದು ದಿವಸ ಬಾವಟೆಕಟ್ಟೆಯ ಬಳಿಯಲ್ಲಿ ಕಾರಣಾಂತರದಿಂದ ಒಟ್ಟುಕೂಡಿದಾಗ ಅವರೊಳಗೆ ನಡೆದ ಸಂಭಾಷಣೆ ಎಂದು ತೋರುವ ಒಂದು ಪ್ರಬಂಧವನ್ನು ಕಂಡು ಅದನ್ನು ಓದಿದರು. ಅದ್ಯಾವುದೆಂದರೆ–

ಬಾ: “ಓಹೋ! ನಮಸ್ಕಾರ ರಾಯರೇ!”

ಗ: “ನಮಸ್ಕಾರ! ನಮಸ್ಕಾರ! ಏನು ವಿಶೇಷ ವರ್ತಮಾನ?”

ಬಾ: “ವಿಶೇಷವೇನು! ಎಲ್ಲಿ ಹೋದರೂ ಒಂದೇ ವರ್ತಮಾನ. ಕಮಲಪುರದ ರಗಳೆ.”

ಗ: “ಅದೆಲ್ಲ ತೀರಲಿಲ್ಲವೇ? ಕೆಲವರಿಗೆಲ್ಲ ಬಹಿಷ್ಕಾರ ಮುಂತಾದ್ದಾಯಿತೆಂದು ಕೇಳಿದ್ದೇನೆ.”

ಬಾ: "ಸರಿಯೆ! ಆದರೆ ಅದರಿಂದ ರಗಳೆ ಹೆಚ್ಚಿದ್ದಲ್ಲದೆ ಕಡಿಮೆಯಾದ್ದಿಲ್ಲ."

ಗ: "ಅದೇನು?"

ಬಾ: "ರಾಯರೇ, ಈ ಬಹಿಷ್ಕಾರದಿಂದೆಲ್ಲ ಏನಾದರೂ ಪ್ರಯೋಜನವಿದೆಯೆಂದು ತಿಳಿದುಕೊಳ್ಳುತ್ತೀರಾ? ಅವುಗಳು ಒಂದು ವೇಳೆಗೆ ಪೂರ್ವಕಾಲದ ಮನುಷ್ಯರ ಸ್ಥಿತಿಗೂ ಕಾಲ ಸ್ಥಿತಿಗೂ ಸರಿಯಾಗಿದ್ದಿರಬಹುದೇನೊ? ನಡತೆಯ ಕ್ರಮಗಳು ಆಯಾ ಕಾಲಸ್ಥಿತಿಗೆ ತಕ್ಕವುಗಳಾದರೆ ರಗಳೆಗಳುಂಟಾಗುವುದಿಲ್ಲ. ಮಠಾಧಿಪತಿಗಳು ಯಾವುದಾದರೂ ಒಂದೆರಡು ವಿಷಯಗಳಲ್ಲಿ ಮಾತ್ರ ಪ್ರಾಚೀನ ನಡತೆಯ ಕ್ರಮಗಳೇ ಬೇಕೆಂದು ಹಠಮಾಡುವುದೂ ಬೇರೆ. ಅನೇಕ ವಿಷಯಗಳು ಹೇಗೂ ಆಗಲೆಂದು ಸಡಿಲುಬಿಡುವುದೂ ಹೀಗೆಲ್ಲಾ ಆದರೆ ಸಂಸ್ಥಾನಕ್ಕೂ ಶಿಷ್ಯವರ್ಗಕ್ಕೂ ಏಕಮತ ಎಲ್ಲಿನದು?"

ಗ: "ವಿಹಿತವೇ! ಆದರೆ ಮಠಾಧಿಪತಿಗಳು ಬೇಕೆಂದು ಹಾಗೆ ಮಾಡುವರೆಂದು ನಾನು ತಿಳಿದುಕೊಳ್ಳುವುದಿಲ್ಲ."

ಬಾ: "ಬೇಕೆಂದೋ ಬೇಡವೆಂದೋ ನಾನರಿಯೆ. ಅಂಥಾ ಸಂಗತಿಗಳು ಲೆಕ್ಕವಿಲ್ಲದ್ದಿವೆ."

ಗ: "ಒಂದೆರಡನ್ನು ಸ್ಪಷ್ಟಪಡಿಸಿ ಹೇಳಿದರೆ ಕೇಳಬೇಕೆಂದು ನನಗೆ ಮನಸ್ಸಿದೆ."

ಬಾ: "ಶಾಸ್ತ್ರದಲ್ಲಿ ಒಂದು ಕಾರ್ಯವನ್ನು ಮಾಡಬಾರದೆಂದು ನಿರ್ಬಂಧವಿದೆಯೆಂದು ಮಠಾಧಿಪತಿಗಳು ಹೇಳುವಾಗ, ಅದನ್ನು ಮಾಡಿದರೆ ಬಹಿಷ್ಕಾರ ಮುಂತಾದ ಶಿಕ್ಷೆಗಳನ್ನು ವಿಧಿಸುತ್ತಾರೆ. ಆದರೆ ಯಾವ ಕಾರ್ಯಮಾಡದೆ ನಿರ್ವಾಹವಿಲ್ಲವೆಂದು ಸ್ಪಷ್ಟವಾಗಿ ನಿಬಂಧನೆಯಿದೆಯೋ ಅದನ್ನು ಮಾಡದಿದ್ದರೆ ಅದಕ್ಕೆ ಶಿಕ್ಷೆಯೇ ಇಲ್ಲ. ಇದೇತರ ನೀತಿ? ಒಬ್ಬ ಬ್ರಾಹ್ಮಣ ಪುತ್ರನು ಉಪನಯನವಾದ ನಂತರ ವಿವಾಹವಾಗುವ ಪರ್ಯಂತರ ಯಾವ ಕರ್ಮಗಳನ್ನು ಮಾಡಬೇಕೆಂದು ನಿಬಂಧನೆಯಿದೆಯೋ, ಅವುಗಳನ್ನು ಈಗ ಯಾರು ಮಾಡುತ್ತಾರೆ? ಪ್ರಥಮತಃ ಈಗಿನ ಕಾಲದ ಉಪನಯನವೆಂಬುದೇನೆಂದು ನಾವೆಲ್ಲರೂ ಬಲ್ಲೆವಷ್ಟೆ! ಸಮಾವರ್ತನವೆಂಬುದಂತೂ ವಿನೋದಕರವಾದ ಮಕ್ಕಳಾಟಿಕೆಯಲ್ಲದೆ ಮತ್ತೇನು?"

ಗ: "ವಿಹಿತವೇ! ವಿಹಿತವೇ!"

ಬಾ: "ಒಬ್ಬ ವಿಧವೆಯು ಪತಿಯ ಮರಣಾ ನಂತರ ತನ್ನ ಮರಣದವರೆಗೆ ಏನು ಮಾಡಿಕೊಂಡಿರಬೇಕೆಂದು ಕ್ರಮಗಳಿವೆಯಷ್ಟೇ? ಆ ಪ್ರಕಾರ ಈಗ ಎಷ್ಟುಮಂದಿ ವಿಧವೆಯರು ನಡೆದುಕೊಳ್ಳುತ್ತಾರೆ?"

ಗ: "ನೂರರಲ್ಲಿ ಒಬ್ಬಾಕೆ, ಎಲ್ಲ್ಯಾದರೂ ಹಾಗೇ ನಡೆದುಕೊಳ್ಳುತ್ತಾಳೋ ಏನೋ."

ಬಾ: "ಅಷ್ಟು ತಾನೇ ಅಲ್ಲ, ರಾಯರೇ, ವೇದಶಾಸ್ತ್ರಗಳಲ್ಲಿಯೂ ಪುರಾಣಗಳಲ್ಲಿಯೂ ಮಾಡಬಹುದೆಂದು ಸ್ಪಷ್ಟವಾಗಿ ಹೇಳೋಣಾಗಿರುವ ಒಂದು ಕೃತ್ಯವನ್ನು ಮಾಡಿದರೆ ಅದಕ್ಕೂ ಶಿಕ್ಷಿಸುತ್ತಾರೆ."

ಗ: "ಅಯ್ಯೋ! ಇದೇನಪ್ಪಾ ಮುದೀ ಡೊಂಬನ ಲಾಗವಾಯಿತಷ್ಟೆ!"

ಬಾ: "ಹೇಳುತ್ತೇನೆ. ಕೇಳಿರಿ! ಋಗ್ವೇದದಲ್ಲಿಯೂ, ಗ್ರಹ್ಯಸೂತ್ರಗಳಲ್ಲಿಯೂ, ಶ್ರೀ

ಕೃಷ್ಣದ್ವೈಪಾಯನ ವ್ಯಾಸರು ರಚಿಸಿದ ಮಹಾಭಾರತದಲ್ಲಿಯೂ ಬೇರೆ ಇತಿಹಾಸ ಪುರಾಣಗಳಲ್ಲಿಯೂ ಬ್ರಾಹ್ಮಣರು ಮಾಂಸಾಹಾರ ಸುರಾಪಾನ ಮಾಡಬಹುದೆಂದೂ, ಇಂತಿಂತಹರೇ ಮಾಡಿದ್ದಾರೆಂದೂ ಸ್ಪಷ್ಟವಾಗಿ ತೋರುತ್ತೆ. ಯುಧಿಷ್ಠಿರನು ಅರಣ್ಯದಲ್ಲಿದ್ದಾಗ ದಶಸಹಸ್ರ ಬ್ರಾಹ್ಮಣರನ್ನು ಮೃಗಗಳ ಮಾಂಸದಿಂದಲ್ಲವೇ ಸಾಕಿದ್ದು? ತಾವು ನಾಳೆ ಒಂದಿಷ್ಟು ಮಾಂಸ ತಿಂದುನೋಡಿರಿ. ಅದು ಶ್ರೀ ಮಠದಲ್ಲಿ ಗೊತ್ತಾದರೆ ನಿಮ್ಮ ಗತಿ ಏನಾಗುವುದೆಂದು ಮತ್ತೆ ತಿಳಿಯುವಿರಿ. ನಾನು ಹೀಗೆಲ್ಲ ಪ್ರಸ್ತಾಪಿಸುವುದರಿಂದ ಮಾಂಸಾಹಾರ ಮದ್ಯಪಾನ ಮಾಡಬೇಕೆಂದು ನನ್ನ ಮತವೆಂದು ತಿಳಿದುಕೊಳ್ಳಬೇಡಿರಿ. ನನ್ನ ಮತ ಹಾಗಿಲ್ಲ. ಆದರೆ ಪೂರ್ವಕಾಲದಲ್ಲಿ ಬ್ರಾಹ್ಮಣರಿಗೆ ಮಾಂಸಾಹಾರ, ಮದ್ಯಪಾನ ಏಕೆ ಬೇಕಿತ್ತು? ಈಗ ಏಕೆ ಬೇಡ? ಪೂರ್ವಕಾಲದಲ್ಲಿ ಬ್ರಾಹ್ಮಣರೂ ಋಷಿಗಳೂ ಮುಂತಾದವರು ಸಮುದ್ರ ಪ್ರಯಾಣ ಮಾಡಿ ಬೇರೆ ಬೇರೆ ರಾಜ್ಯಗಳಿಗೆಲ್ಲ ಹೋದ ಸಂಗತಿಗಳು ನಮ್ಮ ವೇದಶಾಸ್ತ್ರ ಪುರಾಣಗಳಲ್ಲಿ ಕಂಡುಬರುವುದಲ್ಲದೆ, ಅವರು ಹೋಗಿದ್ದರೆಂಬುದರ ದೃಷ್ಟಾಂತಗಳು ಈಗಲೂ ಕಂಡುಬರುತ್ತವೆ. ಹಾಗಾದರೆ ಪೂರ್ವಕಾಲದಲ್ಲಿ ಏಕೆ ಸಮುದ್ರ ಪ್ರಯಾಣಗಳನ್ನು ಮಾಡಬಹುದಿತ್ತು? ಈಗೇಕೆ ಕೂಡದು? ಕೆಲವು ಸಂಗತಿಗಳಲ್ಲಿ ವಿಧವೆಯರಿಗೆ ಪುನರ್ವಿವಾಹವಾಗಬಹುದೆಂದು ಶಾಸ್ತ್ರ ವಿಧಿ ಇದೆ. ಅಂತಹ ಸಂಗತಿಗಳು ಸಂಭವಿಸಿದರೆ ಈಗ ಏಕೆ ಆ ಪುನರ್ವಿವಾಹಗಳಾಗಬಾರದು? ಈ ಸಂಗತಿಗಳನ್ನೆಲ್ಲ ಮಠಾಧಿಪತಿಗಳು ಆಲೋಚಿಸಬೇಡವೇ?”

ಗ: “ಇಂತಹ ಸಂಗತಿಗಳಲ್ಲಿ ತಮ್ಮ ಅಭಿಪ್ರಾಯವೇನು?”

ಬಾ: “ನನ್ನೊಬ್ಬನ ಅಭಿಪ್ರಾಯದಿಂದೇನು? ಅನೇಕರ ಅಭಿಪ್ರಾಯವೇ ಮುಖ್ಯವಾದದ್ದು. ನಡತೆಯ ಸಕಲಶಾಸ್ತ್ರಗಳೂ ಕ್ರಮಗಳೂ ಆಯಾ ಕಾಲಸ್ಥಿತಿ ಮನುಷ್ಯರ ಸ್ಥಿತಿ ಇವುಗಳನ್ನನುಸರಿಸಿ ಮಾಡಲ್ಪಟ್ಟವುಗಳಾಗಿವೆ ಎಂದು ಆ ಶಾಸ್ತ್ರಗಳಿಂದಲೇ ಆ ಕ್ರಮಗಳಿಂದಲೇ ತೋರುತ್ತೆ. ಎಲ್ಲಾ ಕಾರ್ಯಗಳಲ್ಲಿಯೂ ತಾರತಮ್ಯ ವಿಚಾರಿಸಬೇಕು. ಹಿಟ್ಟೂ ಬೂದಿಯೂ ಒಂದೇ ಎಂದು ಹೇಳಬಾರದು. ಈಗನ ಕಾಲಸ್ಥಿತಿಯೂ ಜನರ ಸ್ಥಿತಿಯೂ ಏನು? ಈ ಬಿ.ಎ. ಪರೀಕ್ಷೆಗಳೂ, ಎಮ್.ಎ., ಸಿ.ಎಸ್. ಮುಂತಾದ ಪರೀಕ್ಷೆಗಳೂ ಪ್ರಾಚೀನ ಕಾಲದಲ್ಲೆಲ್ಲಿದ್ದುವು? ಈಗಿನ ಕಾಲದಲ್ಲಿ ಯಾವ ಪರೀಕ್ಷೆ ಕೊಟ್ಟರೂ ಏನು ಮಾಡಿದರೂ ಕಾಲಕ್ಷೇಪಕ್ಕೆ ತಾನೇ ಮಾರ್ಗ ಕಾಣದೆ, ಕೆಲವರು ಬೊಂಬಾಯಿಗೊ, ಕೆಲವರು ಮದರಾಸಿಗೊ, ಕೆಲವರು ವಿಲಾಯತಿಗೊ, ಕೆಲವರು ಇನ್ನೂ ಬೇರೆ ರಾಜ್ಯಗಳಿಗೆ ಹೋಗುತ್ತಾರೆ. ಅಲ್ಲಿ ಅನೇಕ ಕಷ್ಟಪಡುತ್ತಾರೆ. ಇದೆಲ್ಲ ಏಕೆ? ಮನೆಯಲ್ಲಿಯೇ ಬೇಕಾದಷ್ಟು ಸುಖ, ಬೇಕಾದ ಕಾಲಕ್ಷೇಪದ ಮಾರ್ಗ ಬೇರೆ ಇದ್ದರೂ, ಹೀಗೆ ಮಾಡುತ್ತಾರೇನು? ನಿರ್ವಾಹವಿಲ್ಲದೆ ಸಂಕಟಕ್ಕೆ ಅನೇಕ ತರದಿಂದ ವೃದ್ಧಿಯ ಮಾರ್ಗವನ್ನು ನೋಡುತ್ತಾರೆ. ನೋಡಿದರೇನಾಯಿತು? ಶಾಸ್ತ್ರ ವಿರುದ್ಧವಾದ ದುಷ್ಕರ್ಮಗಳನ್ನೇನೂ ಮಾಡಲಿಲ್ಲವಷ್ಟೆ? ಕಮಲಪುರದ ಅಸಿಸ್ಟಂಟ ಕಲೆಕ್ಟರ ಭಾಸ್ಕರರಾಯರು ವಿಲಾಯತಿಗೆ ಹೋಗಿ ಬಂದರು. ಶಾಸ್ತ್ರವಿರುದ್ಧವಾದ ಒಂದೇ ಕಾರ್ಯವನ್ನಾದರೂ ಅವರು ಮಾಡಿದ್ದಾರೆಯೇ? ಈಗಲೂ ಅವರು ಎಂತಹ ಸತ್ಕರ್ಮಿಯೂ ನಿಷ್ಠಾವಂತರೂ ಆಗಿದ್ದಾರೆ! ಅವರು

ಇಂದಿರಾಬಾಯಿ ಎಂಬಾಕೆಯ ಸಂಗಡ ಪುನರ್ವಿವಾಹ ಮಾಡಿಕೊಂಡರು. ಆದರೇನಾಯಿತು? ಅದು ಶಾಸ್ತ್ರವಿರುದ್ಧವಾದ್ದೆ? ಆ ಹುಡುಗಿಯು ಸಂತರ ಬಲೆಯಲ್ಲಿ ಸಿಕ್ಕಿ ದುಷ್ಕರ್ಮಗಳನ್ನು ಮಾಡಿ ಅಧೋಗತಿ ಹೊಂದಬೇಕಿತ್ತೆ? ಅಮೃತರಾಯರು, ಅವರ ಪತ್ನಿ ಜಲಜಾಕ್ಷಿ ಇವರ ಕೃತ್ಯಗಳು ಎಂಥವು? ತ್ರಿಭುವನಗಳಲ್ಲಿಯೂ ಹೊಗಳಿಕೆಗೆ ಯೋಗ್ಯವಾದವುಗಳಲ್ಲವೇ? ಸುಶೀಲಾಬಾಯಿಗೆ ಬಂದ ಕಷ್ಟಗಳ್ಯಾವುವು? ಅವಳು ಒಳ್ಳೇ ಸ್ಥಿತಿಗೆ ಬರಲೇಬಾರದಿತ್ತೇ? ಇಂತಹ ಸಂಗತಿಗಳನ್ನೆಲ್ಲ ಶ್ರೀ ಗುರುಗಳು ಚೆನ್ನಾಗಿ ಆಲೋಚಿಸಿರುತ್ತಿದ್ದರೆ, ಕಮಲಪುರದ ಹಾಡು ಈಗಿನ ಹಾಗೆ ಆಗುತ್ತಿದ್ದಿಲ್ಲ. ಆದರೆ ಯಥಾರ್ಥದಲ್ಲಿ ಶ್ರೀ ಗುರುಗಳು ಯಾವನೊಬ್ಬನ ಕೇಡನ್ನು ಬಯಸಿದ್ದೂ ಇಲ್ಲ, ಬಯಸಲಿಕ್ಕೆ ಕಾರಣವೂ ಇಲ್ಲ. ಇಂತಹ ಸಂಗತಿಗಳನ್ನೆಲ್ಲ ಪಾರುಪತ್ಯಗಾರರೂ ಊರೂರ ಸಭೆಯವರೂ ಶ್ರೀ ಗುರುಗಳ ತಿಳುವಳಿಕೆಗೆ ತಂದು ಸುಖಕಷ್ಟ, ಕಾಲಸ್ಥಿತಿ ಮುಂತಾದ ವಿಷಯಗಳನ್ನು ವಿನಯಪೂರ್ವಕವಾಗಿ ಆಗಾಗ್ಗೆ ಹೇಳಿಕೊಳ್ಳುತ್ತಿದ್ದರೆ, ನಿಶ್ಚಯವಾಗಿಯೂ ಅವರ ದಯಾಪ್ರಸಾದವುಂಟಾಗದಿರದು. ಅನೇಕರ ಅಭಿಪ್ರಾಯ ಹೀಗಿದೆ.''

* * *

ಈ ಪ್ರಬಂಧವನ್ನು ಶ್ರೀ ಗುರುಗಳು ಓದಿನೋಡಿ ಇದರಲ್ಲಿ ಪ್ರಸ್ತಾಪಿಸಿದ ಕೆಲವು ಸಂಗತಿಗಳು ತಾನು ಆಲೋಚಿಸಬೇಕಾದವುಗಳೆ; ಹೇಗೂ ಇನ್ನೊಂದು ಸಭೆಯನ್ನು ಕೂಡಿಸಬೇಕೆಂದು ನಿಶ್ಚಯಿಸಿರುವುದರಿಂದ ಆ ಸಭೆಯು ಕೂಡಿದಾಗ ಆ ಸಂಗತಿಗಳನ್ನಾಲೋಚಿಸ ಬಹುದೆಂದು ಗ್ರಹಿಸಿ, ಆ ಸಮಯದಲ್ಲಿ ಈ ಪ್ರಬಂಧವನ್ನು ನೆನಪಿಗೆ ತರಬೇಕಾಗಿ ಪಾರುಪತ್ಯಗಾರನಿಗೆ ಅಪ್ಪಣೆಕೊಟ್ಟು, ಆ ಪತ್ರವನ್ನು ದಫ್ತರಿನಲ್ಲಿಡುವುದಕ್ಕೋಸ್ಕರ ಅವನ ಕೈಯಲ್ಲಿ ಕೊಟ್ಟರು.

ಆ ಸಭೆಯು ಈವರೆಗೆ ನೆರೆಯಲಿಲ್ಲ; ಕಾರಣವೇನೆಂದು ಯಾರೊಬ್ಬನಿಗೂ ಗೊತ್ತಾಗಲೂ ಇಲ್ಲ. ಸಭೆ ನೆರೆದಾಗ ಶ್ರೀ ಗುರುಗಳಿಗೆ ಸಕಲ ಸಂಗತಿಗಳನ್ನು ವಿವರವಾಗಿ ಅರಿಕೆಮಾಡಿ ಪ್ರತಿಯೊಂದು ಸಂಗತಿಯನ್ನು ಚೆನ್ನಾಗಿ ತರ್ಕಿಸಿ ಬಹಿಷ್ಕಾರದ ನಿರೂಪಗಳನ್ನು ಶ್ರೀ ಗುರುಗಳವರಿಂದ ದುರ್ಬಲಪಡಿಸಿ, ಭೀಮರಾಯನನ್ನು ಧರ್ಮವಿಚಾರಕಸ್ಥಾನದಿಂದ ತಪ್ಪಿಸಿ, ಸಂಸ್ಕೃತಭಾಷೆಯಲ್ಲಿ ತೇರ್ಗಡೆಪಟ್ಟ ಒಬ್ಬ ಬಿ.ಎ.ಗೆ ಧರ್ಮವಿಚಾರಕ ಸ್ಥಾನವನ್ನು ಕೊಡಿಸಿ, ಎಲ್ಲಾ ಕಡೆಗಳಲ್ಲಿಯೂ ಪುನಃ ಅನ್ಯೋನ್ಯತೆಗೆ ಸಮಾಧಾನ ಉಂಟುಮಾಡದೆ ಇರಲಾರೆವೆಂದು, ಅನೇಕರು ಬಹಿರಂಗವಾಗಿ ಕಂಡಕಂಡಲ್ಲಿ ಮಾತನಾಡುವುದನ್ನು ಕೇಳಿ ಭೀಮರಾಯನು ಕಳವಳಿಸಿ, ಈ ವಿದ್ಯಮಾನವನ್ನು ಅಂಬಾಬಾಯಿಗೆ ತಿಳುಹಿಸಲು, ಆಕೆಯು ಒಂದೆರಡು ಗಳಿಗೆ ವರೆಗೆ ಆಲೋಚಿಸಿ, ''ನಮ್ಮ ದಶಾನಾಥನು ನಮ್ಮ ಕೈಯನ್ನು ಬಿಟ್ಟಿರುವುದಾಗಿ ನಾನು ದೃಢವಾಗಿ ನಂಬುತ್ತೇನೆ. ನಾವೆಷ್ಟು ಹಣ ವೆಚ್ಚಮಾಡಿದರೂ, ಏನು ಮಾಡಿದರೂ, ಇಡೀ ಊರೇ ಒಂದಾದ ಮೇಲೆ ಅವರೆಲ್ಲರೂ ಕೂಡಿ, ಶ್ರೀ ಗುರುಗಳಿಗೆ ಅನೇಕ ನ್ಯಾಯಗಳನ್ನು

ಸೂಚಿಸಿ, ಅವರ ಮನಸ್ಸನ್ನು ತಿರುಗಿಸುವುದು ಯಾವ ದೊಡ್ಡ ಮಾತು? ಇನ್ನು ನಾವು ಸಹಾ ಅವರ ಸಂಗಡ ಸೇರಿರುವುದೇ ಉತ್ತಮ. ನಮಗೀ ಧರ್ಮವಿಚಾರಕಸ್ಥಾನವೂ ಯಾವನೊಬ್ಬನ ಹತ್ತಿರ ಜಗಳವೂ ಬೇಡ. ಇಷ್ಟು ದಿವಸವರೆಗೆ ಜಗಳಾಡಿ ನಷ್ಟಭ್ರಷ್ಟ ಗಳನ್ನನುಭವಿಸಿದ್ದೇ ಸಾಕು. ರತ್ನದಂತಿರುವ ಮಗಳನ್ನು ಸಹಾ ಕಳೆದುಕೊಂಡ ಹಾಗಾಯಿತು; ಈ ಹೊತ್ತೇ ತಮ್ಮ ಧರ್ಮವಿಚಾರಕ ಸ್ಥಾನಕ್ಕೆ ರಾಜಿನಾಮೆಯನ್ನು ಕಳುಹಿಸಬೇಕು. ನಾಳೆಯೇ ನಾವಿಬ್ಬರೂ ಹೋಗಿ, ಅಮೃತರಾಯ, ಜಲಜಾಕ್ಷಿ, ಸುಶೀಲೆ, ಭಾಸ್ಕರರಾಯ, ಇಂದಿರೆ ಇವರ ಕ್ಷಮೆಯನ್ನು ಬೇಡಿ ಅವರೆಲ್ಲರನ್ನು ನಮ್ಮಲ್ಲಿಗೆ ಕರೆದು ತಂದು ಯೋಗ್ಯವಾದ ರೀತಿಯಲ್ಲಿ ಊಟಉಪಚಾರಗಳನ್ನು ಮಾಡಿ ಮುಂದೆ ಸ್ನೇಹದಿಂದಲೂ ಪ್ರೀತಿಯಿಂದಲೂ ಇರೋಣ; ಇದೇ ನಮ್ಮ ಮುಂದಿನ ಪರಿಣಾಮ" ಎಂದು ಹೇಳಲು, ಭೀಮರಾಯನು ಪೂರ್ಣವಾಗಿ ಒಪ್ಪಿ ಧರ್ಮ ವಿಚಾರಕ ಸ್ಥಾನಕ್ಕೆ ಅಂದೇ ರಾಜಿನಾಮೆ ಕಳಹಿಸಿ ಮಾರಣೆ ದಿನ ಪತ್ನಿಸಮೇತನಾಗಿ ಅಮೃತರಾಯನಲ್ಲಿಗೆ ಹೋಗಿ ಇಬ್ಬರೂ ವಿನಯಾತಿಶಯದೊಡನೆ ದೋಷಾನುಸಂಧಾನವನ್ನು ಮಾಡಿ ಕ್ಷಮೆ ಬೇಡಿ, ಅವರೆಲ್ಲರನ್ನು ಬಹು ಸಂತೋಷದಿಂದ ಮನೆಗೆ ಕರೆದು ತಂದು ಊಟ ಉಪಚಾರಗಳನ್ನು ಮಾಡಿದರು. ಅಂದಿನಿಂದವರೆಲ್ಲರೂ ಸುಖದಲ್ಲಿರುವರು.

&

ಗುಲ್ವಾಡಿ ವೆಂಕಟರಾಯರ 'ಇಂದಿರಾಬಾಯಿ' ಕನ್ನಡದ ಮೊದಲ ಕಾದಂಬರಿ. ೧೯ ನೇ ಶತಮಾನದ ಉತ್ತರಾರ್ಧದಲ್ಲಿ ವಿಧವಾ ವಿವಾಹ ಎಂದರೆ ಅದೊಂದು ಕ್ರಾಂತಿಕಾರಿ ಹೆಜ್ಜೆ. ಹಾಗಂತ ಈ ಕಾದಂಬರಿಯ ಕಥಾವಸ್ತು ಸರಳ ರೇಖೆಯಂತಿರದೆ, ಮನುಷ್ಯನ ಜಟಿಲ ಸ್ವಭಾವದ ಸಂಕೀರ್ಣ ಸ್ಥಿತಿಯನ್ನು ವಿವರ ಸಮೃದ್ಧಿಯಿಂದ ಕಲಾತ್ಮಕವಾಗಿ ಚಿತ್ರಿಸಿದೆ.

ಭಾಷೆ, ನಿರೂಪಣಾ ಶೈಲಿ ಆಕರ್ಷಕವಾಗಿದೆ. ಸರಳವಾಗಿದೆ. ಸಲೀಸಾಗಿ ಓದಿಸಿಕೊಂಡು ಹೋಗುತ್ತದೆ. ಆ ಕಾಲಕ್ಕೆ ನಮ್ಮನ್ನು ಕರೆದೊಯ್ಯುತ್ತದೆ. ಮೊದಲ ಶ್ರೇಷ್ಠ ಕೃತಿಯಾಗಿ ಮಾತ್ರವಲ್ಲ, ಕನ್ನಡದಲ್ಲಿ ಕಾದಂಬರಿ ಪ್ರಕಾರ ಉತ್ತರೋತ್ತರವಾಗಿ ಬೆಳೆಯಲು ನಾಂದಿ ಹಾಡಿದೆ. ಶಿವರಾಮ ಕಾರಂತರು ಅದನ್ನು ಕೃತಜ್ಞತೆಯಿಂದ ಸ್ಮರಿಸಿದ್ದಾರೆ. ಆ ಕಾಲಕ್ಕೆ ಅದೊಂದು ಪ್ರಬುದ್ಧ ಕೃತಿ ಎಂದೂ ಕರೆದಿದ್ದಾರೆ. ಕನ್ನಡದಲ್ಲಿ ಕಾದಂಬರಿ ಪ್ರಕಾರದ ಪಥವನ್ನು ರೂಪಿಸಿದ ಕಾರಣಕ್ಕೆ ಎಲ್ಲ ಕಾಲಕ್ಕೂ ಸಲ್ಲುವಕೃತಿಯಾಗಿ 'ಇಂದಿರಾಬಾಯಿ'ಗೆ ತನ್ನದೇ ಆದ ಮಹತ್ವ ಇದೆ.

–ಡಾ॥ ವಸುಂಧರಾ ಭೂಪತಿ
ಅಧ್ಯಕ್ಷರು

ಉಚಿತ ಓದಿಗಾಗಿ